# ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರ ರೋಜ್‌ಗಾರ್ ಯೋಜನೆಯ ಅಧ್ಯಯನ

ಅಭಿವೃದ್ಧಿ ಅಧ್ಯಯನ (ಸಮಾಜಶಾಸ್ತ್ರ) ವಿಭಾಗದಲ್ಲಿ ಪಿಎಚ್‌ಡಿ ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ

**ಮಹಾಪ್ರಬಂಧ**


ಸಂಶೋಧಕರು

**ಶ್ರೀ ಸಿದ್ದೇಗೌಡ**
ಎಂ.ಎ. ಬಿ.ಎಡ್

ಶ್ರೀ ಬಿ.ಆರ್ ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ, ಜಿ. ಬೆಳಗಾವಿ.


ನೊಂದಣಿ ಸಂಖ್ಯೆ : BRDSH/00126


ಮಾರ್ಗದರ್ಶಕರು

**ಡಾ. ಶಾಮಲಾ. ಭೀ. ದಾಸೋಗ**
ಎಂ.ಎ, ಪಿಎಚ್.ಡಿ
ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,
ಎಮ್.ಎಮ್.ಎಸ್. ಕಲಾ, ವಾಣಿಜ್ಯ,
ವಿಜ್ಞಾನ ಹಾಗೂ ಗೃಹ ವಿಜ್ಞಾನ ಮಹಾವಿದ್ಯಾಲಯ, ಬೆಳಗಾವಿ.



647



ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ಹಂಪಿ
೨೦೧೪

# ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರ ರೋಜ್‌ಗಾರ್ ಯೋಜನೆಯ ಅಧ್ಯಯನ

ಅಭಿವೃದ್ಧಿ ಅಧ್ಯಯನ (ಸಮಾಜಶಾಸ್ತ್ರ) ವಿಭಾಗದಲ್ಲಿ ಪಿಎಚ್‌ಡಿ ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ

**ಮಹಾಪ್ರಬಂಧ**

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಂಶೋಧಕರು

**ಶ್ರೀ ಸಿದ್ದೇಗೌಡ**
ಎಂ.ಎ, ಬಿ.ಎಡ್.

ಶ್ರೀ ಬಿ.ಆರ್ ದರೂರ ಸಂಶೋಧನಾ ಕೇಂದ್ರ,
ಹಾರೋಗೇರಿ, ಜಿ. ಬೆಳಗಾವಿ.

ನೊಂದಣಿ ಸಂಖ್ಯೆ : **BRDSH/00126**

ಮಾರ್ಗದರ್ಶಕರು

**ಡಾ. ಶಾಮಲಾ. ಭೀ. ದಾಸೋಗ**
ಎಂ.ಎ, ಪಿಎಚ್,ಡಿ
ಮುಖ್ಯಸ್ಥರು. ಸಮಾಜಶಾಸ್ತ್ರ ವಿಭಾಗ,
ಎಮ್.ಎಮ್.ಎಸ್. ಕಲಾ, ವಾಣಿಜ್ಯ,
ವಿಜ್ಞಾನ ಹಾಗೂ ಗೃಹ ವಿಜ್ಞಾನ ಮಹಾವಿದ್ಯಾಲಯ, ಬೆಳಗಾವಿ.

ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ, ಹಾರೋಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ ಹಂಪಿ.

೨೦೧೪

## ಪ್ರಮಾಣ ಪತ್ರ

**ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರ ರೋಜ್‌ಗಾರ್ ಯೋಜನೆಯ ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾ ಪ್ರಬಂಧವನ್ನು ಡಾ.ಶಾಮಲಾ.ಭೀ.ದಾಸೋಗ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಅಭಿವೃದ್ಧಿ ಅಧ್ಯಯನ ವಿಭಾಗದ ಸಮಾಜಶಾಸ್ತ್ರ ವಿಷಯದಲ್ಲಿ ಪಿ.ಎಚ್‌ಡಿ ಪದವಿಗಾಗಿ ಹಾರೂಗೇರಿಯ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದ್ದೇನೆ. ಈ ಪ್ರಬಂಧವನ್ನು ನಾನು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಿದ್ದೇಗೌಡ** ಎಂ.ಎ, ಬಿ.ಎಡ್.
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ, ತಾ. ರಾಯಬಾಗ, ಜಿ. ಬೆಳಗಾವಿ.

**ಸ್ಥಳ** : ಹಾರೂಗೇರಿ
**ದಿನಾಂಕ:** / /೨೦೧೪

## ಧೃಢೀಕರಣ ಪತ್ರ

ಶ್ರೀ ಸಿದ್ದೇಗೌಡ ಇವರು **'ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರ ರೋಜ್‌ಗಾರ್ ಯೋಜನೆಯ ಅಧ್ಯಯನ'** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಅಭಿವೃದ್ಧಿ ಅಧ್ಯಯನದ ವಿಭಾಗದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್‌ಡಿ ಪದವಿಗಾಗಿ ಹಾರೂಗೇರಿಯ ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿರುವರು. ಪ್ರಸ್ತುತ ಮಹಾ ಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿ ಅಥವಾ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಧೃಢೀಕರಿಸುತ್ತೇನೆ.

**ಡಾ. ಶಾಮಲಾ.ಭೀ. ದಾಸೋಗ**
**ಎಂಎ, ಪಿಎಚ್‌ಡಿ.**
**ಮಾರ್ಗದರ್ಶಕರು**
ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,
ಎಮ್.ಎಮ್.ಎಸ್.ಕಲಾ, ವಾಣಿಜ್ಯ,
ವಿಜ್ಞಾನ ಹಾಗೂ ಗೃಹ ವಿಜ್ಞಾನ ಮಹಾವಿದ್ಯಾಲಯ,
ಬೆಳಗಾವಿ.

**ಸ್ಥಳ :** ಹಾರೂಗೇರಿ
**ದಿನಾಂಕ:** / /೨೦೧೪

# ಪರಿವಿಡಿ

- ಕೋಷ್ಟಕಗಳ ಪಟ್ಟಿ

# ಕೋಷ್ಟಕಗಳ ಪಟ್ಟಿ

* * *

# ಅಧ್ಯಾಯ –೦೧

# ಅಧ್ಯಯನದ ಪರಿಚಯ

## ೧.೧ ಪ್ರಸ್ತಾವನೆ:

ವಿಶ್ವಸಂಸ್ಥೆಯು ಸದಸ್ಯ ರಾಷ್ಟ್ರಗಳ ಅಭಿವೃದ್ಧಿ ಸೂಚ್ಯಂಕವನ್ನು ಪ್ರತಿ ವರ್ಷ ಬಿಡುಗಡೆಯನ್ನು ಮಾಡುತ್ತಿದ್ದು, ಆ ರಾಷ್ಟ್ರಗಳ ಬಡತನ ಹೋಗಲಾಡಿಸುವಿಕೆಗೆ ಸಲಹೆಗಳನ್ನು ನೀಡುತ್ತಾ ಬಂದಿದೆ. ಅಂತರ ರಾಷ್ಟೀಯ ಮಟ್ಟದಲ್ಲಿಯೂ ಬಡತನ ನಿವಾರಣಾ ಕಾರ್ಯಕ್ರಮಗಳು ಆಯಾ ದೇಶದಲ್ಲಿ ಬೇರೆ ಬೇರೆಯಾದ ರೀತಿಯಲ್ಲಿರುವುದನ್ನು ಕಾಣುತ್ತೇವೆ. ಅಮೇರಿಕಾ, ಮಲೇಷಿಯಾ, ಬ್ಯಾಂಗ್ಲಾದೇಶ, ಕೆನಡಾ, ಇನ್ನೂ ಮುಂತಾದ ದೇಶಗಳು ನಗರದ ಬಡತನವನ್ನು ಹೋಗಲಾಡಿಸಲು ವಿವಿಧ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ಕಾಣುತ್ತೇವೆ. ಅಮೇರಿಕಾ ದೇಶವು ವಿಶ್ವದಲ್ಲಿಯೇ ಹೆಚ್ಚು ಆರ್ಥಿಕವಾಗಿ ಬಲಾಢ್ಯತೆಯನ್ನು ಹೊಂದಿ ಬಲಿಷ್ಠ ರಾಷ್ಟ್ರವೆನಿಸಿದ್ದರೂ ಸಹ ಈ ದೇಶದಲ್ಲಿಯೂ ನಾವು ಟಾಫ್ ಟೆನ್ ನಗರ ಬಡತನವನ್ನು ನೋಡುತ್ತೇವೆ ಅವುಗಳೆಂದರೆ: ಮಾರಿಸ್‌ಟನ್, ಕಂಬರ್‌ಲ್ಯಾಂಡ್, ಜೋನ್ಸ್‌ಬೋರೋ, ಹಾಟ್‌ಸ್ಪ್ರಿಂಗ್, ಮನ್‌ರೋ, ಗಾಡ್ಸ್‌ಡೆನ್, ಆಲ್‌ಬೇನಿ, ವಲ್‌ದೋಸ್ತಾ, ಬ್ರೌನ್ಸಿ ವಿಲ್ಲೆ ಹಾಗೂ ಮೆಕ್‌ಅಲಿನ್, ಇವುಗಳು ವಿಶ್ವದ ಟಾಫ್‌ಟೆನ್ ಬಡತನದ ಪ್ರದೇಶಗಳಾಗಿರುವುದನ್ನು ಕಾಣಬಹುದು. ಈ ದೇಶಗಳು ಸಹ ಹಲವು ಬಡತನ ನಿವಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ.

ಭಾರತದಲ್ಲಿ ಸರ್ವವ್ಯಾಪಕವಾಗಿರುವ ಬಡತನವನ್ನು ನಿವಾರಣೆ ಮಾಡುವ ನಿಮಿತ್ತ ಬ್ರಿಟಿಷ ಆಳರಸರ ಆಳ್ವಿಕೆಯಲ್ಲಿ ಯಾವುದೇ ಗಂಭಿರವಾದ ಪ್ರಯತ್ನವನ್ನು ಮಾಡದೇ ಇದ್ದರೂ ಕೂಡಾ ಸ್ವಾತಂತ್ರ್ಯಾ ನಂತರ ಈ ನಿಟ್ಟಿನಲ್ಲಿ ಕೆಲವು ಹೆಜ್ಜೆಗಳನ್ನಿಡಲಾಗಿದೆ. ಸ್ವತಂತ್ರ ಭಾರತ ಸರ್ಕಾರವು ಬಡತನವನ್ನು ಎದುರಿಸುವಲ್ಲಿ ಕೈಗೊಂಡ ಮುಖ್ಯ ಕ್ರಮಗಳು.

- ಪಂಚವಾರ್ಷಿಕ ಯೋಜನೆಗಳು.
- ಬ್ಯಾಂಕ್‌ಗಳ ರಾಷ್ಟ್ರೀಕರಣ.
- ೨೦ ಅಂಶಗಳ ಕಾರ್ಯಕ್ರಮಗಳು.
- ಜವಾಹರ ರೋಜ್ಗಾರ್ ಯೋಜನೆ ಮತ್ತು ಇತರ ಯೋಜನೆಗಳು.

ರಾಷ್ಟ್ರೀಯ ಅಭಿವೃದ್ಧಿ ಉದ್ದೇಶಕ್ಕೆಂದು "ರಾಷ್ಟ್ರೀಕರಣ" ಗೊಳಿಸುವ ಪರಂಪರೆ ಆರಂಭವಾದದ್ದು ೧೯೬೯ರಲ್ಲಿ ದಿ. ಇಂದಿರಾಗಾಂಧಿಯವರು ಪ್ರಧಾನ

ಮಂತ್ರಿಗಳಾಗಿದ್ದಾಗ ೧೪ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲಾಯಿತು. ರಾಷ್ಟ್ರೀಕರಣದ ಹಿಂದಿನ ಮುಖ್ಯ ಉದ್ದೇಶವು ದುರ್ಬಲ ವರ್ಗಗಳಿಗೆ ಸಾಲ ಸೌಲಭ್ಯ ನೀಡುವುದೇ ಆಗಿತ್ತು. ರಾಷ್ಟ್ರೀಕರಣವು ತನ್ನದೇ ಆದ ಕೆಲವು ದೌರ್ಬಲ್ಯಗಳಿಗೆ ದೋಷಗಳಿಗೆ ತುತ್ತಾಗಿ ನಿರೀಕ್ಷಿಸಿದಷ್ಟು ಪ್ರಗತಿ ಸಾಧಿಸಲಾಗಲಿಲ್ಲ. ಕಾರಣ ಸಾಮರ್ಥ್ಯದ ಕೊರತೆ, ಸಾರ್ವಜನಿಕ ಹಿತದ ಬದ್ಧತೆಯ ಕೊರತೆಯಿಂದಾಗಿ ಅದು ಕೆಲವು ರಂಗಗಳಲ್ಲಿ ವಿಫಲಗೊಂಡಿತು. ಹೊಸ ಹೊಸ ಶಾಖೆಗಳನ್ನು ತೆರೆಯುವ ಹಾಗೂ ದುರ್ಬಲ ವರ್ಗಗಳಿಗೆ ಸಾಲ ನೀಡುವ ಎರಡು ರಂಗಗಳಲ್ಲಿ ಮಾತ್ರ ಅದರಿಂದ ವಿಶೇಷ ಸಾಧನೆ ಕಂಡಿತು.[೧]

**೨೦ ಅಂಶಗಳ ಕಾರ್ಯಕ್ರಮ :**

೧೯೭೫ರ ಜುಲೈ ತಿಂಗಳಿನಲ್ಲಿ ಆಗಿನ ಭಾರತದ ಪ್ರಧಾನಿ ಇಂದಿರಾಗಾಂಧಿಯವರು ಬಡತನ ಮತ್ತು ಸಮಾಜದ ದುರ್ಬಲ ವರ್ಗಗಳನ್ನು ಮೇಲಕ್ಕೆತ್ತಲು ೨೦ ಅಂಶಗಳ ಕಾರ್ಯಕ್ರಮಗಳನ್ನು ಘೋಷಿಸಿದ್ದರು. ಈ ಕಾರ್ಯಕ್ರಮವು ಹೆಚ್ಚಾಗಿ ಬಡವರಿಗೆ ಮತ್ತು ಮಧ್ಯಮ ವರ್ಗಗಳಿಗೆ ಸಹಾಯ ಕಲ್ಪಿಸುವುದಾಗಿತ್ತು. ಹಾಗೆಯೇ ಯುವಕರಿಗೆ ಉದ್ಯೋಗವಕಾಶಗಳು, ಪರಿಸರ ಸಂರಕ್ಷಣೆ, ಕೊಳಚೆ ಪ್ರದೇಶಗಳ ನೈರ್ಮಲೀಕರಣ ಇನ್ನೂ ಮುಂತಾದ ಅಂಶಗಳಿಗೆ ಒತ್ತು ನೀಡಿತ್ತು. ಒಟ್ಟಿನಲ್ಲಿ ಹೇಳುವುದಾದರೆ ೨೦ ಅಂಶದ ಕಾರ್ಯಕ್ರಮಗಳು ವಿಶೇಷ ಆಸ್ಥೆ ಇಲ್ಲದ್ದರಿಂದ ಅವು ಗ್ರಾಮೀಣ ಹಾಗೂ ನಗರ ಪ್ರದೇಶಗಳೆರಡರಲ್ಲೂ ನಿರೀಕ್ಷಿಸಲಾದ ಫಲ ನೀಡದೇ ವಿಫಲಗೊಂಡವು.

**ಗರೀಬಿ ಹಠಾವೋ ಮತ್ತು ಬೇಕಾರಿ ಹಠಾವೋ ಕಾರ್ಯಕ್ರಮ :**

ಇಂದಿರಾಗಾಂಧಿಯವರು ಪ್ರಧಾನಿಯಾಗಿದ್ದಾಗ ೧೯೭೧ರ ಮಾರ್ಚ್‌ನಲ್ಲಿ ರಾಷ್ಟ್ರೀಯ ಸಾರ್ವತ್ರಿಕ ಚುನಾವಣೆ ಘೋಷಣೆಯಾಗಿ ಗರೀಬಿ ಹಠಾವೋ ಮತ್ತು ೧೯೮೮ ರ ಕಾಂಗ್ರೆಸ್ ಅಧಿವೇಶನದಲ್ಲಿ ಬೇಕಾರಿ ಹಠಾವೋ ಘೋಷಣೆಗಳು ಮೊಳಗಿದವು. ಆದರೆ ಈ ಘೋಷಣೆಗಳು ಕಾರ್ಯರೂಪಕ್ಕೆ ಬಂದಿರುವುದಕ್ಕಿಂತ ಘೋಷಣೆಯಾಗಿ ಉಳಿದಿದ್ದೇ ಹೆಚ್ಚು. ಇಂದಿನ ದಿನಗಳಲ್ಲಿ ಬಡತನವನ್ನು ನಿರ್ಮೂಲನೆಗೊಳಿಸುವುದೆಂಬುದು ಒಂದು ರಾಜಕೀಯ ಘೋಷಣೆಯಾಗಿ ಚುನಾವಣೆಗಳಲ್ಲಿ ಮಹತ್ವದ ಪಾತ್ರವಹಿಸುತ್ತದೆ.[೨]

**ಕನಿಷ್ಠ ಅಗತ್ಯತೆಗಳ ಕಾರ್ಯಕ್ರಮ:**

ಈ ಕಾರ್ಯಕ್ರಮ ಗ್ರಾಮೀಣ ಪ್ರದೇಶದ ಬಡವರಿಗೆ ಹೆಚ್ಚು ಆದ್ಯತೆ ನೀಡಿತು. ೫ನೆಯ ಪಂಚವಾರ್ಷಿಕ ಯೋಜನೆಯು ೧೯೭೪-೭೯ ಅಂಗವಾಗಿ ೧೯೭೪-೭೫ ರಲ್ಲಿ ಈ ಯೋಜನೆಯನ್ನು ಆರಂಭಿಸಲಾಯಿತು. ಈ ಯೋಜನೆಯ ವ್ಯಾಪ್ತಿಯಲ್ಲಿ ನಗರಕ್ಕೆ ಸಂಬಂಧಿಸಿದಂತೆ ನಗರ ಪ್ರದೇಶದ ಕೊಳಚೆ ಪ್ರದೇಶಗಳ ನೈರ್ಮಲೀಕರಣ

ಮುಂತಾದವನ್ನು ಅಳವಡಿಸಿಕೊಳ್ಳಲಾಗಿತ್ತು. ೭ನೇ ಯೋಜನೆ ನಂತರ ಈ ಕಾರ್ಯಕ್ರಮಕ್ಕೆ ಮಹತ್ವ ಲಭಿಸಲಿಲ್ಲ.

ಭಾರತ ರತ್ನ ಸರ್.ಎಂ.ವಿಶ್ವೇಶ್ವರಯ್ಯನವರು ೧೯೩೪ರಲ್ಲಿ "ಭಾರತಕ್ಕೆ ಯೋಜಿತ ಆರ್ಥಿಕತೆ" ಎಂಬ ಗ್ರಂಥವನ್ನು ಪ್ರಕಟಿಸಿದರು. ಪುಸ್ತಕದಲ್ಲಿ ಭಾರತದ ಪುನಃ ನಿರ್ಮಾಣಕ್ಕೆ ಒಂದು ಯೋಜನೆಯನ್ನು ಜನತೆಯ ಮುಂದಿಟ್ಟರು ಮತ್ತು "ಯೋಜಿಸಿರಿ ಇಲ್ಲವೇ ಹಾಳಾಗಿರಿ" ಎಂಬ ಘೋಷಣೆ ಮಾಡಿದರು. ಇದರ ಪರಿಣಾಮವಾಗಿ ಭಾರತದಲ್ಲಿ ಪಂಚವಾರ್ಷಿಕ ಯೋಜನೆಯ ರೂಪರೇಷೆಗಳನ್ನು ಹಾಕಿಕೊಳ್ಳಲು ಪ್ರಾರಂಭಿಸಲಾಯಿತು. ೧೯೪೪ರಲ್ಲಿ ಮುಂಬಯಿ ಯೋಜನೆಯು ಪ್ರಾರಂಭವಾಯಿತು. ಇದರಲ್ಲಿ ಎಂಟು ಜನ ಉದ್ದಿಮೆದಾರರು ಭಾರತದ ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಯ ಪ್ರಕಟಣೆಯನ್ನು ಹೊರಡಿಸಿದರು. ನಂತರದ ದಿನಗಳಲ್ಲಿ ಎಂ.ಎನ್.ರಾಯ್ ಎಂಬುವವರು ಜನಸಾಮಾನ್ಯರ ಯೋಜನೆಯನ್ನು ಪ್ರಕಟಿಸಿದರು.[೩]

ಹೀಗೆ ಯೋಜನೆಗಳ ಮೂಲಕ ದೇಶದ ಅಭಿವೃದ್ಧಿಯನ್ನು ಸಾಧಿಸುವುದು ಸರ್ಕಾರದ ವಿಚಾರವಾಗಿತ್ತು. ೧೯೪೭ರಲ್ಲಿ ಭಾರತವು ಸ್ವಾತಂತ್ರ್ಯ ಗಳಿಸುವ ಮುಂಚೆ ಕಾಂಗ್ರೆಸ್ ಪಕ್ಷವು "ರಾಷ್ಟ್ರೀಯ ಯೋಜನಾ ಸಮಿತಿ"ಯನ್ನು ಸ್ಥಾಪಿಸಿತು. ಇವೆಲ್ಲವುಗಳ ಪರಿಣಾಮವಾಗಿ ೧೯೫೦ರಲ್ಲಿ "ರಾಷ್ಟ್ರೀಯ ಯೋಜನಾ ಆಯೋಗ" ಸ್ಥಾಪಿಸಲಾಯಿತು. ೧೯೫೧ ರಿಂದ ೨೦೧೨ ರವರೆಗೆ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ ದೇಶದ ಅಭಿವೃದ್ಧಿಗೆ ಮಾರ್ಗದರ್ಶನವನ್ನು ನೀಡಲಾಗುತ್ತಿದೆ.

**ಕರ್ನಾಟಕದಲ್ಲಿ ಯೋಜನೆ :**

ಸರ್.ಎಂ. ವಿಶ್ವೇಶ್ವರಯ್ಯನವರು ಭಾರತದ "ಆರ್ಥಿಕ ಯೋಜನೆ" ಎಂಬ ಗ್ರಂಥ ಪ್ರಕಟಿಸಿದ ನಂತರ ಕರ್ನಾಟಕ ರಾಜ್ಯದ ಆರ್ಥಿಕತೆಗೆ ವಿಶೇಷ ಮಹತ್ವ ಬಂದಿತು. ಅವರು ರಾಜ್ಯದ ಆರ್ಥಿಕತೆ ಅಭಿವೃದ್ಧಿಗೆ ಕೈಗಾರಿಕಾ ಪ್ರಗತಿ ಪ್ರಾಮುಖ್ಯತೆಯನ್ನು ವಿವರಿಸಿದರು. "ಕೈಗಾರೀಕರಣಗೊಳ್ಳು ಅಥವಾ ನಾಶಹೊಂದು" ಎಂಬುದು ಅವರ ಜನಪ್ರಿಯಗೊಳಿಸಿದ ಮಂತ್ರವಾಗಿತ್ತು. ೧೯೧೧ರಿಂದ ೧೯೩೧ರ ವರೆಗೆ ವಿಶ್ವೇಶ್ವರಯ್ಯನವರು ನಡೆಸಿದ ಆರ್ಥಿಕ ಸಮ್ಮೇಳನಗಳಲ್ಲಿ ಯೋಜನೆ ಮತ್ತು ಆರ್ಥಿಕ ಅಭಿವೃದ್ಧಿಯ ಬಗ್ಗೆ ವಿವರಿಸಿದರು. ಇಡೀ ದೇಶದಲ್ಲಿಯೇ "ಮೈಸೂರು ರಾಜ್ಯ"ವು ಆರ್ಥಿಕ ಯೋಜನೆಯನ್ನು ರೂಪಿಸಿದ ಮೊದಲ ರಾಜ್ಯ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.[೪]

ಒಟ್ಟಾರೆ ಯೋಜನೆಗಳು ಮುಂದುವರಿದ ಮತ್ತು ಹಿಂದುಳಿದ ಎಲ್ಲಾ ದೇಶಗಳಲ್ಲಿಯೂ ಆರ್ಥಿಕ ವ್ಯವಸ್ಥೆಯು ಸ್ಪಷ್ಟ ದಿಕ್ಕನ್ನು ಪಡೆಯುತ್ತಿದ್ದರಿಂದ ಅದು ಮುಕ್ತ ಆರ್ಥಿಕ ವ್ಯವಸ್ಥೆಗಿಂತ ಉತ್ತಮವಾಗಿತ್ತು, "ಯೋಜನೆಯಿಲ್ಲದ ಆರ್ಥಿಕ ವ್ಯವಸ್ಥೆ

ಚಾಲಕನಿಲ್ಲದ ವಾಹನವಿದ್ದಂತೆ" ಏಕೆಂದರೆ ಆ ಆರ್ಥಿಕ ವ್ಯವಸ್ಥೆಗೆ ದಿಕ್ಕು ದೆಸೆಗಳೆಂಬುದು ಇರುವುದಿಲ್ಲ. ಯೋಜನೆಯ ವಿವಿಧ ಚಟುವಟಿಕೆಗಳು ನಿರ್ದಿಷ್ಟ ಸ್ವರೂಪ ಮತ್ತು ದಿಕ್ಕನ್ನು ಪಡೆಯಬೇಕಾದರೆ ಆರ್ಥಿಕ ಯೋಜನೆಯು ಬಹುಮುಖ್ಯ.

೭ನೇ ಪಂಚವಾರ್ಷಿಕ ಯೋಜನೆಯಲ್ಲಿ ನಗರದ ಬಡತನದ ಬಗ್ಗೆ ಸರ್ಕಾರಕ್ಕೆ ಅರಿವಾಗಿ ಆರ್ಥಿಕ ಯೋಜನೆಗಳ ಅಡಿಯಲ್ಲಿ ಬಡತನ ನಿರ್ಮೂಲನಾ ಕಾರ್ಯಕ್ರಮಗಳನ್ನು ರೂಪಿಸಲು ಮುಂದೆ ಬಂದಿತು. ಇದರ ಪ್ರತಿ ಫಲವೇ ಮುಂದೆ ಹಲವಾರು ಪಂಚವಾರ್ಷಿಕ ಯೋಜನೆಗಳಲ್ಲಿ ಹಣವನ್ನು ಮೀಸಲಿರಿಸುತ್ತಾ ಅಗತ್ಯಕ್ಕೆ ತಕ್ಕಂತೆ ಬದಲಾವಣೆಗಳೊಂದಿಗೆ ಜಾರಿಗೆ ಬಂದ ಯೋಜನೆಯೇ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ.

ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯು ಜಾರಿಗೆ ಬರುವುದಕ್ಕೆ ಮುಂಚೆ ನಗರ ಬಡತನ ನಿರ್ಮೂಲನೆಗಾಗಿ ದೇಶದಲ್ಲಿ ಮೂರು ಯೋಜನೆಗಳು ಕಾರ್ಯರೂಪದಲ್ಲಿದ್ದವು, ಅವುಗಳು ಇಂತಿವೆ.

ಎ. ನೆಹರು ರೋಜ್‌ಗಾರ್ ಯೋಜನೆ

ಬಿ. ನಗರದ ಬಡವರಿಗಾಗಿ ಮೂಲಭೂತ ಸೇವೆಗಳು (ಅರ್ಬನ್ ಬೇಸಿಕ್ ಸರ್ವಿಸಸ್ ಫಾರ್ ದಿ ಪೂರ್)

ಸಿ. ಪ್ರಧಾನಮಂತ್ರಿ ಸಮಗ್ರ ನಗರ ಬಡತನ ನಿರ್ಮೂಲನಾ ಕಾರ್ಯಕ್ರಮ

ಎ. **ನೆಹರು ರೋಜಗಾರ್**: ಈ ಯೋಜನೆಯನ್ನು ೭ನೇ ಪಂಚವಾರ್ಷಿಕ ಯೋಜನೆಯ (ಅಕ್ಟೋಬರ್ ೧೯೮೯) ಕೊನೆಯಲ್ಲಿ ಜಾರಿಗೆ ತರಲಾಯಿತು. ಈ ಯೋಜನೆಯು ೩ ಪ್ರಮುಖ ಕಾರ್ಯಕ್ರಮಗಳನ್ನು ಒಳಗೊಂಡಿತ್ತು.

ಎ. ನಗರ ವೇತನಾಧಾರಿತ ಉದ್ಯೋಗ ಕಾರ್ಯಕ್ರಮ (ಅರ್ಬನ್ ವೇಜ್ ಎಂಪ್ಲಾಯ್‌ಮೆಂಟ್)

ಬಿ. ಸ್ಕೀಮ್ ಆಫ್ ಹೌಸಿಂಗ್ ಅಂಡ್ ಶೆಲ್ಟರ್ ಅಪಗ್ರೇಡೇಶನ್

ಸಿ. ನಗರದಲ್ಲಿ ಚಿಕ್ಕ ಉದ್ಯಮ ಸ್ಥಾಪನೆ (ಅರ್ಬನ್ ಮೈಕ್ರೋ ಎಂಟರ್‌ಪ್ರೈಸಿಸ್)

ಬಿ. ಅರ್ಬನ್ ಬೇಸಿಕ್ ಸರ್ವಿಸಸ್ ಫಾರ್ ದಿ ಪೂರ್ (ನಗರದ ಬಡವರಿಗಾಗಿ ಮೂಲಭೂತ ಸೇವೆಗಳು): ಈ ಯೋಜನೆಯನ್ನು ೮ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸರಕಾರವು ಜಾರಿಗೆ ತಂದಿತು. ಈ ಯೋಜನೆಗೆ ಕೇಂದ್ರ ಸರಕಾರದ ೬೦% ರಾಜ್ಯ ಸರಕಾರದ ೪೦% ಧನ ಸಹಾಯದೊಂದಿಗೆ ಜಾರಿಗೆ ಬಂದಿತು. ಇದರ ಉದ್ದೇಶ ಸಮುದಾಯ ಸಂಘಟನೆ ಮತ್ತು ಸಬಲೀಕರಣಕ್ಕಾಗಿ ಬಡ ಜನರನ್ನು ಉತ್ತೇಜಿಸುವುದಾಗಿದೆ.

ಸಿ. ಪ್ರಧಾನಮಂತ್ರಿ ಸಮಗ್ರ ನಗರ ಬಡತನ ನಿರ್ಮೂಲನಾ ಕಾರ್ಯಕ್ರಮ : ಈ ಯೋಜನೆಯು ಮುಖ್ಯವಾಗಿ ಸಣ್ಣ ಪಟ್ಟಣಗಳಿಗಾಗಿ ಅನ್ವಯಿಸುತ್ತದೆ. ಸಣ್ಣ ಪಟ್ಟಣಗಳಲ್ಲಿ ಕೊರತೆ ಇರುವ ಅವಶ್ಯಕ ಸಂಪನ್ಮೂಲಗಳನ್ನು ಹೆಚ್ಚಿಸುವುದು

ಪರಿಸರ ಅಭಿವೃದ್ಧಿಯನ್ನೊಳಗೊಂಡಂತೆ ಎರಡನೆಯ ವರ್ಗದ ಪಟ್ಟಣಗಳಿಗಾಗಿ ವೇತನ ಆಧಾರಿತ ಉದ್ಯೋಗ ನೀಡುವ ಸಲುವಾಗಿ ೧೯೯೫ ರಲ್ಲಿ ಜಾರಿಗೆ ಬಂದಿತು. ಈ ಮೇಲಿನ ೩ ಕಾರ್ಯಕ್ರಮಗಳ ಸಾಧಕ ಬಾಧಕಗಳನ್ನು ಪರಿಶೀಲಿಸಲು ಸಮಿತಿಯನ್ನು ಕೇಂದ್ರ ಸರ್ಕಾರವು ರಚಿಸಿತ್ತು. ಹಸೀಮ್ ಸಮಿತಿಯು ಮಾಡಿದ ಶಿಫಾರಸ್ಸಿನ ಮೇರೆಗೆ ೯ನೇ ಪಂಚವಾರ್ಷಿಕ ಯೋಜನೆಯಲ್ಲಿ ಮೇಲಿನ ೩ ಕಾರ್ಯಕ್ರಮಗಳನ್ನು ಪರಿಷ್ಕರಿಸಿ ೧-೧೨-೧೯೯೭ ರಿಂದ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ ಎಂಬ ಹೊಸ ಹೆಸರಿನೊಂದಿಗೆ ಜಾರಿಗೆ ಬಂದಿದೆ.

**೧.೨. ಅಧ್ಯಯನದ ವಿಷಯದ ಸಮಸ್ಯೀಕರಣ:**

ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯನ್ನು ದೇಶದ ಎಲ್ಲಾ ಪಟ್ಟಣಗಳಲ್ಲಿ ಕೇಂದ್ರ ಸರ್ಕಾರವು ಜಾರಿಗೆ ತಂದಿರುವುದರಿಂದ ಇದೊಂದು ಬೃಹತ್ ಪ್ರಮಾಣದ ಯೋಜನೆಯಾಗಿದ್ದು, ಇದು ನಗರ ಬಡತನ ನಿರ್ಮೂಲನೆಯನ್ನು ಗುರಿಯಾಗಿಸಿ ಕೊಂಡು ಬಂದ ಯೋಜನೆಯಾಗಿದೆ. ಭಾರತ ದೇಶದಲ್ಲಿ ಪಂಚ ವಾರ್ಷಿಕ ಯೋಜನೆಗಳನ್ನು ಜಾರಿಗೆ ತಂದ ದಿನದಿಂದಲೂ ಬಡತನದ ನಿರ್ಮೂಲನೆಯ ಸಲುವಾಗಿ ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ಬಡತನವನ್ನು ಹೋಗಲಾಡಿಸುವುದೆಂದರೆ, ಮನುಷ್ಯ ಆರ್ಥಿಕವಾಗಿ ಅಭಿವೃದ್ಧಿ ಹೊಂದಿದರೆ ಬಡತನ ಎಂಬುದು ತಂತಾನೆ ಅಳಿಸಿ ಹೋಗುತ್ತದೆ. ಇದಕ್ಕಾಗಿ ಘನ ಸರ್ಕಾರವು ಮಾಡಬೇಕಾದದ್ದು ಪ್ರತಿಯೊಬ್ಬರಿಗೂ ಉದ್ಯೋಗವಕಾಶ, ಇದಕ್ಕಾಗಿ ಆಡಳಿತ ನಡೆಸಿದ ಹಲವಾರು ಸರ್ಕಾರಗಳು ವಿವಿಧ ರೀತಿಯಲ್ಲಿ ಬಡತನ ನಿರ್ಮೂಲನಕ್ಕಾಗಿ ವಿವಿಧ ಯೋಜನೆಗಳನ್ನು ಜಾರಿಗೆ ತಂದು ನಿರುದ್ಯೋಗಿಗಳಿಗೆ ಉದ್ಯೋಗವಕಾಶಗಳನ್ನು ಕಲ್ಪಿಸುವತ್ತ ಸಾಗಿವೆ, ಅದರಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆ ಒಂದು ವಿಶಿಷ್ಟವಾದ ನಗರ ಪ್ರದೇಶಕ್ಕೆ ಮಾತ್ರ ಸೀಮಿತವಾದ ಯೋಜನೆಯಾಗಿದೆ. ಈ ಯೋಜನೆ ರಾಷ್ಟ್ರದ ಹಾಗೂ ಕರ್ನಾಟಕದ ಎಲ್ಲಾ ನಗರಗಳಲ್ಲಿ ಜಾರಿಯಲ್ಲಿದ್ದರೂ ಸಹ ಸಂಶೋಧನಾ ಅಧ್ಯಯನಕ್ಕೆ ಕರ್ನಾಟಕದ ಎರಡನೇ ರಾಜಧಾನಿ ಎಂಬ ಖ್ಯಾತಿಯನ್ನು ಹೊಂದಿರುವ ಅತಿ ದೊಡ್ಡ ನಗರವಾದ ಧಾರವಾಡ ಜಿಲ್ಲೆಯಲ್ಲಿ ಬರುವ ಹುಬ್ಬಳ್ಳಿ-ಧಾರವಾಡ ಮಹಾನಗರದಲ್ಲಿ ಇರುವ ಬಡವರಿಗೆ ಈ ಯೋಜನೆಯಿಂದ ಆಗಿರುವ ಪ್ರಯೋಜನಗಳೇನು, ಅನಾನುಕೂಲಗಳೇನು ಹಾಗೂ ಈ ಯೋಜನೆಯಿಂದಾಗಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಎಷ್ಟು ಜನರಿಗೆ ಲಾಭವಾಗಿದೆ ಮತ್ತು ಜನರ ಜೀವನ ಮಟ್ಟ ಹೇಗಿದೆ ಎಂಬುದರ ಬಗ್ಗೆ ತಿಳಿಯುವ ಕಾರಣಕ್ಕಾಗಿ ಈ ಅಧ್ಯಯನವನ್ನು ಆಯ್ದು ಕೊಳ್ಳಲಾಗಿದೆ.

## ೧.೩ ಅಧ್ಯಯನದ ಉದ್ದೇಶಗಳು: (Objectives)

- ಬಡತನ ನಿರ್ಮೂಲನೆಯ ಪರಿಕಲ್ಪನೆಯ ತಾತ್ವಿಕ ಮತ್ತು ಜಾರಿ ವ್ಯವಸ್ಥೆಯನ್ನು ತಿಳಿದುಕೊಳ್ಳುವುದು ಮತ್ತು ಎಸ್‌ಜೆಎಸ್‌ಆರ್‌ವೈ ಯೋಜನೆಯು ನಗರ ಬಡತನವನ್ನು ಹೋಗಲಾಡಿಸಲು /ಜಾರಿಗೊಳಿಸಲು ಇರುವ ಒಂದು ಸಾಧನದ ಸಾಧನೆಯನ್ನು ತಿಳಿದುಕೊಳ್ಳುವುದು.
- ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯು ನಗರ ಜನರ ಆರ್ಥಿಕ ಸಾಮಾಜಿಕ ಪರಿಕಲ್ಪನೆಗೆ ಸ್ಪಂದಿಸುವಲ್ಲಿ ಇದಕ್ಕಿರುವ ಶಕ್ತಾಶಕ್ತತೆಗಳನ್ನು ಹಾಗೂ ಯೋಜನಾ ವ್ಯವಸ್ಥೆಯ ಯಶಸ್ಸನ್ನು ಅಳತೆ ಮಾಡುವ ಪ್ರಯತ್ನವೂ ಸಹ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.
- ನಗರ ಬಡತನ ನಿರ್ಮೂಲನೆಯಲ್ಲಿ ಸರ್ಕಾರದ ಕಾರ್ಯಕ್ರಮಗಳು/ ಪರಿಣಾಮಗಳ ಬಗ್ಗೆ ತಿಳಿದುಕೊಳ್ಳುವುದು.

## ೧.೪ ಪ್ರಾಕ್‌ಕಲ್ಪನೆಗಳು: (Hypothesis)

- ಪುರುಷ ಮತ್ತು ಮಹಿಳೆಯರಲ್ಲಿ ಅಸಮಾನತೆಯಿದೆ.
- ಉದ್ಯೋಗದಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ.
- ಹೆಚ್ಚು ಜನರಿಗೆ ಯೋಜನೆ ಬಗ್ಗೆ ಅರಿವಿಲ್ಲದಿರುವುದು.
- ಸರ್ಕಾರದ ಯೋಜನೆಗಳು ಸರಿಯಾಗಿ ತಲುಪದೇ ಇರುವುದು.
- ತರಬೇತಿಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದಿರುವುದು.
- ನಗರದಲ್ಲಿ ಪರಸ್ಪರ ನೆರೆಹೊರೆಯವರಲ್ಲಿ ನಂಬಿಕೆ ಇಲ್ಲದಿರುವುದು.
- ಬ್ಯಾಂಕುಗಳಲ್ಲಿ ದೊರೆಯುವ ಸಾಲಸೌಲಭ್ಯಗಳು ಜನರಿಗೆ ತಲುಪುವುದಿಲ್ಲ.
- ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಬರುವ ಫಲಾನುಭವಿಗಳು ಯೋಜನೆಯ ಪರಿಕಲ್ಪನೆ ಸಂಕೀರ್ಣತೆಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಂತಿಲ್ಲ.

## ೧.೫. ಕ್ಷೇತ್ರ ಅಧ್ಯಯನದ ಇತಿಮಿತಿಗಳು:

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ಸಮಯದ ಮಿತಿ ಮುಂತಾದ ಅಂಶಗಳನ್ನು ಆಧರಿಸಿ ಅಧ್ಯಯನವನ್ನು ಹುಬ್ಬಳ್ಳಿ–ಧಾರವಾಡ ಮಹಾನಗರದ ಸರ್ಕಾರದಿಂದ ಅಧಿಕೃತವಾಗಿ ಘೋಷಿತವಾದ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವ ಸೀಮಿತ ಫಲಾನುಭವಿಗಳನ್ನು ಮಾತ್ರ ಅಧ್ಯಯನಕ್ಕೆ ಮಿತಿಗೊಳಿಸಲಾಗಿದೆ. ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯು

ಬಿಪಿಎಲ್ ಕುಟುಂಬದವರಿಗಾಗಿ ಮಾತ್ರವೇ ಇರುವುದರಿಂದ ಸರ್ಕಾರದಿಂದ ಘೋಷಿತವಾದ ಮತ್ತು ಅಘೋಷಿತವಾದ ಎಲ್ಲಾ ಪ್ರದೇಶಗಳಲ್ಲೂ ಯೋಜನೆ ಅನ್ವಯವಾಗುತ್ತದೆ. ಆದರೂ ಸಹ ಪರಿಣಾಮಕಾರಿ ಫಲಿತಾಂಶದ ಉದ್ದೇಶವನ್ನಿಟ್ಟುಕೊಂಡು ಘೋಷಿತ ಪ್ರದೇಶದ ಫಲಾನುಭವಿಗಳನ್ನು ಮಾತ್ರ ಅಧ್ಯಯನಕ್ಕೆ ಮೀಸಲಿರಿಸಿಕೊಳ್ಳಲಾಗಿದೆ. ಬಡತನಕ್ಕೆ ಸಂಬಂಧಿಸಿದಂತೆ ಅನೇಕ ಅಧ್ಯಯನಗಳಾಗಿರುವುದನ್ನು ಕಾಣಬಹುದು, ಆದರೆ ಎಸ್‌ಜೆಎಸ್‌ಆರ್‌ವೈ ಯೋಜನೆಯು ಬಡ ಜನರ ಆರ್ಥಿಕ ಅಭಿವೃದ್ಧಿ ಬಗ್ಗೆ ಅಧ್ಯಯನವಾಗಿರುವುದರಿಂದ ಕೆಲವು ಆಯ್ದ ಪ್ರದೇಶಗಳನ್ನು ಅಧ್ಯಯನ ಮಾಡಬೇಕೆಂದು ತೀರ್ಮಾನಿಸಲಾಯಿತು. ಈ ಅಧ್ಯಯನವು ಸೂಕ್ಷ್ಮವಾದ ಅಧ್ಯಯನವಾಗಿದ್ದು ಆಯ್ದ ಪ್ರದೇಶಗಳ ಅಧ್ಯಯನವಾಗಿದೆ.

ಯೋಜನೆಯಿಂದ ಜಾರಿಯಾಗಿರುವ ಕೆಲವು ನಿಯಮಗಳು ಒಂದೇ ಆಗಿದ್ದರೂ ಜನರಿಗಾಗಿರುವ ಅನುಕೂಲತೆಗಳು, ಎದುರಿಸುತ್ತಿರುವ ಸಮಸ್ಯೆಗಳು ಎಲ್ಲ ನಗರಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದರೂ ಸಹ ಈ ಅಧ್ಯಯನ ಎಲ್ಲ ನಗರಗಳ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸಹಕಾರಿಯಾಗಿದೆ.

೧. ಹುಬ್ಬಳ್ಳಿ – ಧಾರವಾಡ ನಗರಗಳಲ್ಲಿ ವಾಸಿಸುತ್ತಿರುವ ಬಡ ಜನರ ಸಮಸ್ಯೆಗಳು ಮತ್ತೊಂದು ದೊಡ್ಡ ನಗರದ ಜನರ ಸಮಸ್ಯೆಗಳು ಒಂದೇ ಎಂಬ ಅಭಿಪ್ರಾಯವಿಟ್ಟು ಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.
೨. ಈ ಯೋಜನೆ ೧೯೯೭ ರಿಂದ ದೇಶದ ಎಲ್ಲಾ ನಗರ ಪ್ರದೇಶಗಳಲ್ಲಿ ಜಾರಿಯಲ್ಲಿರುವುದರಿಂದ ೨೦೦೯–೧೦ನೇ ಆರ್ಥಿಕ ವರ್ಷದ ಹಿಂದಿನ ಫಲಾನುಭವಿಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.
೩. ಅಧ್ಯಯನದಲ್ಲಿ ಶೇಕಡವಾರು ಪ್ರಮಾಣವನ್ನು ಮಾತ್ರ ಉಪಯೋಗಿಸಲಾಗಿದೆ.

ಇದೊಂದು ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾಗಿರುವದರಿಂದ ಅಧ್ಯಯನ ಕ್ಷೇತ್ರದಲ್ಲಿ ಲಭ್ಯವಾಗುವ ಮಾಹಿತಿ ಹಾಗೂ ಸರ್ಕಾರದ ಕಛೇರಿಗಳಲ್ಲಿ ಲಭ್ಯವಿರುವ ಮಾಹಿತಿ ಆಧಾರದ ಮೇಲೆ ಸಂಶೋಧನಾ ವಿಷಯದ ಫಲಿತಾಂಶಗಳು ವಿಶ್ಲೇಷಣೆಯಾಗಿವೆ.

## ೧.೬. ಅಧ್ಯಯನ ವಿಧಾನ:

ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆ ಒಂದು ಸಮಾಜಶಾಸ್ತ್ರೀಯ ಅಧ್ಯಯನ. ಒಂದು ನಗರದ ಜನರ ಪ್ರಮುಖ ಸಮಸ್ಯೆಗಳು/ಪರಿಹಾರಗಳು ಹಾಗೂ ಒಂದು ಸರ್ಕಾರದ ಕಾರ್ಯಕ್ರಮ/ಯೋಜನೆ ಜಾರಿಯ ಪರಿಣಾಮಗಳನ್ನು ತಿಳಿದುಕೊಳ್ಳುವುದು ಮುಖ್ಯವಾದುದರಿಂದ ಈ ಕ್ಷೇತ್ರಕ್ಕೆ ಸಮಾಜ ವಿಜ್ಞಾನದ ಮಾನದಂಡ ದೃಷ್ಟಿಕೋನವನ್ನು ಅಳವಡಿಸಿಕೊಳ್ಳಲಾಗಿದೆ. ಈ ಅಧ್ಯಯನಕ್ಕೆ ಕ್ಷೇತ್ರ ಕಾರ್ಯ ಆಧಾರಿತ ಆಕರಗಳನ್ನು ಮೂಲ ಮಾನದಂಡವಾಗಿ ಬಳಸಿಕೊಳ್ಳಲಾಗಿದೆ. ಮಾಹಿತಿಗಳನ್ನು ಅಲ್ಲಿಯ ಸಮುದಾಯದ ವಿವಿಧ ಜನರಿಂದ ಸಂಗ್ರಹಿಸಲಾಗಿದೆ. ಹುಬ್ಬಳ್ಳಿ–ಧಾರವಾಡದ ಮಹಾನಗರದಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯಲ್ಲಿ ಫಲಾನುಭವಿಗಳಾಗಿರುವ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ 10 ಪ್ರದೇಶಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಯೋಜನೆಯ ಬಡತನ ರೇಖೆಗಿಂತ ಕೆಳಗಿನ ಕುಟುಂಬದವರಿಗೆ ಮಾತ್ರವೇ ಜಾರಿಯಾಗಿರುವುದರಿಂದ ಒಟ್ಟು ಕುಟುಂಬಗಳ ಸಂಖ್ಯೆ ಆಧರಿಸಿ ಸಮುದಾಯದ ಪ್ರತಿಶತ 75 ರಷ್ಟು ಕುಟುಂಬಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಯೋಜನೆಯಲ್ಲಿ ವಿವಿಧ ಉಪ ಯೋಜನೆಗಳು ಬರುವುದರಿಂದ ಅವುಗಳ ಶೇಕಡವಾರು ಪ್ರಮಾಣವನ್ನು ಆಧರಿಸಿ ಆಯಾಯ ಉಪ ಯೋಜನೆಗಳಿಂದ ಮಾಹಿತಿಗಳನ್ನು ಪಡೆದು ಕೊಳ್ಳಲಾಗಿದೆ.

ಒಟ್ಟು 300 ಫಲಾನುಭವಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು ಸಂದರ್ಶನಕ್ಕೆ ಪ್ರತಿ ಕುಟುಂಬಗಳನ್ನು ಪ್ರತಿ ಕುಟುಂಬದ ಫಲಾನುಭವಿಗಳನ್ನು ವೈಯಕ್ತಿಕವಾಗಿ ಭೇಟಿ ಮಾಡಿಯೇ ಮಾಹಿತಿ ಸಂಗ್ರಹಿಸಲಾಗಿದೆ.

## ೧.೭ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ ಕಾರ್ಯಕ್ರಮಗಳ ಕಿರುನೋಟ:

ಸ್ವರ್ಣ ಜಯಂತಿ ಶಹರಿ ಯೋಜನೆ ಎಂದರೇನು?

"ನಗರದ ಬಡತನ ರೇಖೆಗಿಂತ ಕೆಳಗೆ ವಾಸಿಸುತ್ತಿರುವ ಕಡು ಬಡವ ಕುಟುಂಬಗಳಿಗೆ ಸಾಂಘಿಕ ವ್ಯವಸ್ಥೆ ಮೂಲಕ ಆರ್ಥಿಕ ಬಲ ನೀಡಿ ಆ ಮೂಲಕ ಸಮುದಾಯದ ಅಭಿವೃದ್ಧಿ ಸಾಧಿಸುವ ಯೋಜನೆ ಇದು".

ಈ ಯೋಜನೆಯು ರಾಷ್ಟ್ರಮಟ್ಟದ ಯೋಜನೆಯಾಗಿದ್ದು, ಪಂಚವಾರ್ಷಿಕ ಯೋಜನೆಗಳಲ್ಲಿ ಸದರಿ ಕಾರ್ಯಕ್ರಮಕ್ಕೆ ಹಣ ಮೀಸಲಿರಿಸಲಾಗುತ್ತಿದೆ. ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯನ್ನು ನಗರ ಪ್ರದೇಶದ ನಿರುದ್ಯೋಗಿಗಳಿಗೆ ಹಾಗೂ ತಕ್ಕ ಕೆಲಸವಿರದ ಬಡ ಜನತೆಗೆ ಸ್ವಂತ ಉದ್ಯೋಗ ಹಾಗೂ ವೇತನಾಧಾರಿತ ಉದ್ಯೋಗಗಳನ್ನು ಕಲ್ಪಿಸುವ ಮೂಲಕ ಲಾಭದಾಯಕ ವೃತ್ತಿಯನ್ನು ನೀಡಲು ಯೋಜಿಸಲಾಗಿದೆ. ಈ ಯೋಜನೆಯ ಅನುಷ್ಠಾನಕ್ಕೆ ಯು.ಬಿ.ಎಸ್.ಪಿ ಯೋಜನೆಯ ಮಾದರಿಯಲ್ಲಿಯೇ ಸಾಂಘಿಕ ವ್ಯವಸ್ಥೆಯನ್ನು ರೂಪಿಸಿರುವುದು ತಿಳಿದು ಬರುತ್ತದೆ ಮತ್ತು ಈ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನವನ್ನು ನಗರ ಸ್ಥಾನಿಕ ಸರ್ಕಾರಗಳ (ಅರ್ಬನ್ ಲೋಕಲ್ ಬಾಡಿಸ್ ಅಂದರೆ ನಗರ ಸಭೆಗಳು) ಮೂಲಕ ಹಾಗೂ ರಚಿಸಲಾದ ಸಾಂಘಿಕ ವ್ಯವಸ್ಥೆಯ ಮೂಲಕ ಮಾಡಲಾಗಿದೆ. ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆಯಡಿ ಹಣವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಶೇಕಡಾ ೭೫:೨೫ ರಂತೆ ನೀಡಲಾಗುತ್ತಿದೆ (ಕೇಂದ್ರ: ಶೇಕಡ ೭೫, ರಾಜ್ಯ ಶೇಕೆಡ ೨೫) ಈ ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆಯು ವಿಶೇಷವಾಗಿ ಎರಡು ಕಾರ್ಯಕ್ರಮ (ಸ್ಕೀಮು) ಗಳನ್ನು ಒಳಗೊಂಡಿರುವುದಾಗಿದೆ.

೧. ದಿ ಅರ್ಬನ್ ಸೆಲ್ಫ ಎಂಪ್ಲಾಯ್‌ಮೆಂಟ್ ಪ್ರೋಗ್ರಾಮ್ (ಯುಎಸ್‌ಇಪಿ) (ನಗರ ಸ್ವಯಂ ಉದ್ಯೋಗ ಕಾರ್ಯಕ್ರಮ)
೨. ದಿ ಅರ್ಬನ್ ವೇಜ್ ಎಂಪ್ಲಾಯ್‌ಮೆಂಟ್ ಪ್ರೋಗ್ರಾಮ್ (ಯುಡಬ್ಲ್ಯುಇಪಿ) ನಗರ ವೇತನಾಧಾರಿತ (ಮಜೂರಿ ಉದ್ಯೋಗ ಕಾರ್ಯಕ್ರಮ).

**ಯೋಜನೆಯ ಉದ್ದೇಶ ಮತ್ತು ಸ್ವರೂಪ :**

ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯನ್ನು, ಸಮುದಾಯವನ್ನು ಅಧಿಕಾರಯುಕ್ತವನ್ನಾಗಿ ಮತ್ತು ಅಭಿವೃದ್ಧಿಯನ್ನು ಆಧಾರವಾಗಿಟ್ಟುಕೊಂಡು ರೂಪಿಸಲಾಗಿದೆ. ಮೇಲಿನ ಹಂತದಿಂದ ಕೆಳಗಿನ ಹಂತಕ್ಕೆ ಅನುಷ್ಠಾನಗೊಳ್ಳುವ ಬದಲು ಈ ಸೌಕರ್ಯಗಳನ್ನು ಕಲ್ಪಿಸುವ ಸಾಮರ್ಥ್ಯವುಳ್ಳ ಸಮುದಾಯ ಸಂಸ್ಥೆಗಳನ್ನು ಹಾಗೂ ಸಾಂಘಿಕ ವ್ಯವಸ್ಥೆಯನ್ನು ರಚಿಸಿ, ಈ ಪೂರಕ ವ್ಯವಸ್ಥೆಯ ಮೂಲಕ ಸ್ಥಾನಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಲಾಗುವುದು. ಈ ಉದ್ದೇಶಕ್ಕಾಗಿ ಆಯ್ದ ಪ್ರದೇಶಗಳಲ್ಲಿ ಯುಬಿಎಸ್ ಮಾದರಿಯಲ್ಲಿ ನೈಬರ್‌ಹುಡ್ ಗ್ರೂಪ್ಸ್ (ಎನ್‌ಹೆಚ್‌ಜಿಗಳು-ನೆರೆಹೊರೆ ಗುಂಪುಗಳು), ನೈಬರ್ ಹುಡ್ ಕಮಿಟಿಗಳು (ಎನ್‌ಹೆಚ್‌ಸಿಗಳು ನೆರೆಹೊರೆ ಸಮಿತಿಗಳು) ಮತ್ತು ಕಮ್ಯುನಿಟಿ ಡೆವೆಲಪ್‌ಮೆಂಟ್ ಸೊಸೈಟಿಗಳಂತಹ ಸಾಮಾಜಿಕ ಸಂಸ್ಥೆಗಳನ್ನು ರಚಿಸಿರುವುದು ಕಂಡು ಬಂದಿದೆ. ಫಲಾನುಭವಿಗಳನ್ನು ಗುರುತಿಸಲು, ಅರ್ಜಿಗಳನ್ನು ತಯಾರಿಸಲು, ಸಾಲ ವಸೂಲಿಯ ನಿರ್ವಹಣೆಯನ್ನು ಮಾಡಲು ಮತ್ತು ಸಾಮಾನ್ಯವಾಗಿ ಈ ಯೋಜನೆಗೆ ಬೇಕಾಗುವ ಇತರ ಸಹಕಾರಕ್ಕಾಗಿ ಸಮುದಾಯ

ಅಭಿವೃದ್ಧಿ ಸಂಘ (ಕಮ್ಯುನಿಟಿ ಡೆವೆಲಪ್‌ಮೆಂಟ್ ಸೊಸೈಟಿ) ಗಳು ಕೇಂದ್ರ ಸಂಸ್ಥೆಗಳಾಗಿ ಕೆಲಸ ನಿರ್ವಹಿಸುತ್ತಾ ಬರುತ್ತಿವೆ. ಈ ಸಿಡಿಎಸ್ ಕೇಂದ್ರವು ಆಯಾ ಪ್ರದೇಶಗಳಿಗೆ ಸೂಕ್ತವಾದ ಯೋಜನೆಗಳನ್ನು ಕೂಡ ಗುರುತಿಸುತ್ತದೆ. ತಮ್ಮ ಇತರ ಸಾಮಾಜಿಕ ಚಟುವಟಿಕೆಗಳ ಜೊತೆಯಲ್ಲಿ ಸಿಡಿಎಸ್ ಥ್ರಿಪ್ಟ್ (ಉಳಿತಾಯ) ಮತ್ತು ಕ್ರೆಡಿಟ್ (ಸಾಲ ನೀಡುವ) ಸೊಸೈಟಿಗಳಾಗಿ ಕೆಲಸ ನಿರ್ವಹಿಸಬಹುದಾಗಿದೆ. ಅಲ್ಲದೇ ಈ ಥ್ರಿಪ್ಟ್ ಮತ್ತು ಕ್ರೆಡಿಟ್ ಸೊಸೈಟಿಗಳನ್ನು ಸಿಡಿಎಸ್ ಹೊರತಾಗಿ ಬೇರೆಯದಾಗಿಯೂ ರಚಿಸಬಹುದಾಗಿದೆ. ಈ ಸಂಸ್ಥೆಗಳು ಸ್ಥಳೀಯವಾಗಿ ಸಂಪನ್ಮೂಲ ಕ್ರೋಢೀಕರಣ ಪ್ರಯತ್ನಗಳಿಗೆ ಹೊರಗಿನ ಇತರ ಸಂಸ್ಥೆಗಳಿಂದ ಹಣಕಾಸಿನ ಸಹಾಯವನ್ನು ಒದಗಿಸಲು ಪ್ರಯತ್ನಿಸುತ್ತವೆ.

ವಿವಿಧ ಯೋಜನೆಗಳಡಿ ಧನ ಸಹಾಯವನ್ನು ನೇರವಾಗಿ ಪಡೆಯಲು ಅನುವಾಗಲು, ಹಣಕಾಸು ಸಂಸ್ಥೆಗಳ ಸಹಾಯ ಪಡೆಯಲು ಹಾಗೂ ಹಣಕಾಸು ಮೂಲವನ್ನು ಸೃಷ್ಟಿಸಲು ಈ ಸಂಸ್ಥೆಗಳನ್ನು ಸಂಘಗಳ ನೊಂದಣಿ ಕಾಯ್ದೆ ಅಥವಾ ಸಂಬಂಧಪಟ್ಟ ಕಾಯ್ದೆಯ ಪ್ರಕಾರ ನೊಂದಾಯಿಸಬೇಕಾಗುತ್ತದೆ. ಸಿಡಿಎಸ್‌ಗಳ ಚಟುವಟಿಕೆಗಳಿಗೆ ಮೊದಲ ವರ್ಷದಲ್ಲಿ ಪ್ರತಿ ಸದಸ್ಯನಿಗೆ ನೂರು (ರೂ. ೧೦೦) ರೂಪಾಯಿಗಳನ್ನು ಹಾಗೂ ಮುಂದಿನ ಪ್ರತಿ ವರ್ಷಗಳಲ್ಲಿ ಪ್ರತಿ ಸದಸ್ಯನಿಗೂ ಗರಿಷ್ಠ ಎಪ್ಪತ್ತೈದು (ರೂ. ೭೫) ರೂಪಾಯಿಗಳನ್ನು ವ್ಯಯ ಮಾಡಬಹುದಾಗಿದೆ. ವಿವಿಧ ಸಮುದಾಯಾಧಾರಿತ ಸಂಸ್ಥೆಗಳ ಸಮೂಹವಾಗಿರುವ ಸಿಡಿಎಸ್‌ಗಳು ಈ ಯೋಜನೆಗೆ ಕೇಂದ್ರ ಸಂಸ್ಥೆಯಾಗಿರುತ್ತವೆ, ನೋಡಲ್ ಎಜೆನ್ಸಿಯಾಗಿರುತ್ತವೆ. ಆಯಾ ಪ್ರದೇಶಗಳ ವಿವಿಧ ವಿಭಾಗಗಳು ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳನ್ನು ಸಮನ್ವಯವಾಗಿ ಕೇಂದ್ರೀಕೃತಗೊಳಿಸುವುದರೊಂದಿಗೆ ಆರೋಗ್ಯ, ಶಿಕ್ಷಣ ಮತ್ತು ಇತರ ಸಾಮಾಜಿಕ ಕ್ಷೇತ್ರಗಳಲ್ಲಿ ಸೇವೆಯನ್ನು ಒಗ್ಗೂಡಿಸುವ ಕಾರ್ಯವನ್ನು ಈ ಸಂಸ್ಥೆ (ಸಿಡಿಎಸ್) ಗಳು ಅವರ ಪ್ರದೇಶಗಳಲ್ಲಿ ಮಾಡಬೇಕಾಗುತ್ತದೆ.

**ಅರ್ಬನ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಪ್ರೋಗ್ರಾಮ್ (ಯುಎಸ್‌ಇಪಿ) (ನಗರ ಸ್ವಯಂ ಉದ್ಯೋಗ ಕಾರ್ಯಕ್ರಮ)**

ಈ ಕಾರ್ಯಕ್ರಮವು ಮೂರು ರೀತಿಯ ಕಾರ್ಯಕ್ರಮಗಳನ್ನು ಒಳಗೊಂಡಿದೆ.

i. ಲಾಭದಾಯಕ ಸ್ವಯಂ ಉದ್ಯೋಗ ಸ್ಥಾಪಿಸಲು ನಗರದ ಆಯ್ದ ಪ್ರತಿಯೊಬ್ಬ ಬಡ ಫಲಾನುಭವಿಗಳಿಗೆ (ಒಬ್ಬರಿಗೆ) ಸಹಾಯ ಒದಗಿಸುವುದು.

ii. ಲಾಭದಾಯಕ ಸ್ವಯಂ ಉದ್ಯೋಗ ನಡೆಸಿಕೊಳ್ಳಲು ನಗರದ ಆಯ್ದ ಮಹಿಳಾ ಗುಂಪುಗಳಿಗೆ ಸಹಾಯ ಒದಗಿಸುವುದು. ಈ ಉಪ ಯೋಜನೆಯನ್ನು ನಗರ ಪ್ರದೇಶಗಳ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (ಡಿಡಬ್ಲ್ಯುಸಿಯುಎ) ಎಂದೂ ಕರೆಯಲಾಗಿದೆ.

iii. ನಗರ ಸ್ವಯಂ ಉದ್ಯೋಗ ಕಾರ್ಯಕ್ರಮದ ಫಲಾನುಭವಿಗಳಿಗೆ ಹಾಗೂ ಸಂಬಂಧಪಟ್ಟ ಇತರ ಜನರಿಗೆ ವೃತ್ತಿಪರ ಹಾಗೂ ಉದ್ಯಮಶೀಲ ನೈಪುಣ್ಯತೆಯನ್ನು ಹೆಚ್ಚಿಸಲು, ತರಬೇತಿಯನ್ನು ಸಹ ಈ ಯೋಜನೆ ಒಳಗೊಂಡಿದೆ.

**ಯೋಜನೆಯ ವ್ಯಾಪ್ತಿ ಮತ್ತು ವಿಧಾನಗಳು :**

ಈ ಯೋಜನೆಯು ಭಾರತದ ಎಲ್ಲಾ ನಗರಗಳಿಗೂ (ಮಹಾನಗರ ಪಾಲಿಕೆ/ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯ್ತಿ) ಅನ್ವಯಿಸುತ್ತದೆ. ಪ್ರತಿ ನಗರದ ಸಂಪೂರ್ಣ ಪ್ರದೇಶವನ್ನು ಗಮನದಲ್ಲಿಟ್ಟುಕೊಂಡು ಬಡಜನರ ಗುಂಪು ಬಿಡಾರಗಳಿಗೆ ಪ್ರಾಮುಖ್ಯತೆ ನೀಡುತ್ತಾ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.

**ಈ ಯೋಜನೆಯಡಿ ಪರಿಗಣಿಸಲಾಗುವ ಗುಂಪುಗಳು :**

ಯಾವುದೇ ಯೋಜನೆಯು ಜಾರಿಯಾಗುವ ಸಂದರ್ಭದಲ್ಲಿ ಕೆಲವು ನಿಯಮಗಳನ್ನು ರೂಪಿಸುವುದು ಸಹಜ ಅವುಗಳೇನೆಂಬುದನ್ನು ಈ ಕೆಳಗಿನಂತೆ ತಿಳಿದು ಕೊಳ್ಳಲಾಗಿದೆ. ಕಾಲಕಾಲಕ್ಕೆ ನಿರ್ಧರಿಸಲ್ಪಡುವ ಬಡತನ ರೇಖೆಗಿಂತ ಕೆಳಗೆ ಬದುಕುತ್ತಿರುವ ನಗರಗಳ ಬಡ ಜನತೆಯನ್ನು ಈ ಯೋಜನೆಯಡಿ ಪರಿಗಣಿಸಲಾಗಿದೆ ಸರ್ಕಾರವು ಕಾಲಕಾಲಕ್ಕೆ ಸೂಚಿಸಿದ ಹಾಗೆ ಮಹಿಳೆಯರಿಗೆ, ಪರಿಶಿಷ್ಠ ಜಾತಿ/ ಪಂಗಡದವರಿಗೆ, ಅಂಗವಿಕಲರಿಗೆ ಹಾಗೂ ಇತರ ವರ್ಗದವರಿಗೆ ವಿಶೇಷ ಗಮನ ನೀಡುವುದು, ಈ ಕಾರ್ಯಕ್ರಮದಡಿ ಪರಿಗಣಿಸಲಾಗುವ ಒಟ್ಟು ಫಲಾನುಭವಿಗಳಲ್ಲಿ ಶೇಕಡಾ ೩೦ ಕ್ಕಿಂತ ಕಡಿಮೆ ಇಲ್ಲದಂತೆ, ಈ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳ ಸಂಖ್ಯೆ ಕನಿಷ್ಠ ಆ ನಗರದ ಜನಸಂಖ್ಯೆಯಲ್ಲಿನ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಶೇಕಡ ರಷ್ಟನ್ನು ನಿಗದಿಪಡಿಸಲಾಗಿರುತ್ತದೆ. ಅಂಗವಿಕಲರಿಗೆ ಶೇಕಡಾ ೩ (ಮೂರು) ರಷ್ಟು ಮೀಸಲಾತಿಯನ್ನು ವಿಶೇಷವಾಗಿ ಈ ಯೋಜನೆಯಡಿ ಅಳವಡಿಸಲಾಗಿದೆ.

**ವಿದ್ಯಾರ್ಹತೆ:** ಈ ಯೋಜನೆಯ ಫಲಾನುಭವಿಗಳಾಗಲು ಯಾವುದೇ ಕನಿಷ್ಠ ವಿದ್ಯಾರ್ಹತೆಯ ಅವಶ್ಯಕತೆ ಇರುವುದಿಲ್ಲ ಆದರೆ, ಈಗಾಗಲೇ ಜಾರಿಯಲ್ಲಿರುವ ಪ್ರಧಾನಮಂತ್ರಿಗಳ ರೋಜಗಾರ್ (ಪಿಎಂಆರ್‌ವೈ) ಯೋಜನೆಯೊಂದಿಗೆ ದ್ವಂದ್ವತೆಯಾಗಬಾರದೆನ್ನುವ ಸಲುವಾಗಿ ಈ ಯೋಜನೆಯ ಸೆಲ್ಫ್ ಎಂಪ್ಲಾಯ್‌ಮೆಂಟ್ ಕಾರ್ಯಕ್ರಮ (ಸ್ವಯಂ ಉದ್ಯೋಗ ಕಾರ್ಯಕ್ರಮ)ವು ೯ನೇತರಗತಿ ಮೇಲ್ಪಟ್ಟು ವಿದ್ಯಾರ್ಹತೆ ಹೊಂದಿರುವವರಿಗೆ ಅನ್ವಯಿಸುವುದಿಲ್ಲ ಎಂಬುದು ನಿಯಮವಾಗಿದೆ. ಆದರೆ ವೇಜ್ ಎಂಪ್ಲಾಯಮೆಂಟ್ ಕಾರ್ಯಕ್ರಮ (ವೇತನಾಧಾರಿತ ಕಾರ್ಯಕ್ರಮ)ಕ್ಕೆ ವಿದ್ಯಾರ್ಹತೆಯ ಯಾವುದೇ ಪರಿಮಿತಿ ಇರುವುದಿಲ್ಲ.

ಮಹಿಳಾ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ, ಫಲಾನುಭವಿಗಳಾಗಲು ಎಲ್ಲ ಅರ್ಹತೆಗಳು ಸಮಾನವಾಗಿದ್ದಲ್ಲಿ, ಮಹಿಳಾ ಯಜಮಾನತ್ವದಲ್ಲಿ ನಡೆಯುವ ಕುಟುಂಬಗಳಿಗೆ, ಇತರ ಮಹಿಳಾ ಫಲಾನುಭವಿಗಳಿಗಿಂತ ಹೆಚ್ಚು ಆದ್ಯತೆ ನೀಡಲು ನಿಯಮದಲ್ಲಿ ಅವಕಾಶವಿರುವುದು. ಈ ವರ್ಗದ ಫಲಾನುಭವಿಗಳನ್ನು ಗುರುತಿಸಲು ಮಹಿಳಾ ಯಜಮಾನತ್ವದ ಕುಟುಂಬಗಳೆಂದರೆ ವಿಧವೆಯರಿಂದ, ವಿವಾಹ ವಿಚ್ಛೇಧನ ಪಡೆದ ಮಹಿಳೆಯರಿಂದ, ಕೇವಲ ಒಬ್ಬ ದುಡಿಯುವ ಮಹಿಳೆಯಿಂದ ಯಜಮಾನಿತ ಕುಟುಂಬಗಳನ್ನು ಹಾಗೂ ಕೇವಲ ಮಹಿಳೆಯರು ಮಾತ್ರ ದುಡಿಯುವ ಕುಟುಂಬಗಳನ್ನು ಮಾತ್ರ ಪರಿಗಣಿಸುವುದು ಕಂಡು ಬಂದಿದೆ.

**ಕಾರ್ಯಕ್ರಮಗಳು:**

**ಸೆಲ್ಫ್ ಎಂಪ್ಲಾಯಮೆಂಟ್ ಥ್ರೂ ಸೆಟ್ಟಿಂಗ್ ಆಫ್ ಮೈಕ್ರೋ ಎಂಟ್ರಪ್ರೈಸಸ್ ಆ್ಯಂಡ್ ಸ್ಕಿಲ್ ಡೆವಲಪ್‌ಮೆಂಟ್) : ಸಣ್ಣ ಉದ್ಯಮ ಸ್ಥಾಪನೆ ಹಾಗೂ ನೈಪುಣ್ಯತೆ ವರ್ಧನೆಯ ಮೂಲಕ ಸ್ವಯಂ ಉದ್ಯೋಗ:**

ಈ ಕಾರ್ಯಕ್ರಮವು ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯ ಮೊದಲನೆಯ ಯೋಜನೆಯಾಗಿದ್ದು, ಇದರಲ್ಲಿ ವೈಯಕ್ತಿಕ ಸ್ವಂತ ಉದ್ಯೋಗ ಕೈಗೊಳ್ಳಲು ಅವಕಾಶ ಕಲ್ಪಿಸಲಾಗಿದೆ. ನಗರಗಳಲ್ಲಿ ತಕ್ಕ ಉದ್ಯೋಗವಿರದ ಹಾಗೂ ನಿರುದ್ಯೋಗಿ ಯುವಕರಿಗೆ, ನಗರಗಳಲ್ಲಿ ಹೆಚ್ಚು ಬೇಡಿಕೆಗಳಲ್ಲಿ ಇರುವಂತಹ ಚಿಕ್ಕ ಉದ್ಯಮಗಳಾದ ಸರ್ವಿಸಿಂಗ್, ಸಣ್ಣ ಅಂಗಡಿ ಹಾಗೂ ಕೈಗಾರಿಕೆಗಳನ್ನು ಸ್ಥಾಪಿಸಲು ಈ ಕಾರ್ಯಕ್ರಮದಡಿ ಪ್ರೋತ್ಸಾಹಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಸ್ಥಳೀಯ ನಿಪುಣತೆಯನ್ನು, ಪರಿಣತಿಯನ್ನು ಪ್ರೋತ್ಸಾಹಿಸಲಾಗುತ್ತಿದೆ. ಉದ್ಯಮಗಳ ವೆಚ್ಚ, ಸರಕುಗಳ ಬೇಡಿಕೆ, ಮಾರಾಟಕ್ಕೆ ಅವಕಾಶ, ಆರ್ಥಿಕ ಸಮರ್ಥತೆ ಹಾಗೂ ಇತರ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರತಿಯೊಂದು ನಗರದಲ್ಲಿ ಈ ಕಾರ್ಯಕ್ರಮದಡಿ ಹಮ್ಮಿಕೊಳ್ಳಬಹುದಾದ ಚಟುವಟಿಕೆಗಳ ಪಟ್ಟಿಯನ್ನು ಮಾಡಲಾಗಿದೆ. ಪ್ರಚಲಿತದಲ್ಲಿರುವ ಪ್ರಧಾನ ಮಂತ್ರಿ ರೋಜ್ಗಾರ್ ಯೋಜನೆ (ಪಿಎಂಆರ್‌ವೈ)ಯೊಂದಿಗೆ ದ್ವಂದ್ವತೆಯಾಗಬಾರದೆನ್ನುವ ಸಲುವಾಗಿ ಎಸ್‌ಜೆಎಸ್‌ಆರ್‌ವೈನ ಈ ಕಾರ್ಯಕ್ರಮವನ್ನು ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ೯ನೇ ತರಗತಿಗಿಂತ ಕಡಿಮೆ ವಿದ್ಯಾರ್ಹತೆಯುಳ್ಳ ವ್ಯಕ್ತಿಗಳನ್ನು ಆರ್ಥಿಕೇತರ ಪ್ರಮಾಣಗಳಿಗೂ ಹೆಚ್ಚು ಆದ್ಯತೆ ನೀಡಿ ಫಲಾನುಭವಿಗಳಾಗಿ ಪರಿಗಣಿಸಲಾಗಿರುವುದು ಕಂಡು ಬರುತ್ತದೆ.

**ನಗರ ಪ್ರದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಯೋಜನೆ:**

**(ಡೆವೆಲಪ್‌ಮೆಂಟ್ ಆಫ್ ವುಮನ್ ಅಂಡ್ ಚಿಲ್ಡ್ರನ್ ಇನ್ ಅರ್ಬನ್ ಏರಿಯಾಸ್ (ಡಿಡಬ್ಲ್ಯುಸಿಯುಎ)**

ಈ ಕಾರ್ಯಕ್ರಮವು ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯ ಎರಡನೆಯ ಯೋಜನೆಯಾಗಿದ್ದು, ಈ ಕಾರ್ಯಕ್ರಮವನ್ನು ವ್ಯಕ್ತಿಗತ ಪ್ರಯತ್ನದ

ಹೊರತಾಗಿ ಗುಂಪುಗೂಡಿ ಜಂಟಿಯಾಗಿ ಸ್ವಂತ ಉದ್ಯಮಗಳನ್ನು ಸ್ಥಾಪಿಸಲಿಚ್ಛಿಸುವ ನಗರದ ಬಡ ಮಹಿಳೆಯರ ಸಮೂಹಗಳಿಗಾಗಿ ರೂಪಿಸಲಾಗಿರುತ್ತದೆ. ನಗರದ ಬಡ ಮಹಿಳೆಯರ ಗುಂಪುಗಳು ಈ ಯೋಜನೆಯಡಿ ತಮ್ಮ ಕೌಶಲ್ಯ, ಅನುಭವ, ತರಬೇತಿ ಹಾಗೂ ಸ್ಥಳೀಯ ಪರಿಸ್ಥಿತಿಗಳ ಅನುಸಾರವಾಗಿ ಆರ್ಥಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಬಹುದಾಗಿದೆ. ಜಂಟಿಯಾಗಿ ಉದ್ಯಮಗಳನ್ನು ಕೈಗೊಳ್ಳುವ ಈ ಪದ್ಧತಿಯು ಆದಾಯವನ್ನು ಹೆಚ್ಚಿಸಲು ಸಹಾಯಕವಾಗುವುದರ ಜೊತೆಗೆ, ಬಡ ಮಹಿಳೆಯರಿಗೆ ಸ್ವಂತ ಉದ್ಯಮಗಳನ್ನು ಸ್ವತಂತ್ರವಾಗಿ ಸ್ಥಾಪಿಸಲು ಸಮರ್ಥರನ್ನಾಗಿ ಮಾಡುವತ್ತ ಸಹಾಯಕವಾಗುತ್ತದೆ. ಈ ಯೋಜನೆಯಡಿ ಅನುದಾನವನ್ನು ಪಡೆಯಲು ಡಿಡಬ್ಲ್ಯುಸಿಯುಎ ಗುಂಪು ಕನಿಷ್ಠ ೧೦ ಬಡ ಮಹಿಳೆಯರನ್ನು ಒಳಗೊಂಡಿರಬೇಕಾಗುತ್ತದೆ.

**ಡ್ವಾಕ್ವಾ ಯೋಜನೆಯಡಿ ಹಣಕಾಸು ವ್ಯವಸ್ಥೆ :**

ಡಿಡಬ್ಲ್ಯುಸಿಯುಎ ಗುಂಪಿಗೆ ಯೋಜನೆಗಳನ್ನು ಕೈಗೊಳ್ಳಲು ೧,೨೫,೦೦೦ ರೂಪಾಯಿಗಳು ಅಥವಾ ಯೋಜನಾ ಮೊತ್ತದ ಶೇಕಡಾ ೫೦ ರಷ್ಟು ಹಣ, ಇವೆರಡರಲ್ಲಿ ಯಾವುದು ಕನಿಷ್ಠವೋ, ಆ ಮೊತ್ತವನ್ನು ಸಹಾಯ ಧನವಾಗಿ ನೀಡಲಾಗುತ್ತದೆ. ಒಂದು ವೇಳೆ ಡಿಡಬ್ಲ್ಯುಸಿಯುಎ ಗುಂಪೇ ತನ್ನ ಉದ್ಯಮ ಚಟುವಟಿಕೆಗಳ ಜೊತೆಗೆ ಥ್ರಿಫ್ಟ್ ಮತ್ತು ಕ್ರೆಡಿಟ್ ಸೊಸೈಟಿಯ ಕಾರ್ಯನಿರ್ವಹಿಸಿದರೆ, ಈ ಥ್ರಿಫ್ಟ್ ಮತ್ತು ಕ್ರೆಡಿಟ್ ಸೊಸೈಟಿಗೆ ಪ್ರತಿ ಸದಸ್ಯನಿಗೆ ಗರಿಷ್ಠ ಮಿತಿ ೧೦೦೦ ರೂಪಾಯಿಗಳಿಗೆ ಒಳಪಟ್ಟು ೨೫೦೦೦ ರೂಗಳ ಒಟ್ಟು ಅನುದಾನ ಹಣವು ರಿವಾಲ್ವಿಂಗ್ ಫಂಡ್ ರೂಪದಲ್ಲಿ ಲಭ್ಯವಾಗುತ್ತದೆ. ಈ ರಿವಾಲ್ವಿಂಗ್ ಫಂಡನ್ನು ಡಿಡಬ್ಲ್ಯುಸಿಯುಎ ಅಡಿಯಲ್ಲಿ ಯಾವುದೇ ಯೋಜನೆ ಕೈಗೊಳ್ಳದೆ ಕೇವಲ ಥ್ರಿಫ್ಟ್ ಮತ್ತು ಕ್ರೆಡಿಟ್ ಸೊಸೈಟಿಯಾಗಿ ಕಾರ್ಯ ನಿರ್ವಹಿಸುವ ಸಂಸ್ಥೆಗೂ ನೀಡಲಾಗುತ್ತದೆ.

**ಕೌಶಲ್ಯ ತರಬೇತಿ ನೀಡುವ ಕಾರ್ಯಕ್ರಮವು ಈ ಯೋಜನೆಯ ಪ್ರಮುಖ ಅಂಗವಾಗಿದೆ.**

ಯಾವುದೇ ವ್ಯಕ್ತಿಗೆ ಉದ್ಯೋಗ ಕೈಗೊಳ್ಳಲು ಮೊದಲು ಅವಶ್ಯಕವಾಗಿ ಬೇಕಾಗಿರುವುದು ತರಬೇತಿ. ಈ ತರಬೇತಿಯನ್ನು ಪಡೆದ ನಂತರದಲ್ಲಿ ಉದ್ಯೋಗಕ್ಕೆ ಮೂಲ ಬಂಡವಾಳದ ಅವಶ್ಯಕತೆಯ ಚಿಂತೆ ಪ್ರತಿಯೊಬ್ಬ ವ್ಯಕ್ತಿಗೆ ಶುರುವಾಗುವುದು ಹಾಗಾಗಿ ಸರ್ಕಾರದ ಈ ತರಬೇತಿ ಯೋಜನೆಯನ್ನು ಅನುಷ್ಠಾನಗೊಳಿಸುವ ಜನರ, ಅಂದರೆ ರಾಜ್ಯ ಸರ್ಕಾರದ ಸಿಬ್ಬಂದಿಯ, ಸ್ಥಾನಿಕ ಸರ್ಕಾರಗಳ ಸಿಬ್ಬಂದಿಯ, ಸಿಡಿಎಸ್ ಕಾರ್ಯಕರ್ತರ ಹಾಗೂ ಇತರ ಸಂಬಂಧಿತ ವ್ಯಕ್ತಿಗಳ ತರಬೇತಿ ಹಾಗೂ ಸಾಮರ್ಥ್ಯ ವರ್ಧನೆಗೆ ಆ ರಾಜ್ಯಕ್ಕೆ ಮಂಜೂರಾದ ಒಟ್ಟು ಹಣದ ಶೇಕಡಾ ೫ ರಷ್ಟು (ಗರಿಷ್ಠ ಮಿತಿ) ಹಣವನ್ನು ಉಪಯೋಗಿಸಬಹುದಾಗಿದೆ.

ರಾಜ್ಯದ ನಗರಾಭಿವೃದ್ಧಿ ಸಂಸ್ಥೆ (ಎಸ್‌ಐಯುಡಿ-ಸ್ಟೇಟ್ ಅರ್ಬನ್ ಡೆವೆಲಪ್‌ಮೆಂಟ್ ಏಜನ್ಸಿ) ಹಾಗೂ ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆ (ಡಿಯುಡಿಎ ಡಿಸ್ಟ್ರಿಕ್ಟ್ ಅರ್ಬನ್ ಡೆವೆಲಪ್‌ಮೆಂಟ್ ಏಜೆನ್ಸಿ)ಯ ಅಧಿಕಾರಿಗಳು ತರಬೇತಿದಾರರಾಗಿ ಕಾರ್ಯ ನಿರ್ವಹಿಸಲು ಅನುವಾಗಲು ಅವರಿಗೆ ಸೂಕ್ತ ತರಬೇತಿ ನೀಡಿ ಅವರ ಪರಿಣತಿಯನ್ನು ಹೆಚ್ಚಿಸಿ ಈ ಸಂಸ್ಥೆಗಳಲ್ಲಿಯೇ ತರಬೇತಿ ನೀಡಲು ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವ ವಿಷಯವನ್ನು ರಾಜ್ಯ ಸರ್ಕಾರ ಗಮನದಲ್ಲಿಟ್ಟು ಕೊಳ್ಳಬಹುದಾಗಿದೆ.ಈ ವ್ಯವಸ್ಥೆಯು, ಹೊರಗಿನ ಸಂಸ್ಥೆಗಳನ್ನು ಅವಲಂಬಿಸುವುದನ್ನು ಕಡಿಮೆ ಮಾಡುತ್ತದಲ್ಲದೇ ಸಂಬಂಧಿತ ಉದ್ಯಮದ ಕಾರ್ಯಕ್ಷೇತ್ರದಲ್ಲಿಯೇ ನಿಜ ಸಂಸ್ಥೆಗಳಿಗೆ ಹತ್ತಿರದಿಂದ ತರಬೇತಿ ನೀಡಿದರೆ ಹೆಚ್ಚು ಸಮಂಜಸವಾಗಿರುತ್ತದೆ. ಹಿಂದೆ ಅಳವಡಿಸಲಾದ ಪದ್ಧತಿಯಾದ ಕೇವಲ ಒಂದೇ ತರಬೇತಿ ಸಂಸ್ಥೆಯಿಂದ ತರಬೇತಿ ನೀಡುವಂತಹ ಪದ್ಧತಿಗಿಂತ ಈ ವ್ಯವಸ್ಥೆಯು ಹೆಚ್ಚು ಪರಿಣಾಮಕಾರಿ ತರಬೇತಿ ನೀಡುವಲ್ಲಿ ಯಶಸ್ವಿಯಾಗುತ್ತದೆ.

**ಮಾಹಿತಿ, ಶಿಕ್ಷಣ ಹಾಗೂ ಸಂಪರ್ಕದ ಕಾರ್ಯಕ್ರಮ:**

ಪ್ರತಿಯೊಂದು ಯೋಜನೆಯಲ್ಲಿಯೂ ಸಹ ಜನರಿಗೆ ಯೋಜನೆಯ ಬಗ್ಗೆ ತಿಳುವಳಿಕೆ ನೀಡಲು ಈ ಚಟುವಟಿಕೆಗೆ ಒತ್ತು ನೀಡಲಾಗಿದ್ದು, ರಾಜ್ಯಕ್ಕೆ ಮಂಜೂರಾದ ಒಟ್ಟು ಹಣದ ಶೇಕಡಾ ೨ ರಷ್ಟು ಹಣವನ್ನು ಮಾಹಿತಿ, ಶಿಕ್ಷಣ ಹಾಗೂ ಸಂಪರ್ಕ ಚಟುವಟಿಕೆಗಳಿಗೆ ಬಳಸಲಾಗುತ್ತದೆ. ಯುಪಿಎ ವಿಭಾಗವು ಹಾಗೂ ಇತರ ಮಾನ್ಯತೆ ಪಡೆದ ರಾಷ್ಟ್ರೀಯ ಸಂಸ್ಥೆಗಳು, ಈ ಸಂಬಂಧದಲ್ಲಿ ನೀಡಿದ ತರಬೇತಿ ಸಾಧನಗಳು ಹಾಗೂ ವಿಷಯಗಳು ಪೂರ್ಣವಾಗಿ ಉಪಯೋಗಿಸುವಂತೆ ರಾಜ್ಯ ಸರ್ಕಾರ ಕಾಳಜಿ ವಹಿಸತಕ್ಕದ್ದು.

**ಆಡಳಿತ ಹಾಗೂ ಕಛೇರಿ ವೆಚ್ಚಗಳು :**

ಯಾವುದೇ ಯೋಜನೆಯೂ ಸಹ ಉತ್ಪಾದಕ ವೆಚ್ಚಕ್ಕಿಂತ ಅನುತ್ಪಾದಕ ವೆಚ್ಚವನ್ನು ಕಡಿಮೆ ಮಾಡುವಲ್ಲಿ ರಾಜ್ಯ ಸರ್ಕಾರ ಕಾಳಜಿವಹಿಸಬೇಕಾಗುತ್ತದೆ. ಯಾವುದೇ ಸಂದರ್ಭದಲ್ಲಿ ರಾಜ್ಯಕ್ಕೆ ಮಂಜೂರಾದ ಒಟ್ಟು ಹಣದಲ್ಲಿ ಗರಿಷ್ಠ ಶೇಕಡಾ ೫ ರಷ್ಟು ಹಣವನ್ನು ಮಾತ್ರ ಆಡಳಿತ ಮತ್ತು ಕಚೇರಿ ವೆಚ್ಚಗಳಿಗೆ ಬಳಸಬಹುದು. ಸ್ಥಾನಿಕ ಸರ್ಕಾರಗಳಿಗೆ ಮಂಜೂರಾದ ಶೇಕಡಾ ೩ ರಷ್ಟು (ಗರಿಷ್ಠ ಮಿತಿ) ಹಣವನ್ನು ಸ್ಥಾನಿಕ ಸರ್ಕಾರದ ವ್ಯವಸ್ಥೆಯನ್ನು ಬಲಪಡಿಸಲು ಉಪಯೋಗಿಸಬಹುದಾಗಿದೆ. ನಗರ ಬಡತನ ನಿರ್ಮೂಲನಾ ವಿಭಾಗವು ಅಸ್ತಿತ್ವದಲ್ಲಿರುವ ಸ್ಥಾನಿಕ ಸರಕಾರಗಳಲ್ಲಿ ಮಾತ್ರ ಈ ಹಣವನ್ನು ಉಪಯೋಗಿಸುವ ಅನುಮತಿ ಇರುತ್ತದೆ. ಹುಬ್ಬಳ್ಳಿ-ಧಾರವಾಡ ಮಹಾನಗರಕ್ಕೆ ಇದು ಅನ್ವಯವಾಗುತ್ತದೆ.

**ದಿ. ಅರ್ಬನ್ ವೇಜ್ ಎಂಪ್ಲಾಯ್‌ಮೆಂಟ್ ಪ್ರೋಗ್ರಾಂ : (ಯುಡಬ್ಲ್ಯುಇಪಿ)**

**(ನಗರ ವೇತನಾಧಾರಿತ ಮಜೂರಿ ಉದ್ಯೋಗ ಕಾರ್ಯಕ್ರಮ) :**

ಈ ಯೋಜನೆಯನ್ನು/ಕಾರ್ಯಕ್ರಮವನ್ನು ನಗರ ಸ್ಥಾನಿಕ ಸರ್ಕಾರಗಳ ವ್ಯಾಪ್ತಿಯಲ್ಲಿ ಬರುವ ನಗರ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ನಗರದ ಬಡಜನತೆಗಾಗಿ ರೂಪಿಸಲಾಗಿದ್ದು, ಸಾಮಾಜಿಕ ಹಾಗೂ ಆರ್ಥಿಕವಾಗಿ ಉಪಯುಕ್ತ ಸಾರ್ವಜನಿಕ ಆಸ್ತಿಗಳನ್ನು ನಿರ್ಮಿಸುವಲ್ಲಿ ಈ ಯೋಜನೆಯ ಫಲಾನುಭವಿಗಳ ಸೇವೆಯನ್ನು ಉಪಯೋಗಿಸುವದರೊಂದಿಗೆ ಅವರಿಗೆ ವೇತನಾಧಾರಿತ ಉದ್ಯೋಗವನ್ನು ನೀಡಲು ಉದ್ದೇಶಿಸಿದೆ.

೧೯೯೧ ಜನಗಣತಿಯ ಪ್ರಕಾರ ೫ ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಪಟ್ಟಣಗಳಿಗೆ ಮಾತ್ರ ಈ ಕಾರ್ಯಕ್ರಮ ಅನ್ವಯಿಸುತ್ತದೆ. ಹುಬ್ಬಳ್ಳಿ – ಧಾರವಾಡ ಮಹಾನಗರ ಪಾಲಿಕೆಗೆ ಈ ಕಾರ್ಯಕ್ರಮ ಅನ್ವಯವಾಗುವುದಿಲ್ಲ.

ಈ ಕಾರ್ಯಕ್ರಮದಲ್ಲಿ ತೆಗೆದುಕೊಳ್ಳಬಹುದಾದ ಕಾಮಾಗಾರಿಗಳಿಗೆ ಬೇಕಾಗುವ ಸಾಮಗ್ರಿಗಳ ಮತ್ತು ಕಾರ್ಮಿಕ ಸಂಭಾವನಾ ವೆಚ್ಚವನ್ನು ಶೇಕಡಾ ೬೦:೪೦ ರಂತೆ ನಿಯಂತ್ರಿಸಬೇಕಾಗುತ್ತದೆ. (ಅಂದರೆ ಸಾಮಗ್ರಿಗಳಿಗೆ ಶೇಕಡಾ ೬೦ ರಷ್ಟು ಹಾಗೂ ಕಾರ್ಮಿಕರ ಸಂಭಾವನೆಗೆ ಶೇಕಡಾ ೪೦ ರಷ್ಟು) ಈ ಕಾರ್ಯಕ್ರಮದಡಿ ಕೆಲಸ ಮಾಡಿದ ಫಲಾನುಭವಿಗಳಿಗೆ ನಿಯಮಾನುಸಾರ ಪ್ರಕಟಿಸಲಾದ ಪ್ರಚಲಿತದಲ್ಲಿರುವ ಕನಿಷ್ಠ ವೇತನಗಳ ಪ್ರಕಾರ ವೇತನ ಪಾವತಿಸಬೇಕಾಗುತ್ತದೆ.

ಈ ಕಾರ್ಯಕ್ರಮವನ್ನು ರಾಜ್ಯ ಸರ್ಕಾರಗಳ ಇಐಯುಎಸ್ (ಎನ್‌ವಿರಾನ್‌ಮೆಂಟಲ್ ಇಂಪ್ರೂವ್‌ಮೆಂಟ್ ಇನ್ ಅರ್ಬನ್ ಸ್ಲಮ್) ಸ್ಕೀಮ್ ಮತ್ತು ಎನ್‌ಎಸ್‌ಡಿಪಿ (ನ್ಯಾಷನಲ್ ಸ್ಲಮ್ ಡೆವೆಲಪ್‌ಮೆಂಟ್ ಪ್ರೋಗ್ರಾಂ) ಕಾರ್ಯಕ್ರಮಗಳೊಂದಿಗೆ ಸಮನ್ವಯಗೊಳಿಸಬೇಕಾಗುತ್ತದೆ. ಆದರೆ ಈ ಕಾರ್ಯಕ್ರಮವನ್ನು ರಾಜ್ಯ ಸರ್ಕಾರಗಳ ಇಐಯುಎಸ್, ಎನ್‌ಎಸ್‌ಡಿಪಿ ಅಥವಾ ಇನ್ನ್ಯಾವುದೇ ಸ್ಕೀಮುಗಳ ಬದಲಾಗಿ ರೂಪಿಸಲಾಗಿಲ್ಲ.

**ಈ ಕಾರ್ಯಕ್ರಮದ ಅನುಷ್ಠಾನಗೊಳಿಸುವಿಕೆ ವಿಧಾನ :**

ಸಮುದಾಯ ಅಭಿವೃದ್ಧಿ ಸಂಘ (ಸಿಡಿಎಸ್) ಗಳು ಸಮೀಕ್ಷೆಯನ್ನು ನಡೆಸಿ ಆ ಪ್ರದೇಶದಲ್ಲಿ ಲಭ್ಯವಿರುವ ಕನಿಷ್ಠ ಮೂಲ ಸೌಕರ್ಯ ಸೇವೆಗಳ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು. ಈ ಪ್ರದೇಶಗಳಲ್ಲಿ ಲಭ್ಯವಿರುವ ಮೂಲಸೌಕರ್ಯ ಸೇವೆಗಳನ್ನು ಮೊದಲು ಗುರುತಿಸಲಾಗುವುದು. ಅನಂತರವಷ್ಟೆ ಅವಶ್ಯವಿರುವ ಇತರೇ ಮೂಲ ಸೌಕರ್ಯಗಳ ಪಟ್ಟಿಯನ್ನು ತಯಾರಿಸತಕ್ಕದ್ದು. ಈ ಯೋಜನೆಯಡಿ ಕನಿಷ್ಠ ಮೂಲ ಸೇವೆಗಳು ಎಂದರೆ ಇಐಯುಎಸ್ ಸ್ಕೀಮಿನಲ್ಲಿ ಅರ್ಥೈಸಿದಂತೆ ಇರುತ್ತದೆ. ಆದ್ಯತೆ

ಮೇರೆಗೆ ಸಿಡಿಎಸ್‌ಗಳು ಅವಶ್ಯವಿರುವ ಮೂಲ ಸೇವೆಗಳನ್ನು 'ಎ' ಮತ್ತು 'ಬಿ' ಪಟ್ಟಿಗಳೆಂದು ತಯಾರಿಸುವುದು. ತಯಾರಿಸಿದ ಈ ಪಟ್ಟಿಯು ಅಂತಿಮವಾಗಿದ್ದು, ಇದನ್ನು ಇನ್ನಿತರ ಯಾವುದೇ ಸಂಸ್ಥೆಯು ಬದಲಿಸಲು ಸಾಧ್ಯವಿರುವುದಿಲ್ಲ. 'ಎ' ಪಟ್ಟಿಯಲ್ಲಿ ಆ ಪ್ರದೇಶಗಳಲ್ಲಿ ಲಭ್ಯವಿರದ ಸೇವೆಗಳನ್ನು ಆದ್ಯತೆಯ ಮೇರೆಗೆ ಸೂಚಿಸಲಾಗುತ್ತದೆ ಮತ್ತು 'ಬಿ' ಪಟ್ಟಿಯಲ್ಲಿ ಅವಶ್ಯವಿರುವ ಇತರ ಮೂಲಸೌಕರ್ಯಗಳನ್ನು ಎರಡನೇ ಆದ್ಯತೆಯ ಮೇಲೆ ಸೂಚಿಸಲಾಗುತ್ತದೆ. ಸೌಕರ್ಯಗಳನ್ನು ಯಾವ ಸ್ಥಳದಲ್ಲಿ ಕಲ್ಪಿಸಬೇಕು ಎನ್ನುವ ವಿವರಗಳೊಂದಿಗೆ ಸಿಡಿಎಸ್‌ಗಳು ಈ ಪಟ್ಟಿಗಳನ್ನು ಬಡತನ ನಿರ್ಮೂಲನಾ ವಿಭಾಗಕ್ಕೆ ವರ್ಷಾರಂಭದಲ್ಲಿ ಸಲ್ಲಿಸಬೇಕಾಗುತ್ತದೆ.

ನಗರ ಬಡತನ ನಿರ್ಮೂಲನಾ ವಿಭಾಗವು ಈ ಎರಡು ಪಟ್ಟಿಗಳನ್ನು ವಿವರವಾಗಿ ಪರಿಶೀಲಿಸಿ ಈ ಸೌಕರ್ಯಗಳನ್ನು ಕಲ್ಪಿಸಲು ತಾಂತ್ರಿಕ ಅಂದಾಜುಗಳನ್ನು ಸಿದ್ಧಪಡಿಸುವ ವ್ಯವಸ್ಥೆ ಮಾಡುತ್ತದೆ. ಈ ರೀತಿಯ ವಿವರವಾದ ಅಂದಾಜು ವೆಚ್ಚಗಳನ್ನು ಮೊದಲು ಲಭ್ಯವಿರದ ಕನಿಷ್ಠ ಮೂಲ ಸೇವೆಗಳಿಗೆ ('ಎ' ಗುಂಪಿನ ಪಟ್ಟಿಗೆ) ತಯಾರಿಸಲಾಗುತ್ತದೆ. ಈ ಅಂದಾಜು ವೆಚ್ಚಗಳನ್ನು ತಯಾರಿಸುವಾಗ ನಗರಕ್ಕೆ ಲಭ್ಯವಿರುವ ಒಟ್ಟು ಹಣವನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಈ ಯೋಜನೆಗಳಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವ ಅಧಿಕಾರವನ್ನು ರಾಜ್ಯ ಸರಕಾರವು ಸ್ಥಾನಿಕ ಸರ್ಕಾರಗಳಿಗೆ ಮತ್ತು ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆಗೆ ನೀಡಿದೆ. ಒಂದು ವೇಳೆ ಸ್ಥಾನಿಕ ಸರ್ಕಾರಗಳಿಗೆ ಈ ಅಧಿಕಾರ ನೀಡಿದಲ್ಲಿ, ಅದು ಸಿಡಿಎಸ್‌ನ ಶಿಫಾರಸ್ಸುಗಳನ್ನು ಅಗತ್ಯತೆಯ ಆಧಾರದ ಮೇಲೆ ಪರಿಶೀಲಿಸಿ ಅಂತಿಮ ನಿರ್ಧಾರ ತೆಗೆದುಕೊಳ್ಳುತ್ತದೆ.

ಒಂದು ವೇಳೆ ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆ (ಡಿಯುಡಿಎ) ಗಳಿಗೆ ಈ ಅಧಿಕಾರ ನೀಡಿದಲ್ಲಿ, ಸ್ಥಾನಿಕ ಸರಕಾರವು ಸಿಡಿಎಸ್‌ನ ಪ್ರಸ್ತಾವನೆಗಳನ್ನು ತಮ್ಮ ಶಿಫಾರಸ್ಸಿನೊಂದಿಗೆ ಮತ್ತು ತಾಂತ್ರಿಕ ಅನುಮೋದನೆಯೊಂದಿಗೆ ಸೂಕ್ತ ಕ್ರಮಕ್ಕಾಗಿ ಡಿಯುಡಿಎಗೆ ಕಳುಹಿಸಿ ಕೊಡುತ್ತದೆ. ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆ (ಡಿಯುಡಿಎ)ಯು, ಸ್ವೀಕೃತವಾದ ಪ್ರಸ್ತಾವನೆಗಳನ್ನು ಯೋಗ್ಯತೆಯ ಆಧಾರದ ಮೇಲೆ ಪರಿಶೀಲಿಸುತ್ತದೆ. ಈ ಪರಿಶೀಲನಾ ಕಾರ್ಯದಲ್ಲಿ ಕನಿಷ್ಠ ಮೂಲ ಸೌಕರ್ಯಗಳಿಗೆ ಪ್ರಾಶಸ್ತ್ಯ ನೀಡುತ್ತದೆ. ಈ ಕಾಮಗಾರಿಗಳಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ಡಿಯುಡಿಎ ನೀಡುವುದು. ಸಾಮಾನ್ಯವಾಗಿ ಲಭ್ಯವಿರುವ ಅನುದಾನಕ್ಕಿಂತ ಶೇಕಡ ೨೦೦ ಕ್ಕಿಂತ ಹೆಚ್ಚಿನ ಮೊತ್ತಕ್ಕೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲು ಅವಕಾಶವಿರುವುದಿಲ್ಲ, ಈ ಕಾಮಗಾರಿಗಳನ್ನು ಸಿಡಿಎಸ್‌ಗಳು ಸಾಧ್ಯವಾದಷ್ಟರ ಮಟ್ಟಿಗೆ ಸ್ಥಾನಿಕ ಸರ್ಕಾರಗಳ ಸಾಮಾನ್ಯ ನಿಯಂತ್ರಣ ಹಾಗೂ ಮೇಲ್ವಿಚಾರಣೆಯಲ್ಲಿ ಕೈಗೊಳ್ಳುತ್ತವೆ. ಕಟ್ಟಡ ನಿರ್ಮಾಣದ

ಗುಣ ಮಟ್ಟವನ್ನು ಸ್ಥಾನಿಕ ಸರ್ಕಾರಗಳು ಹೆಚ್ಚಿನ ಮಟ್ಟದ ಕಾಳಜಿಯಿಂದ ಪರಿವೀಕ್ಷಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಇಲಾಖೆಗಳೇ ಕಾಮಗಾರಿ ಕಾರ್ಯವನ್ನು ನಿರ್ವಹಿಸಬೇಕು (ಅಂದರೆ ಎಲ್ಲಾ ಕಾಮಗಾರಿಗಳನ್ನು ಡಿಪಾರ್ಟಮೆಂಟಲ್ ವರ್ಕಗಳಾಗಿ ನಿರ್ವಹಿಸಬೇಕು) ಮತ್ತು ಈ ಬಗ್ಗೆ ಹಾಜರಿ ಪುಸ್ತಕ (ಅಂದರೆ ನಾಮಿನಲ್ ಮಾಸ್ಟರ್ ರೋಲ್‌ಗಳು) ರಿಜಿಸ್ಟರ್‌ಗಳು ಇತ್ಯಾದಿ ಇವುಗಳನ್ನು ನಿರ್ವಹಿಸುವ ಮಾರ್ಗಸೂಚಿಯನ್ನು ರಾಜ್ಯ ಸರ್ಕಾರಗಳು ನೀಡಬೇಕಾಗುತ್ತದೆ. ಸಾಧ್ಯವಾದಷ್ಟರ ಮಟ್ಟಿಗೆ ಸಾಮಗ್ರಿಗಳನ್ನು ಪೂರೈಸುವ ಕಾರ್ಯವನ್ನು ಇಲಾಖೆ ವತಿಯಿಂದ ಮಾಡಬೇಕಾಗುತ್ತದೆ, ವಿಶೇಷ ಕೌಶಲ್ಯ/ನೈಪುಣ್ಯತೆ ಬೇಕಾಗುವ ಕೆಲವು ಕಾಮಗಾರಿಗಳನ್ನು ವಿಭಾಗದ ಇಲಾಖಾ ವತಿಯಿಂದ (ಅಂದರೆ ಡಿಪಾರ್ಟಮೆಂಟಲ್ ವರ್ಕ್ ಆಗಿ) ನಿರ್ವಹಿಸಲು ಸಾಧ್ಯವಾಗದಿದ್ದಲ್ಲಿ ಅಂತಹ ಕಾಮಗಾರಿಗಳನ್ನು ಬೇರೆ ಸಂಸ್ಥೆಗಳಿಂದ ಅಥವಾ ಏಜೆನ್ಸಿಗಳಿಂದ ಸೂಕ್ತ ಟೆಂಡರ್ ಪದ್ಧತಿ/ಸರ್ಕಾರಿ ನಿಯಮಗಳ ಪ್ರಕಾರ ಮಾಡಿಸಬೇಕಾಗುತ್ತದೆ. ಈ ಯೋಜನೆಯ ಎಲ್ಲಾ ಕಾಮಗಾರಿಗಳನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು ಹಾಗೂ ಯಾವುದೇ ಕೆಲಸವನ್ನು ಅಪೂರ್ಣ ಸ್ಥಿತಿಯಲ್ಲಿ ನಿಲ್ಲಿಸಬಾರದು. ಒಂದು ವೇಳೆ ದರಗಳ ಹೆಚ್ಚಳದಿಂದ ಅಥವಾ ಯೋಜನೆಯ ವಿಸ್ತಾರದಿಂದ ಅಥವಾ ಬೇರಾವುದೇ ಕಾರಣದಿಂದ ಯೋಜನಾ ಅಂದಾಜು ವೆಚ್ಚವು ಹೆಚ್ಚಾದಲ್ಲಿ ಮತ್ತು ಈ ಹೆಚ್ಚಿನ ಹಣವು ಈ ಕಾರ್ಯಕ್ರಮದಡಿಯಲ್ಲಿ ಲಭ್ಯವಿರದ ಪಕ್ಷದಲ್ಲಿ, ಅವಶ್ಯವಿದ್ದಲ್ಲಿ ಈ ಕಾಮಗಾರಿಗಳನ್ನು ಪೂರ್ಣಗೊಳಿಸಲು ಬೇಕಾಗುವ ಹೆಚ್ಚುವರಿ ಹಣವನ್ನು ಇತರೇ ಕಾರ್ಯಕ್ರಮಗಳಿಂದ ತೆಗೆದುಕೊಂಡು ಕಾಮಗಾರಿಗಳನ್ನು ಸಂಪೂರ್ಣಗೊಳಿಸುವ ಜವಾಬ್ದಾರಿ ಮಂಜೂರಾತಿ ಸಂಸ್ಥೆ/ಅನುಷ್ಠಾನ ಸಂಸ್ಥೆ (ಅಂದರೆ ಡಿಯುಡಿಎ/ಸ್ಥಾನಿಕ ಸರ್ಕಾರ) ಗಳದ್ದಾಗಿರುತ್ತದೆ.

**ಯೋಜನಾ ನಿರ್ವಹಣೆ :**

ಸಮುದಾಯ ಮಟ್ಟದಲ್ಲಿ ಗುರುತಿಸಲಾದ ಸುಮಾರು ಪ್ರತಿ ೨೦೦೦ ಫಲಾನುಭವಿ ಕುಟುಂಬಗಳಿಗೆ ಓರ್ವ ಸಮುದಾಯ ಸಂಘಟಕರನ್ನು ಈ ಯೋಜನೆಯಡಿ (ಕಮ್ಯೂನಿಟಿ ಆರ್ಗನೈಸರ್) ನೇಮಿಸಲಾಗಿದೆ. ಸಾಧ್ಯವಾದಷ್ಟರ ಮಟ್ಟಿಗೆ ಈ ಸಮುದಾಯ ಸಂಘಟಕರು ಮಹಿಳೆಯಾಗಿರಬೇಕು ಎಂಬ ನಿಯಮವಿದೆ. ಅವರು ಈ ಕೆಲಸಕ್ಕೆ ನೇಮಿಸಲಾದ ಅಥವಾ ಸರ್ಕಾರಿ ವಿಭಾಗದಿಂದ ಎರವಲು ಪಡೆದ ಅಥವಾ ಸ್ಥಾನಿಕ ಸರ್ಕಾರದ ಗುತ್ತಿಗೆಯ ಆಧಾರದ ಮೇಲೆ ನೇಮಿಸಲಾದ ಪೂರ್ಣಕಾಲಿಕ ನೌಕರರಾಗಿರಬೇಕು. ಈ ಸಮುದಾಯ ಸಂಘಟಿಕರು ಯಾವ ರೀತಿಯ ಜವಾಬ್ದಾರಿಗಳನ್ನು ನಿಬಾಯಿಸಬೇಕು ಎಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ಸ್ವಯಂ ಸೇವಾ ಮನೋಭಾವನೆಯನ್ನು ಮೂಡಿಸುವುದು ಮತ್ತು ಪ್ರಚಾರ ಮಾಡುವುದು ಮತ್ತು ಸಮುದಾಯ ವ್ಯವಸ್ಥೆಯನ್ನು/ಗುಂಪುಗಳನ್ನು ಸಂಘಟಿಸುವುದು.

೨. ಅವಶ್ಯಕತೆಗಳನ್ನು ನಿರ್ಧರಿಸುವಲ್ಲಿ ಮತ್ತು ಯೋಜನೆಗಳನ್ನು ರೂಪಿಸುವಲ್ಲಿ ಸಮುದಾಯಕ್ಕೆ ಮಾರ್ಗದರ್ಶನ ಮಾಡುವುದು.

೩. ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಮತ್ತು ನಿರ್ವಹಿಸಲು ಸಮುದಾಯದೊಂದಿಗೆ ಕೆಲಸ ಮಾಡುವುದು.

೪. ವಲಯವಾರು ಇಲಾಖೆಗಳೊಂದಿಗೆ ಸಮುದಾಯದ ಜನರ ಪರಿಚಯವನ್ನು ಏರ್ಪಡಿಸುವುದು.

೫. ಜನರಲ್ಲಿ ಪರಸ್ಪರ ಅನುಭವ ವಿನಿಮಯವನ್ನು ಏರ್ಪಡಿಸುವುದು.

೬. ಸಮುದಾಯ ಮಟ್ಟದಲ್ಲಿ ತರಬೇತಿಯನ್ನು ಮತ್ತು ವಿಚಾರ ವಿನಿಮಯವನ್ನು ಏರ್ಪಡಿಸುವುದು.

೭. ಸ್ವಯಂ ಉದ್ಯೋಗ ಉದ್ಯಮಗಳಿಗೆ ತಮ್ಮ ಪ್ರದೇಶದಲ್ಲಿ ಅರ್ಹ ಫಲಾನುಭವಿಗಳನ್ನು ಗುರುತಿಸುವುದು. ಫಲಾನುಭವಿಗಳ ಹೆಸರುಗಳನ್ನು ಸಿಡಿಎಸ್ ಅನುಮೋದಿಸಿದ ನಂತರ ಹಣಕಾಸು ಬಿಡುಗಡೆಗಾಗಿ ಅರ್ಜಿ ಸಲ್ಲಿಸುವುದು ಮತ್ತು ತದನಂತರ ಈ ಅರ್ಜಿಯ ಸ್ವೀಕೃತಿಯ ಬಗ್ಗೆ ಅಂತಿಮ ವಿಲೇವಾರಿಯಾಗುವ ತನಕ ಸ್ಥಾನಿಕ ಸರ್ಕಾರದೊಂದಿಗೆ/ಬ್ಯಾಂಕುಗಳೊಂದಿಗೆ ಮತ್ತು ಆಡಳಿತದೊಂದಿಗೆ ಸಂಪರ್ಕವಿಟ್ಟುಕೊಂಡು ಅನುಸರಣಾ ಕಾರ್ಯ ಕೈಗೊಳ್ಳುವುದು.

೮. ಹಣ ಸಹಾಯ ಪಡೆದ ಫಲಾನುಭವಿಗಳು ಸ್ವಯಂ ಉದ್ಯೋಗ ಉದ್ಯಮ ಸ್ಥಾಪಿಸುವ ಕಾರ್ಯ ಸಮರ್ಪಕವಾಗಿ ನಡೆಯುತ್ತಿರುವ ಬಗ್ಗೆ ಪರಿಶೀಲಿಸುವುದು ಮತ್ತು ಇದಕ್ಕಾಗಿ ನಿರಂತರ ಅಗತ್ಯ ಸಹಕಾರ ನೀಡುವುದು ಮತ್ತು ಫಲಾನುಭವಿಗಳು ಸಮಯಾನುಸಾರ ಸಾಲ ಮರುಪಾವತಿ ಮಾಡುವ ಬಗ್ಗೆ ನಿರ್ವಹಿಸುವುದು.

೯. ನಗರ ಬಡತನ ನಿರ್ಮೂಲನೆ ಗುರಿ ಸಾಧನೆಗಾಗಿ ಆಕೆಗೆ ವಹಿಸಲಾಗುವ ಇನ್ನಾವುದೇ ಕಾರ್ಯವನ್ನು ನೆರವೇರಿಸುವುದು. ಪಟ್ಟಣ ಹಂತದಲ್ಲಿ ಯೋಜನಾ ಅಧಿಕಾರಿಯ ನೇತೃತ್ವದಲ್ಲಿ ಒಂದು ನಗರ ಬಡತನ ನಿರ್ಮೂಲನಾ ವಿಭಾಗವನ್ನು ಸ್ಥಾಪಿಸಲಾಗಿದೆ. ಸಮುದಾಯ ಸಂಘಟಿಕರ (ಸಿಓಗಳ) ಮತ್ತು ಸಮುದಾಯ ಅಭಿವೃದ್ಧಿ ಸಂಘ (ಸಿಡಿಎಸ್) ಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು ಈ ಯೋಜನಾಧಿಕಾರಿಯ ಜವಾಬ್ದಾರಿಯಾಗಿರುತ್ತದೆ. ವಿವಿಧ ಸಂಘಗಳ ಮತ್ತು ಸ್ಥಾನಿಕ ಸರ್ಕಾರದ ಚಟುವಟಿಕೆಗಳನ್ನು

ಸಮನ್ವಯಗೊಳಿಸುವುದು ಮತ್ತು ಅವರ ಚಟುವಟಿಕೆಗಳು ಸಮಾನ ಗುರಿಗಳನ್ನು ಸಾಧಿಸುವ ಹಾಗೆ ಮಾಡುವುದು ಈ ಸಮಿತಿಯ ಜವಾಬ್ದಾರಿಯಾಗಿರುತ್ತದೆ. ಎಲ್ಲಾ ವಲಯವಾರು ಇಲಾಖೆಗಳ ಯೋಜನೆಯ ಉದ್ದೇಶವನ್ನು ಸರಿಯಾಗಿ ತಿಳಿದುಕೊಳ್ಳುವ ಹಾಗೆ ಮಾಡುವುದು ಮತ್ತು ಈ ಉದ್ದೇಶದ ಸಾಧನೆಗೆ ವಿವಿಧ ವಲಯವಾರು ಇಲಾಖೆಗಳೊಡನೆ ಪರಸ್ಪರ ವಿನಿಮಯವನ್ನು ಏರ್ಪಡಿಸುವುದು ಮತ್ತು ತೆಗೆದುಕೊಂಡ ಯೋಜನೆಗಳಲ್ಲಿ ಪರಸ್ಪರ ಹೊಂದಾಣಿಕೆ ಇರುವಂತೆ ನೋಡಿಕೊಳ್ಳುವುದು ಈ ಸಮಿತಿಯ ಕೆಲಸವಾಗಿರುತ್ತದೆ. ನಗರದಲ್ಲಿನ ಬಡಜನರ ಗುಂಪುಗಳನ್ನು ಗುರುತಿಸುವ ಕಾರ್ಯವನ್ನು ಹಾಗೂ ಸಾರ್ವಜನಿಕ ಸೌಲಭ್ಯಗಳನ್ನು ಒದಗಿಸುವ ಪ್ರದೇಶಗಳನ್ನು ಯುಪಿಎ ವಿಭಾಗ ಮೊದಲಿಗೆ ಗುರುತಿಸುತ್ತದೆ. ನಗರ ಬಡತನ ನಿರ್ಮೂಲನಾ ವಿಭಾಗದ/ಯೋಜನಾ ಅಧಿಕಾರಿಯ ಇತರ ಕಾರ್ಯಗಳು /ಜವಾಬ್ದಾರಿಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

೧. ಸಿಡಿಎಸ್‌ನ ಕೆಲಸಗಳಿಗೆ ಮಾರ್ಗದರ್ಶನ ನೀಡುವುದು ಮತ್ತು ನಿರ್ವಹಿಸುವುದು.

೨. ಜಿಲ್ಲಾ ಹಾಗೂ ಸ್ಥಾನಿಕ ಸರ್ಕಾರದ ಮಟ್ಟದಲ್ಲಿ ತಯಾರಿಸಲಾದ ವಲಯವಾರು ಕಾರ್ಯಕ್ರಮಗಳನ್ನು ಹಾಗೂ ಸಮುದಾಯ ಯೋಜನೆಗಳನ್ನು ಒಂದುಗೂಡಿಸಿ ನಗರಗಳಿಗೆ ಸಮಾನ ಉದ್ದೇಶದ ನಗರ ಯೋಜನೆಗಳನ್ನು ತಯಾರಿಸುವುದು.

೩. ಯುಪಿಇಯ ಯೋಜನೆಯ ಸಮಗ್ರ ಹಾಗೂ ಸಮನ್ವಯಿತ ಅನುಷ್ಠಾನಕ್ಕೆ ಸಹಕರಿಸುವುದು.

೪. ಸಂವಿಧಾನದ ೭೪ನೇ ತಿದ್ದುಪಡಿ ಕಾಯ್ದೆಯ ಅನ್ವಯ ಸಾಂಘಿಕ ವ್ಯವಸ್ಥೆಯಲ್ಲಿನ ವಿವಿಧ ಸಂಸ್ಥೆಗಳೊಡನೆ ಮತ್ತು ಸ್ಥಾನಿಕ ಸರ್ಕಾರಗಳೊಡನೆ ಸಂಬಂಧ ಹಾಗೂ ವಿನಿಮಯವನ್ನು ಉತ್ತಮಪಡಿಸುವುದು.

೫. ನಗರ ಮಟ್ಟದಲ್ಲಿ ಮಾನವ ಹಾಗೂ ಹಣಕಾಸು ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು.

೬. ಸಮುದಾಯದ ಕಾರ್ಯ ಯೋಜನೆಗಳನ್ನು ಪರಿಶೀಲಿಸಿ ಅನುಮೋದಿಸುವುದು.

೭. ನಗರ ಮಟ್ಟದಲ್ಲಿ ಯೋಜನೆಗಳ ಚಟುವಟಿಕೆಗಳನ್ನು ನಿರ್ವಹಿಸುವುದು (ಎಂ.ಐ.ಎಸ್).

ರಾಜ್ಯ ಸರ್ಕಾರವು ಜಿಲ್ಲಾ ಮಟ್ಟದಲ್ಲಿ ಒಂದು ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆ (ಡಿಯುಡಿಎ) ಯನ್ನು ಜಿಲ್ಲಾ ಯೋಜನಾ ಅಧಿಕಾರಿಯೆಂದು ನೇಮಿಸಲಾದ ಅಧಿಕಾರಿಯ ನೇತೃತ್ವದಲ್ಲಿ ಸ್ಥಾಪಿಸಿದೆ. ಈ ಯೋಜನೆಯ ಅಧಿಕಾರಿಯು ಆ ಜಿಲ್ಲೆಯ ಜಿಲ್ಲಾಧಿಕಾರಿಗಳ ಮಾರ್ಗದರ್ಶನದಲ್ಲಿ ಕಾರ್ಯನಿರ್ವಹಿಸಬೇಕಾಗುತ್ತದೆ ಮತ್ತು ಆ ಜಿಲ್ಲೆಯಲ್ಲಿ ಎಲ್ಲಾ ನಗರಗಳ ಬಡತನ ನಿರ್ಮೂಲನಾ

ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಸಹಾಯ ಒದಗಿಸಬೇಕಾಗುತ್ತದೆ.

ಡಿಯುಡಿಎ ಯನ್ನು ಸೊಸೈಟಿಸ್ ರಿಜಿಸ್ಟ್ರೇಷನ್ ಕಾಯ್ದೆ ಅಥವಾ ಇನ್ನಿತರ ಸಂಬಂಧಿತ ಕಾಯ್ದೆಯ ಪ್ರಕಾರ ನೊಂದಾಯಿಸಬೇಕಾಗುತ್ತದೆ. ಜಿಲ್ಲಾ ಯೋಜನಾ ಅಧಿಕಾರಿಯ ಕೆಲಸಗಳು ಈ ಕೆಳಗಿನಂತಿವೆ.

೧. ಜಿಲ್ಲಾ ಮಟ್ಟದಲ್ಲಿ ನಗರ ಬಡತನ ನಿರ್ಮೂಲನಾ ಕಾರ್ಯನೀತಿಯನ್ನು ರೂಪಿಸುವದು.
೨. ಜಿಲ್ಲಾ/ನಗರ/ಪಟ್ಟಣ ಮಟ್ಟದಲ್ಲಿ ವಿವಿಧ ವಲಯವಾರು ಇಲಾಖೆಗಳು ಕೇಂದ್ರೀಕೃತವಾಗಿ ಕೆಲಸ ಮಾಡುವಂತೆ ಪ್ರೋತ್ಸಾಹಿಸುವುದು/ಸಹಾಯ ಮಾಡುವುದು ಮತ್ತು ಇದಕ್ಕೆ ಅವಶ್ಯಕವಾದ ವಾತಾವರಣವನ್ನು ಸೃಷ್ಟಿಸುವುದು.
೩. ಜಿಲ್ಲಾ ಮಟ್ಟದಲ್ಲಿ ವಿಚಾರಗಳ/ಮಾಹಿತಿಗಳ ಮತ್ತು ಅನುಭವ ವಿನಿಮಯವನ್ನು ಪ್ರೋತ್ಸಾಹಿಸುವುದು ಮತ್ತು ಜಿಲ್ಲಾ ಮಟ್ಟದಲ್ಲಿ ನಗರಗಳ ಸಮಾನ ಉದ್ದೇಶಗಳ ಉಸ್ತುವಾರಿ ಮಾಡುವುದು ಹಾಗೂ ಜಿಲ್ಲಾ ಹಂತದಲ್ಲಿ ಅವು ಅನುಷ್ಠಾನಗೊಳ್ಳುವಂತೆ ನೋಡಿಕೊಳ್ಳುವುದಾಗಿದೆ.

ರಾಜ್ಯ ಮಟ್ಟದಲ್ಲಿ ಒಬ್ಬ ರಾಜ್ಯ ಸರ್ಕಾರದ ಪೂರ್ಣಕಾಲಿಕ ಹಿರಿಯ ಅಧಿಕಾರಿಯ ನೇತೃತ್ವದಲ್ಲಿ ರಾಜ್ಯ ನಗರಾಭಿವೃದ್ಧಿ ಸಂಸ್ಥೆ (ಎಸ್‌ಯುಡಿಎ– ಸ್ಟೇಟ್ ಅರ್ಬನ್ ಡೆವೆಲಪ್‌ಮೆಂಟ್ ಏಜೆನ್ಸಿ) ಯನ್ನು ಸ್ಥಾಪಿಸಲಾಗುವುದು. ಈ ಬಡತನ ನಿರ್ಮೂಲನಾ ಕಾರ್ಯಕ್ರಮಗಳಿಗೆ ಎಸ್‌ಯುಡಿಎ ಸಂಸ್ಥೆಯ ರಾಜ್ಯ ಮಟ್ಟದಲ್ಲಿ ಕೇಂದ್ರ ಸಂಸ್ಥೆಯಾಗಿ (ನೋಡಲ್ ಏಜನ್ಸಿ) ಕಾರ್ಯ ನಿರ್ವಹಿಸಬೇಕಾಗುತ್ತದೆ. ರಾಜ್ಯ ಮಟ್ಟದಲ್ಲಿ ಕಾರ್ಯಕ್ರಮಗಳ ಉಸ್ತುವಾರಿ, ಸೂಕ್ತ ಕಾರ್ಯನೀತಿ ನಿರ್ದೇಶನ ಹಾಗೂ ಯೋಜನೆಗಳ ನಿರ್ವಹಣೆಯಲ್ಲಿ ರಾಜ್ಯ ಮಟ್ಟದಲ್ಲಿ ಸಂಪರ್ಕ ಏರ್ಪಡಿಸುವುದು, ಎಸ್‌ಯುಡಿಎನ ಕೆಲವು ಕರ್ತವ್ಯಗಳಾಗಿರುತ್ತವೆ. ಎಸ್‌ಯುಡಿಎ ಅನ್ನು ಸೊಸೈಟಿಸ್ ರಿಜಿಸ್ಟ್ರೇಷನ್ ಕಾಯ್ದೆ ಅಥವಾ ಇತರ ಸೂಕ್ತ ಕಾಯ್ದೆಯಡಿ ನೊಂದಾಯಿಸಬೇಕಾಗುತ್ತದೆ.

**ರಾಜ್ಯ ನಗರಾಭಿವೃದ್ಧಿ ಸಂಸ್ಥೆಯ ಕೆಲಸಗಳು / ಜವಾಬ್ದಾರಿಗಳು ಈ ಕೆಳಗಿನಂತೆ ವಿವರಿಸಲಾಗಿದೆ.**

೧. ರಾಜ್ಯದ ನಗರಾಭಿವೃದ್ಧಿ ತಂತ್ರದ ಚೌಕಟ್ಟಿನಲ್ಲಿ ರಾಜ್ಯದ ನಗರ ಬಡತನ ನಿರ್ಮೂಲನಾ ಕಾರ್ಯಕ್ರಮವನ್ನು ಮತ್ತು ಕಾರ್ಯನೀತಿಯನ್ನು ರೂಪಿಸುವುದು.
೨. ಯೋಜನಾನುಷ್ಠಾನದಲ್ಲಿ ಪಾಲ್ಗೊಳ್ಳುವಿಕೆಯ ವ್ಯವಸ್ಥೆಯನ್ನು ಮತ್ತು ಯೋಜನೆಗಳ ಸಮನ್ವಯದ ಗುರಿಯನ್ನು ಸಾಧಿಸಲು ಬೇಕಾಗುವ ತಾಂತ್ರಿಕ ನೆರವನ್ನು ಒದಗಿಸುವುದು.

೩. ಯೋಜನೆಗಳನ್ನು ಪರಿಶೀಲಿಸುವುದು ಮತ್ತು ನಿರ್ವಹಿಸುವುದು (ಎಂಐಎಸ್-- ಮಾಹಿತಿ ನಿರ್ವಹಣಾ ವ್ಯವಸ್ಥೆ)

೪. ವಿವಿಧ ನಗರ/ಪಟ್ಟಣಗಳ ಭೇಟಿಗಳನ್ನು ಯೋಜಿಸುವುದು ಮತ್ತು ವ್ಯವಸ್ಥೆ ಮಾಡುವುದು.

೫. ರಾಜ್ಯ ತರಬೇತಿ ಯೋಜನೆಯನ್ನು ರೂಪಿಸುವುದು, ಸಮನ್ವಯಿಸುವುದು ಮತ್ತು ಉಸ್ತುವಾರಿ ಮಾಡುವುದು.

೬. ಸಂಪನ್ಮೂಲಗಳನ್ನು ಸಂಗ್ರಹಿಸುವುದು ಮತ್ತು ಅಗತ್ಯತೆ ಹಾಗೂ ಸಾಧನೆಗನುಸಾರ ಹಂಚಿಕೆಗಳನ್ನು ನಿರ್ಧರಿಸುವುದು.

೭. ಯೋಜನಾ ಸ್ಥಳಗಳಿಗೆ ಭೇಟಿ ನೀಡಿ ಯೋಜನಾನುಷ್ಠಾನ ವಿಷಯದಲ್ಲಿ ಮಾರ್ಗದರ್ಶನ ಮಾಡುವುದು ಮತ್ತು ಮೇಲ್ವಿಚಾರಣೆ ನಡೆಸುವುದು.

೮. ಕೇಂದ್ರದ ಯುಇಪಿಎ ವಿಭಾಗಕ್ಕೆ ಯೋಜನೆಯ ಪ್ರಗತಿಯ ಬಗ್ಗೆ ಸಮಯಾನುಸಾರ ತಿಂಗಳಿಗೊಮ್ಮೆ ಅಥವಾ ನಿಗದಿಪಡಿಸಿದ ಸಮಯಗಳಿಗೆ ವರದಿ ಸಲ್ಲಿಸತಕ್ಕದ್ದು.

ಈ ಮಾರ್ಗಸೂಚಿಯ ತಳಹದಿಯಲ್ಲಿ ರಾಜ್ಯ ಸರ್ಕಾರವು ಈ ಯೋಜನೆಯ ಅನುಷ್ಠಾನಕ್ಕೆ ತನ್ನದೇ ಆದ ಇತರೆ ಮಾರ್ಗಸೂಚಿಗಳನ್ನು ಸಹ ತಯಾರಿಸಬಹುದಾಗಿದೆ.

**ಈ ಯೋಜನೆಯಲ್ಲಿ ಆರ್ಥಿಕ ಸುಧಾರಣೆಗಾಗಿ ನಗರದ ಬಡ ಕುಟುಂಬಗಳನ್ನು ಗುರುತಿಸುವ ವಿಧಾನ ಅನುಬಂಧ– ೧** (ವಿತರಣಾ ಪಟ್ಟಿ –೧)

೧. ಈ ಮೊದಲು ತಿಳಿಸಿದಂತೆ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕಾಗುತ್ತದೆ. ಅಲ್ಲದೇ ಈ ಕಾರ್ಯಕ್ರಮದಡಿ ವರಮಾನಗಳಿಕೆಯ ವಿಶೇಷ ಸಾಲ ಯೋಜನೆಗಳಿಗಾಗಿ ನಗರದ ಬಡವರಲ್ಲಿ ಅರ್ಹ ಬಡ ಫಲಾನುಭವಿಗಳನ್ನು ಗುರುತಿಸಲು ಕೆಲವು ಆರ್ಥಿಕೇತರ ಮಾನದಂಡಗಳನ್ನು ಸಹ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಉದ್ದೇಶಕ್ಕಾಗಿ ಏಳು ಆರ್ಥಿಕೇತರ ಮಾನದಂಡಗಳನ್ನು ಗುರುತಿಸಲಾಗಿದೆ. ಇವು ಜೀವನ ಮಟ್ಟವನ್ನು ಅಳತೆ ಮಾಡುವ ಅಂಶಗಳಾಗಿದ್ದು ಈ ಕೆಳಗಿನಂತಿವೆ.

ಅ) ರೂಫ್ (ಮೇಲ್ಛಾವಣಿ) ಆ) ಫ್ಲೋರ್ (ನೆಲ) ಇ) ವಾಟರ್ (ನೀರು) ಈ) ಸ್ಯಾನಿಟೇಷನ್ (ನೈರ್ಮಲ್ಯತೆ) ಉ) ಎಜುಕೇಷನ್ ಲೆವೆಲ್ (ಶಿಕ್ಷಣ ಮಟ್ಟ) ಊ) ಟೈಪ್ ಆಫ್ ಎಂಪ್ಲಾಯ್‌ಮೆಂಟ್ (ಉದ್ಯೋಗ ವಿವರ) ಎ) ಸ್ಟೇಟಸ್ ಆಫ್ ಚಿಲ್ಡ್ರನ್ ಇನ್ ಎ ಹೌಸ್ (ಮನೆಯಲ್ಲಿ ಮಕ್ಕಳ ಪರಿಸ್ಥಿತಿ).

೨. ಪ್ರತಿಯೊಂದು ಮಾನದಂಡಕ್ಕೆ ಅವುಗಳ ಪರಿಸ್ಥಿತಿಯನ್ನು ಸೂಚಿಸುವ ಆರು ಗುಣಲಕ್ಷಣಗಳನ್ನು (ವಸ್ತುಸ್ಥಿತಿ) ಸೂಚಿಸಲಾಗಿದೆ. ಈ ಗುಣಲಕ್ಷಣಗಳು ಪ್ರತಿ ಅಂಶ ದುಸ್ಥಿತಿ ಅಥವಾ ಉತ್ತಮ ಪರಿಸ್ಥಿತಿಯಲ್ಲಿರುವುದನ್ನು ಸೂಚಿಸುತ್ತದೆ. ಇದರನುಗುಣವಾಗಿ ಪ್ರತಿಯೊಂದು ಗುಣ ಲಕ್ಷಣಕ್ಕೆ (ವಸ್ತುಸ್ಥಿತಿಗೆ) 'ವೇಟೇಜ್ ಸ್ಕೋರ್' (ತುಲನಾತ್ಮಕ ಗುಣಾಂಕ) ನ್ನು ನೀಡಲಾಗಿದೆ. ಅಂದರೆ ೧೦೦ ಗುಣಾಂಕದ ದುಸ್ಥಿತಿಯಿಂದ ೦ ಗುಣಾಂಕದ ಉತ್ತಮ ಪರಿಸ್ಥಿತಿಯವರೆಗೆ ಗುಣಾಂಕಗಳನ್ನು ನೀಡಲಾಗಿದೆ. ಬೇರೇ ರೀತಿ ಹೇಳುವುದಾದರೆ, ವಿತರಣಾ ಪಟ್ಟಿ –೧ ರಲ್ಲಿ ಹೇಳಿರುವ ನಿಬಂಧನೆಗಳ ಪ್ರಕಾರ ಅತೀ ಹೆಚ್ಚು ಗುಣಾಂಕಗಳನ್ನು ಪಡೆಯುವ ನಗರದ ಬಡವರಿಗೆ ಈ ಕಾರ್ಯಕ್ರಮದಡಿ ಮೊದಲ ಆದ್ಯತೆ ನೀಡಬೇಕಾಗಿರುತ್ತದೆ.

೩. ವಿತರಣಾ ಪಟ್ಟಿ –೨ ರಲ್ಲಿ ವಿವಿಧ ಮಾನದಂಡ ಅಂಶಗಳ ಗುಣ ಲಕ್ಷಣಗಳಿಗೆ (ವಸ್ತು ಸ್ಥಿತಿಗಳಿಗೆ) ನೀಡಬೇಕಾದ ಆದ್ಯತೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ವೇಟೇಜ್ ಸ್ಕೋರ್‌ನ ಪ್ರಕಾರ ಕುಟುಂಬಗಳ/ಭಾವಿ ಫಲಾನುಭವಿಗಳ ಆದ್ಯತೆಯನ್ನು ಅಂದರೆ ಮೊದಲ ಆದ್ಯತೆಯಿಂದ ಕೊನೆಯ ಆದ್ಯತೆಯವರೆಗೆ ನಿರ್ಧರಿಸುವ ವಿಧಾನವನ್ನು ಈ ಯೋಜನೆಯಲ್ಲಿ ಅಳವಡಿಸಿಕೊಂಡಿರುವುದು ಕಂಡು ಬಂದಿದೆ.

**ಉದಾಹರಣೆಗೆ :**

ನಗರದ ಓರ್ವ ಬಡ ಕುಟುಂಬಕ್ಕೆ ಗುರುತಿಸಲಾದ ಆರ್ಥಿಕವಲ್ಲದ ಅಂಶಗಳಲ್ಲಿ ಈ ಕೆಳಗೆ ನೀಡಿರುವ ಗುಣ ಲಕ್ಷಣಗಳಿರುತ್ತವೆ ಎಂದು ಭಾವಿಸಿದರೆ :

| **ಕ್ರ.ಸಂ** | **ಮಾನದಂಡ** | **ಗುಣಲಕ್ಷಣ/ವಸ್ತುಸ್ಥಿತಿ** | **ನಿಯಮಗಳಂತೆ ನೀಡಬೇಕಾದ ಸ್ಕೋರ್ (ಗುಣಾಂಕ)** |
|---|---|---|---|
| ೧. | ಮೇಲ್ಹಾವಣೆ | ಆಸ್‌ಬೆಸ್ಟಾಸ್ | ೬೦ |
| ೨. | ನೆಲ | ಬ್ರಾಜಿ | ೮೦ |
| ೩. | ನೀರು | ಸರಬರಾಜು ಇರುವುದಿಲ್ಲ | ೧೦೦ |
| ೪. | ನೈರ್ಮಲ್ಯತೆ | ಸಮುದಾಯ ಶೌಚಾಲಯ | ೮೦ |
| ೫. | ಶಿಕ್ಷಣ ಮಟ್ಟ | ಮಧ್ಯಮ ವರ್ಗ ತೇರ್ಗಡೆ | ೬೦ |
| ೬. | ಉದ್ಯೋಗ ವಿವರ | ಅರೆಕುಶಲ (ಸೆಮಿ ಸ್ಕಿಲ್ಡ್) | ೮೦ |
| ೭. | ಮನೆಯಲ್ಲಿ ಮಕ್ಕಳ ಸ್ಥಿತಿಗತಿ | ದುಡಿಯುತ್ತಿದ್ದಾರೆ ಆದರೆ ಕೆಲವು ಭಾರಿ ಸಾಕ್ಷರತಾ ತರಗತಿಗಳಿಗೆ ಹೋಗುತ್ತಾರೆ. | ೮೦ |
| | **ಒಟ್ಟು** | | **೫೪೦** |

ಆಧಾರ: ೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ–೨೦೦೭

ಕುಟುಂಬದ- ಅಂದರೆ ಭಾವಿ ಫಲಾನುಭವಿಯ ಸರಾಸರಿ ಸ್ಕೋರ್ (ಗುಣಾಂಕ) * - ೫೪೦/೭ - ಶೇ ೭೭.೧. ವಿವರಣಾ ಪಟ್ಟಿ - ೩ ರಲ್ಲಿ ನೀಡಿರುವ ವಿವರಗಳ ಪ್ರಕಾರ ಶೇ.೭೭.೧ ಸ್ಕೋರ್ (ಗುಣಾಂಕ) ಪಡೆದ ಕುಟುಂಬವನ್ನು ದ್ವಿತೀಯ ಶ್ರೇಣಿಯಲ್ಲಿ ಸೇರಿಸಬೇಕಾಗುತ್ತದೆ.

**ಅನುಬಂಧ – ೧** (ವಿತರಣಾ ಪಟ್ಟಿ –೨)

ಎಸ್‌ಜೆಎಸ್‌ಆರ್‌ವೈ ಯೋಜನೆಯ ಸೌಲಭ್ಯ ಪಡೆಯಲು ಬಡ ಕುಟುಂಬಗಳನ್ನು ಆಯ್ಕೆ ಮಾಡಲು ಗಣನೆಗೆ ತೆಗೆದುಕೊಳ್ಳಲಾಗುವ ಆರ್ಥಿಕೇತರ ಮಾನದಂಡಗಳು ಈ ಕೆಳಗಿನಂತೆ ವಿವರಿಸಲಾಗಿದೆ.

| ಕ್ರ. ಸಂ | ಅಂಶಗಳು ಅ) ಜೀವನ ಗುಣಮಟ್ಟ | **ಪ್ರತಿ ಗುಣಲಕ್ಷಣಕ್ಕೆ ನೀಡಲಾದ ವೇಟೇಜ್** | | | | | |
|---|---|---|---|---|---|---|---|
| | | ೧೦೦ | ೮೦ | ೬೦ | ೪೦ | ೨೦ | ೦ |
| | | (ಅ) | (ಆ) | (ಇ) | (ಈ) | (ಉ) | (ಊ) |
| ೧. | ಮೇಲ್ಛಾವಣೆ | ಹುಲ್ಲಿನ (ಥ್ಯಾಚ್) | ಟಢಪಾಲು (ಟಾರ್ಪಾಲಿನ್) | ಆಸ್‌ಬೈಸ್ಟಸ್ | ಮರದ್ದು | ಟೈಲ್ಸ್ (ಹಂಚಿನ) | ಸಿಮೆಂಟ್ |
| ೨. | ನೆಲ | ಮಣ್ಣಿನ | ಬಾಜ್ರಿ | ಇಟ್ಟಿಗೆ | ಸಿಮೆಂಟ್ | ಚಿಪ್ಸ್ | ಕಲ್ಲು/ಮಾರ್ಬಲ್ (ಅಮೃತ ಶಿಲೆ) |
| ೩. | ನೀರು | ೫೦೦ ಮಾರು /ಗಜ ದೂರದವರೆಗೆ ನೀರು ಸರಬರಾಜು ಇರುವುದಿಲ್ಲ | ಸಮುದಾಯ ಕೈ ಪಂಪು | ಸಮುದಾಯ ಕೊಳವೆ ಬಾವಿ (ಕೊಳವೆ ಬಾವಿ) | ಖಾಸಗೀ ಕೈ ಪಂಪು | ಖಾಸಗೀ ತೂಬು( ಕೊಳವೆ ಬಾವಿ) | ಖಾಸಗೀ ಕೊಳಾಯಿ/ ನೀರು ಸರಬರಾಜು |
| ೪. | ನೈರ್ಮಲ್ಯತೆ | ಮಲವಿಸರ್ಜನೆಗೆ ಸರಿಯಾದ ವ್ಯವಸ್ಥೆ ಇಲ್ಲ (ಬಯಲಿನಲ್ಲಿ ಮಲ ವಿಸರ್ಜನೆ) | ಸಮುದಾಯ ಶುಲ್ಕ ಶೌಚಾಲಯ | ಸಾರ್ವಜನಿಕ ಪೋರ್ ಫ್ಲಷ್ ಶೌಚಾಲಯ | ಖಾಸಗೀ ಶುಲ್ಕ ಶೌಚಾಲಯ | ಖಾಸಗೀ ಪೋರ್ ಫ್ಲಷ್ ಶೌಚಾಲಯ | ಒಳಚರಂಡಿ ವ್ಯವಸ್ಥೆಯೊಂದಿಗೆ ಖಾಸಗೀ ಫ್ಲಷ್ ಶೌಚಾಲಯ |
| ೫. | ಶಿಕ್ಷಣ ಮಟ್ಟ | ಅನಕ್ಷರಸ್ಥ | ಪ್ರಾಥಮಿಕ ವರ್ಗ ತೇರ್ಗಡೆ | ಮಧ್ಯಮ ವರ್ಗ ತೇರ್ಗಡೆ | ಮೆಟ್ರಿಕ್ಯುಲೇಷನ್ | ಪದವಿ ಪೂರ್ವ ತರಗತಿ ತೇರ್ಗಡೆ(೧೦+೨) | ಪದವಿಯಲ್ಲಿ ತೇರ್ಗಡೆ |
| ೬. | ಉದ್ಯೋಗ ವಿವರ | ಕುಶಲತೆ ಇಲ್ಲದೆ ದಿನಗೂಲಿ/ನಿರುದ್ಯೋಗಿ | ಅರೆಕುಶಲ | ಸ್ವಯಂ ಉದ್ಯೋಗ ಬೀದಿ/ ತಳ್ಳುವ ಚಕ್ಕಡಿ | ಸ್ವಂತ ಕಾರ್ಯಸ್ಥಳ | ಸ್ವಂತ ಕಾರ್ಯ ಮತ್ತು ಮಾರುವ ಸ್ಥಳ | ಸಾಮಾಜಿಕ ಭದ್ರತೆ ಸಹಿತ ಸಂಘಟಿತ ವಲಯ |
| ೭. | ಮನೆಯಲ್ಲಿ ಮಕ್ಕಳ ಸ್ಥಿತಿಗತಿ | ದುಡಿಯುವ ಹಾಗೂ ಯಾವುದೇ ಶಾಲೆ ಅಥವಾ ಸಾಕ್ಷರತಾ ತರಗತಿಗಳಿಗೆ ಹೋಗದ ಮಕ್ಕಳು | ದುಡಿಯುವ ಆದರೆ ಕೆಲವು ಬಾರಿ ಶಾಲೆ ಅಥವಾ ಸಾಕ್ಷರತಾ ತರಗತಿಗಳಿಗೆ ಹೋಗುವ ಮಕ್ಕಳು | ದುಡಿಯುವ ಆದರೆ ಸರಿಯಾಗಿ ಶಾಲೆ ಅಥವಾ ಸಾಕ್ಷರತಾ ತರಗತಿಗೆ ಹೋಗುವ ಮಕ್ಕಳು | ದುಡಿಯುವ ಮತ್ತು ಯಾವುದೇ ತರಗತಿಗೆ ಹೋಗುವ ಮಕ್ಕಳು | ದುಡಿಯುವ ಮತ್ತು ಕೆಲವು ಬಾರಿ ಮಾತ್ರ ಶಾಲೆ ಅಥವಾ ಸಾಕ್ಷರತಾ ತರಗತಿಗಳಿಗೆ ಹೋಗುವ ಮಕ್ಕಳು | ದುಡಿಯುವ ಮತ್ತು ಸರಿಯಾಗಿ ಶಾಲೆ ಅಥವಾ ಸಾಕ್ಷರತಾ ತರಗತಿಗಳಿಗೆ ಹೋಗುವ ಮಕ್ಕಳು |

**ಸೂಚನೆ:** ಇದು ಕೇವಲ ನಿರ್ದೇಶನದ ಮಾದರಿ ಮಾತ್ರವಾಗಿರುತ್ತದೆ. ಆದರೆ ಪಟ್ಟಣಗಳಲ್ಲಿ ಬಡವರಲ್ಲಿ ಕಡುಬಡವರನ್ನು ಗುರುತಿಸಲು ಆಯಾ ಪಟ್ಟಣದ ನಗರ ಬಡತನ ನಿರ್ಮೂಲನಾ ವಿಭಾಗವು ಸಂಬಂಧಪಟ್ಟ ಸಾಮಾಜಿಕ ಸಂಸ್ಥೆಗಳೊಂದಿಗೆ ಸಮಾಲೋಚಿಸಿ ಸ್ಥಿತಿಗತಿಯ ಅನುಗುಣವಾಗಿ ಬೇರೆ ಮಾನದಂಡಗಳನ್ನು ರೂಪಿಸಿ ಉಪಯೋಗಿಸಬಹುದಾಗಿದೆ.

ಆಧಾರ: ೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ-೨೦೦೭

## ಅನುಬಂಧ – ೧ (ವಿತರಣಾ ಪಟ್ಟಿ –೩)

ನಗರದ ಬಡವರಲ್ಲಿ ಫಲಾನುಭವಿಗಳನ್ನು ಗುರುತಿಸಲು ವಿಧಿಸಲಾದ ಆರ್ಥಿಕೇತರ ಮಾನದಂಡಗಳು

| ಕ್ರಸಂ | ವೇಟೇಜ್ ಸ್ಕೋರ್ (ತುಲನಾತ್ಮಕ ಗುಣಾಂಕ) | ಆದ್ಯತೆಯ ಶ್ರೇಣಿ |
|---|---|---|
| ೧. | ೮೦–೧೦೦ | ಮೊದಲನೆಯಆದ್ಯತೆ (ಅತಿ ಹೆಚ್ಚು) |
| ೨. | ೬೦–೮೦ | ದ್ವಿತೀಯ ಆದ್ಯತೆ |
| ೩. | ೪೦–೬೦ | ತೃತೀಯ ಆದ್ಯತೆ |
| ೪. | ೨೦–೪೦ | ನಾಲ್ಕನೆಯ ಆದ್ಯತೆ |
| ೫. | ೦–೨೦ | ಐದನೆಯ ಆದ್ಯೆತೆ (ಅತಿ ಕಡಿಮೆ ಆದ್ಯತೆ) |

**ಆಧಾರ: ೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ ೨೦೦೭**

ಆರ್ಥಿಕ ಅಂಶದಲ್ಲಿ ಬಡತನ ರೇಖೆಗಿಂತ ಕೆಳಮಟ್ಟದವರನ್ನು ಅತಿ ಹೆಚ್ಚು ಆದ್ಯತೆಯ ಮೇಲೆ ಪರಿಗಣಿಸುವುದರ ಜೊತೆಗೆ ಹೆಚ್ಚುವರಿಯಾಗಿ ಈ ಮೇಲಿನ ಮಾನದಂಡಗಳನ್ನು ಪರಿಗಣಿಸಲು ಅವಕಾಶ ನೀಡಲಾಗಿದೆ.

## ಅನುಬಂಧ– ೨

**ಯುಎಸ್ಇಪಿ ಅಡಿಯಲ್ಲಿ ಚಿಕ್ಕ ಉದ್ಯಮ (ಮೈಕ್ರೋ ಎಂಟರ್‌ಪ್ರೈಸಸ್) ಸ್ಥಾಪಿಸುವುದರೊಂದಿಗೆ ವ್ಯಕ್ತಿಯ ಸ್ವಯಂ ಉದ್ಯೋಗ (ಇಂಡಿವಿಜುಯಲ್ ಸೆಲ್ಫ್ ಎಂಪ್ಲಾಯ್‌ಮೆಂಟ್) ದ ಬಗ್ಗೆ ಕಾರ್ಯವಿಧಾನದ ವಿವರಗಳು:**

| | |
|---|---|
| ಫಲಾನುಭವಿಗಳನ್ನು ಗುರುತಿಸುವುದು | ಅನುಬಂಧ –೧ ರಲ್ಲಿ ಸೂಚಿಸಲಾದ ಸಮೀಕ್ಷೆಯ ಪ್ರಕಾರ ಗುರುತಿಸಿ ಪಟ್ಟಿ ಮಾಡಿದ ಫಲಾನುಭವಿಗಳನ್ನು ಮಾತ್ರ ಪರಿಗಣಿಸಲಾಗುವುದು. |
| ಅರ್ಹತೆ | ಯಾವುದೇ ಪಟ್ಟಣ ಕೇಂದ್ರದಲ್ಲಿ ನಗರ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ನಗರದ ಬಡ ಜನರು |
| ಕುಟುಂಬದ ವರಮಾನ | ೧೯೯೧–೯೨ ರ ಬೆಲೆಗಳ ಆಧಾರದ ಮೇಲೆ ೧೧,೮೫೦ ರೂಪಾಯಿಗಳಿಗಿಂತ ಕಡಿಮೆ ವಾರ್ಷಿಕ ಕುಟುಂಬ ವರಮಾನ |

| | |
|---|---|
| ನಿವಾಸ ಸ್ಥಳ | ಕನಿಷ್ಠ ಮೂರು ವರ್ಷಗಳಿಂದ ಅದೇ ಪಟ್ಟಣದಲ್ಲಿ ವಾಸಿಸುತ್ತಿರಬೇಕು. |
| ಸುಸ್ತಿ ಸ್ಥಿತಿಗತಿ (ಸಾಲ ಪಾವತಿ ಮಾಡದವರು) | ಯಾವುದೇ ರಾಷ್ಟ್ರೀಯ ಬ್ಯಾಂಕ್/ಹಣಕಾಸು ಸಂಸ್ಥೆ/ಸಹಕಾರಿ ಬ್ಯಾಂಕ್‌ಗಳಲ್ಲಿ ಸುಸ್ತಿದಾರನಾಗಿರ ಕೂಡದು.(ಸಾಲ ಮರುಪಾವತಿ ಮಾಡದ ದಾಖಲೆ) |
| ತೆಗೆದುಕೊಳ್ಳಬಹುದಾದ ಉದ್ಯೋಗಗಳ ವಿವರ/ ಚಟುವಟಿಕೆಗಳಸ್ವರೂಪ | ಅ) ಯಾವುದೇ ವಿಶೇಷ ನೈಪುಣ್ಯತೆ ಬೇಕಾಗದ ಪಟ್ಟಣ ಸೇವೆಗಳು : ಟೀ ಅಂಗಡಿ, ದಿನಪತ್ರಿಕೆ/ಮ್ಯಾಗ್‌ಜಿನ್ ಅಂಗಡಿ, ಐಸ್‌ಕ್ರೀಮ್ ಮಾರಾಟ, ಹಾಲು ಮಾರಾಟ, ಪಾನ್, ಸಿಗರೇಟ್ ಅಂಗಡಿ, ರಿಕ್ಷಾ ತುಳಿಯುವುದು, ಹಣ್ಣು/ತರಕಾರಿ ಮಾರಾಟ, ಲಾಂಡ್ರಿ ಕೆಲಸ ಇತ್ಯಾದಿ.<br><br>ಆ) ವಿಶೇಷ ನೈಪುಣ್ಯತೆಯ ಅಗತ್ಯವಿರುವ ಪಟ್ಟಣ ಸೇವೆಗಳು:ಟಿವಿ/ರೇಡಿಯೋ/ರೆಫ್ರಿಜರೇಟರ್/ಟೈಪ್‌ರೈಟರ್/ಕೂಲರ್/ಸೈಕಲ್/ಡೀಸೆಲ್ ಮೋಟಾರ್/ಡೀಸೆಲ್ ಇಂಜಿನ್ /ವಾಚು/ಗೃಹ ಬಳಕೆಯ ವಿದ್ಯುತ್ ಸಾಮಗ್ರಿ ರಿಪೇರಿ, ಕೇಟರಿಂಗ್ (ಹೋಟೆಲ್) ಡ್ರೈಕ್ಲೀನಿಂಗ್, ಬೆತ್ತದ ಕುರ್ಚಿ, ಹೊಲೆಯುವುದು,ಮೋಟಾರು ವೈಡಿಂಗ್, ಪಾದರಕ್ಷೆ ರಿಪೇರಿ, ಬುಕ್ ಬೈಂಡಿಂಗ್ ಮತ್ತು ಮನೆಗಳ ದುರಸ್ಥಿ ಹಾಗೂ ಕಟ್ಟಡಕ್ಕೆ ಸಂಬಂಧಪಟ್ಟ ಕೆಲಸಗಳಾದ ಪ್ಲಂಬಿಂಗ್, ಮರೆಗೆಲಸ, ಪೈಂಟಿಂಗ್ ಪಾಲಿಸಿಂಗ್, ಟೈಲ್ಸ್ ಹಾಕುವುದು. ಗ್ಲಾಸ್ ಕೂಡಿಸುವುದು ಮತ್ತು ವಿದ್ಯುತ್ ಸಲಕರಣೆ ಜೋಡಿಸುವದು ಇತ್ಯಾದಿ.<br><br>ಇ) ನೈಪುಣ್ಯತೆ ಅಗತ್ಯವಿರುವ ಚಿಕ್ಕ ತಯಾರಿಕೆ ಉದ್ಯಮಗಳು/ಘಟಕಗಳು : ವಾಷಿಂಗ್ ಪೌಡರ್, ಅಗರಬತ್ತಿ, ಬಟ್ಟೆ, ಪ್ಲಾಸ್ಟಿಕ್ ಗೊಂಬೆ, ಪಾದರಕ್ಷೆ ಮರದ/ಸ್ಟೀಲ್ ಫರ್ನಿಚರ್‌ಗಳನ್ನು ತಯಾರಿಸುವುದು: ಸೀರೆಗಳನ್ನು ಪ್ರಿಂಟ್ ಮಾಡುವುದು, ನೇಯುವುದು, ಮಡಿಕೆ ಕೆಲಸ, ಕುಲುಮೆ ಕೆಲಸ, ಸ್ಟೀಲ್ ಪಾತ್ರೆ/ ಸಾಮಾನುಗಳನ್ನು ತಯಾರಿಸುವುದು ಆಹಾರ ಪದಾರ್ಥ ತಯಾರಿಕೆ ಬಾಲ್‌ಪೆನ್ ತಯಾರಿಸುವುದು ಇತ್ಯಾದಿ.<br><br>ಈ) ಕೃಷಿ ಹಾಗೂ ಕೃಷಿ ಸಂಬಂಧಿತ ಚಟುವಟಿಕೆಗಳಿಗೆ/ ಸಣ್ಣ ಕೈಗಾರಿಕೆಗಳಿಗೆ/ವ್ಯಾಪಾರ ಚಟುವಟಿಕೆಗಳಿಗೆ ಕಾರ್ಯಗಳಿಗೆ ಅಂದರೆ ಜನರಲ್ ಸ್ಟೋರ್ಸ್, ಕಿರಾಣಿ |

| | |
|---|---|
| | ಅಂಗಡಿ, ಕಟ್ಟಡ ಸಾಮಗ್ರಿ ಅಂಗಡಿ, ರೆಡಿಮೇಡ್ ಬಟ್ಟೆಗಳ ಅಂಗಡಿ ಹಾಗೂ ಡೈರಿ ಉತ್ಪನ್ನಗಳಿಗೆ ಸಹಾಯ ನೀಡಬೇಕಾಗುತ್ತದೆ.<br><br>ಉ) ತಾನು ಆಯ್ದ ವ್ಯವಹಾರ/ಉದ್ದಿಮೆ ಗಳಲ್ಲಿ ಫಲಾನುಭವಿಯು ಆ ಮುಂಚೆಯೇ ನೊಂದಾಯಿತ ಸರ್ಕಾರೇತರ ಸಂಸ್ಥೆ/ ಸ್ವಯಂಸೇವಾ ಸಂಸ್ಥೆಯಲ್ಲಿ ತರಬೇತಿ ಹೊಂದಿದ್ದಲ್ಲಿ ಹಾಗೂ ಈ ಬಗ್ಗೆ ಪ್ರಮಾಣ ಪತ್ರ ನೀಡಿದಲ್ಲಿ ಈ ಯೋಜನೆಯಡಿ ತರಬೇತಿ ಪಡೆಯುವ ಅವಶ್ಯಕತೆ ಇರುವುದಿಲ್ಲ.<br><br>ಊ) ಫಲಾನುಭವಿಯು ಈಗಾಗಲೇ ವಿವಿಧ ಕೆಲಸಗಳಾದ ಮಡಿಕೆ ಮಾಡುವುದು (ಕುಂಬಾರಿಕೆ), ಕಾರ್ಪೆಂಟರಿ (ಮರಗೆಲಸ) ಚಪ್ಪಲಿ ಹೊಲೆಯುವುದು (ಚಮ್ಮಾರಿಕೆ) ಹಾಗೂ ಕಬ್ಬಿಣ ಕುಲುಮೆ ಕೆಲಸಗಳನ್ನು ಕಲಿತಿದ್ದಲ್ಲಿ, ಈ ಯೋಜನೆಯಡಿ ತರಬೇತಿ ಪಡೆಯುವ ಅವಶ್ಯಕತೆ ಇರುವುದಿಲ್ಲ. ಆದರೆ ಈ ವಿಷಯದ ಬಗ್ಗೆ ಸ್ಥಾನಿಕ ಸರ್ಕಾರವು ಬ್ಯಾಂಕಿಗೆ ಅರ್ಜಿಯನ್ನು ಮಾಡುವ /ಕಳುಹಿಸುವ ಮುಂಚೆಯೇ ಪ್ರಮಾಣೀಕರಿಸಬೇಕಾಗುತ್ತದೆ.<br><br>ಋ) ಫಲಾನುಭವಿಯು ಆಯ್ದ ಉದ್ಯಮ/ವ್ಯವಹಾರ ಬಗ್ಗೆ ನೊಂದಾಯಿತ ಖಾಸಗೀ/ ಸಾರ್ವಜನಿಕ ಕಂಪನಿಯಲ್ಲಿ ಆ ಮುಂಚೆಯೇ ತರಬೇತಿ ಹೊಂದಿದ್ದು, ಈ ಬಗ್ಗೆ ಆ ನೊಂದಾಯಿತ ಖಾಸಗೀ/ ಸಾರ್ವಜನಿಕ ಸಂಸ್ಥೆಯ ಪ್ರಮಾಣ ಪತ್ರವಿದ್ದಲ್ಲಿ ಈ ಯೋಜನೆಯಡಿ ತರಬೇತಿ ಪಡೆಯುವ ಅವಶ್ಯಕತೆ ಇರುವುದಿಲ್ಲ. |
| ಯೋಜನಾವೆಚ್ಚ | ಒಬ್ಬ ಫಲಾನುಭವಿ ಈ ಕಾರ್ಯಕ್ರಮದಡಿ ೫೦,೦೦೦ ರೂಪಾಯಿ ಮೊತ್ತದ ವರೆಗಿನ ಗುರುತಿಸಲಾದ ಯಾವುದೇ ಯೋಜನೆಯನ್ನು ತೆಗೆದುಕೊಳ್ಳಬಹುದು. ಇಬ್ಬರು ಹಾಗೂ ಹೆಚ್ಚು ಫಲಾನುಭವಿಗಳು ಪಾಲುಗಾರಿಕೆಯ ಮೇಲೆ ಒಂದುಗೂಡಿದರೆ ಹೆಚ್ಚು ಮೊತ್ತದ ಯೋಜನೆಗಳನ್ನು ತೆಗೆದುಕೊಳ್ಳಬಹುದು, ಆದರೆ ಪ್ರತಿಯೊಬ್ಬರ ಪಾಲು ೫೦.೦೦೦ ರೂಪಾಯಿ ಅಥವಾ ಅದಕ್ಕಿಂತ ಕಡಿಮೆ ಇದ್ದಲ್ಲಿ ಮಾತ್ರ ಇದನ್ನು ಅನುಮತಿಸಲಾಗುವುದು. |

| | |
|---|---|
| ಸಹಾಯ ಧನ (ಸಬ್ಸಿಡಿ) | ಪ್ರತಿ ಫಲಾನುಭವಿಗೆ ಪ್ರಾಜೆಕ್ಟ್ ಮೊತ್ತದ ಶೇಕಡ ೧೫ ರಷ್ಟು ಹಣವನ್ನು ಗರಿಷ್ಠ ಮಿತಿ ೭೫೦೦ ರೂಪಾಯಿಗಳಿಗೆ ಒಳಪಡಿಸಿ ಸಹಾಯಾನುಧಾನವನ್ನು ನೀಡಲಾಗುವುದು. ಒಬ್ಬರಿಗಿಂತ ಹೆಚ್ಚು ಜನ ಒಂದುಗೂಡಿ ಪಾಲುಗಾರಿಕೆಯ ಮೇಲೆ ಒಂದು ಯೋಜನೆಯನ್ನು ಪ್ರಾರಂಭಿಸಿದರೆ ಸಹಾಯಾನುಧಾನವನ್ನು ಪ್ರತಿ ಪಾಲುದಾರರಿಗೆ ಯೋಜನಾ ಮೊತ್ತದಲ್ಲಿ ಅವರ ಪಾಲಿನ ಶೇಕಡಾ ೧೫ ರಷ್ಟು ಹಣವನ್ನು ಗರಿಷ್ಠ ೭,೫೦೦ ರೂಪಾಯಿಗಳಿಗೆ ಒಳಪಡಿಸಿ ನೀಡಲಾಗುವುದು. |
| (ಮಾರ್ಜಿನ್ ಹಣ) | ಪ್ರತಿ ಫಲಾನುಭವಿ ಯೋಜನಾ ಮೊತ್ತದ ಶೇಕಡಾ ೫ ರಷ್ಟು ಹಣವನ್ನು ಮಾರ್ಜಿನ್ ಹಣವಾಗಿ ನಗದು ರೂಪದಲ್ಲಿ ಕಟ್ಟಬೇಕಾಗುತ್ತದೆ. |
| ಸಾಲ (ಸಬ್ಸಿಡಿ ಸೇರಿ) | ಯೋಜನಾ ಮೊತ್ತದ ಶೇಕಡಾ ೯೫ ರಷ್ಟು ಹಣವನ್ನು ಸಂಯುಕ್ತ ಸಾಲವಾಗಿ ರಿಸರ್ವ ಬ್ಯಾಂಕ್ ಆಫ್ ಇಂಡಿಯಾ ಕಾಲಕಾಲಕ್ಕೆ ಈ ಆದ್ಯತಾ ವಿಭಾಗಗಳಿಗೆ ನಿಗದಿಪಡಿಸಿದ ಬಡ್ಡಿದರಗಳಿಗೆ ನೀಡಲಾಗುವುದು. |
| ಸಾಲಗಳ ಮೇಲೆ ಕೊಲ್ಯಾಟರಲ್ ಗ್ಯಾರಂಟಿ ನೀಡುವುದು | ಈ ಸಂಬಂಧ ನೀಡಿದ ಸಾಲಗಳಿಗೆ ಯಾವುದೇ ಕೊಲ್ಯಾಟರಲ್ ಗ್ಯಾರಂಟಿ ಅವಶ್ಯಕತೆ ಇರುವುದಿಲ್ಲ. ಆದರೆ ಈ ಯೋಜನೆಯಡಿ ನಿರ್ಮಿಸಲಾದ ಆಸ್ತಿಗಳನ್ನು ಸಾಲ ನೀಡಿದ ಬ್ಯಾಂಕಿಗೆ ಸಾಲ ಮರುಪಾವತಿ ಆಗುವವರೆಗೆ ಅಡವಿಡಬೇಕಾಗುತ್ತದೆ. |
| ಸಾಲ ಮರುಪಾವತಿ | ಬ್ಯಾಂಕ್ ನಿರ್ಧಾರದಂತೆ, ಮೊದಲ ೬ರಿಂದ ೧೮ ತಿಂಗಳುಗಳ ಹಣಪಾವತಿಯ ವಿನಾಯಿತಿಯೊಂದಿಗೆ ಹಣಪಾವತಿಯ ಅವಧಿಯು ೩ ವರ್ಷಗಳಿಂದ ೭ ವರ್ಷಗಳ ವರೆಗೆ ಇರುತ್ತದೆ.<br><br>ನಗರದ ಸಿಡಿಎಸ್‌ಗಳು/ ಬಡತನ ನಿರ್ಮೂಲನಾ ವಿಭಾಗದ ಪ್ರಕಾರ ಸಾಲ ಮರುಪಾವತಿಯ ವಿಷಯದಲ್ಲಿ ಬ್ಯಾಂಕ್‌ಗಳಿಗೆ ಸಹಾಯ ಮಾಡಬೇಕಾಗುತ್ತದೆ. |

ಆಧಾರ: ೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ–೨೦೦೭

## ಅನುಬಂಧ– ೩

## ಯುಎಸ್‌ಇಪಿ ಅಡಿಯಲ್ಲಿ ತರಬೇತಿ ಮತ್ತು ಸಂಬಂಧಿತ ಸೌಕರ್ಯದ ಸಹಕಾರ ನೀಡುವ ಬಗ್ಗೆ ಕಾರ್ಯ ವಿಧಾನದ ವಿವರಗಳು

| | | |
|---|---|---|
| ೧. ಅ) | ತರಬೇತಿ ಕಾರ್ಯಕ್ರಮದ ನಿಯಮಗಳು ಒಂದು ತರಬೇತಿ ವರ್ಗದ ಸಾಮಾನ್ಯ ಸಂಖ್ಯೆ | ೨೫ ಫಲಾನುಭವಿಗಳು |
| ಆ) | ಒಂದು ತರಬೇತಿಗೆ ಕಾರ್ಯಕ್ರಮದ ಅವಧಿ | ಕನಿಷ್ಠ ೩೦೦ ಗಂಟೆಗಳು * |
| ಇ) | ತರಬೇತಿಗೆ ತಗಲುವ ಸರಾಸರಿ ವೆಚ್ಚ (ಸಾಮಗ್ರಿಗಳ ವೆಚ್ಚ, ತರಬೇತುದಾರರ ಸಂಭಾವನೆ, ಸಂಸ್ಥೆಗೆ ತಗಲುವ ಇತರ ವೆಚ್ಚಗಳು ಮತ್ತು ಫಲಾನುಭವಿಗಳಿಗೆ ನೀಡುವ ಮಾಸಿಕ ಭತ್ಯೆ ಸೇರಿ) | ೨೦೦೦ ರೂಪಾಯಿಗಳು ** |
| ೨. | ತರಬೇತಿಸಂಸ್ಥೆಗಳಿಗೆಸೌಲಭ್ಯ/ಸಹಕಾರ | ಫಲಾನುಭವಿಗಳಿಗೆ ತರಬೇತಿ ನೀಡಲು ಬೇಕಾಗುವ ಸಾಮಗ್ರಿಗಳನ್ನು ಸಹಾಯಕ ಸಲಕರಣೆಗಳನ್ನು ಅಥವಾ ವರ್ಕ್‌ಷಾಪ್‌ಗಳನ್ನು ಕಟ್ಟಲು ಬೇಕಾಗುವ ಸಲಕರಣೆಗಳನ್ನು ಕೊಳ್ಳಲು ತಗಲುವ ವೆಚ್ಚವನ್ನು ಭರಿಸಲು ಖಾಸಗೀ ಸಂಸ್ಥೆ ಸೇರಿ ಯಾವುದೇ ತರಬೇತಿ ಸಂಸ್ಥೆಯು ಧನಸಹಾಯವನ್ನು ಪಡೆಯಬಹುದು. ಈ ಬಗ್ಗೆ ಪ್ರಸ್ತಾವನೆಯನ್ನು ಸ್ಥಾನಿಕ ಸರ್ಕಾರಗಳ ಮೂಲಕ ಜಿಲ್ಲಾ ನಗರಾಭಿವೃದ್ಧಿ ಸಂಸ್ಥೆ (ಡಿಯುಡಿಎ)ಗೆ ಸಲ್ಲಿಸಿ ಅನುಮೋದನೆ ಪಡೆಯ ಬೇಕಾಗುತ್ತದೆ. ತರಬೇತಿ ಮತ್ತು ಸೌಕರ್ಯಕ್ಕಾಗಿ ಮೀಸಲಿಟ್ಟ ಹಣದ ಶೇಕಡಾ ೧೫ ರಷ್ಟು ಹಣವನ್ನು ಡಿಯುಡಿಎಯು ತರಬೇತಿ ಸಂಸ್ಥೆಗಳಿಗೆ ನೀಡಬಹುದು. |

| | | |
|---|---|---|
| ೩. | ಚಿಕ್ಕ ಉದ್ಯಮಗಳು ತಯಾರಿಸಿದ ವಸ್ತುಗಳ ಮಾರಾಟಕ್ಕೆ ಸೌಕರ್ಯ ಕಲ್ಪಿಸುವುದು. | ಈ ಕೆಲಸಕ್ಕಾಗಿ ಡಿಯುಡಿಎ ಸ್ಥಾನಿಕ ಸರ್ಕಾರದೊಂದಿಗೆ ಸಮಾಲೋಚಿಸಿ ಮಾರಾಟ ಸಹಕಾರ ಯೋಜನೆಗಳನ್ನು ಅನುಮೋದಿಸಬಹುದು. ಈ ಕಾರ್ಯಕ್ಕಾಗಿ ತರಬೇತಿ ಮತ್ತು ಸಹಕಾರಕ್ಕಾಗಿ ಮೀಸಲಿಟ್ಟ ಹಣದ ಶೇಕಡ ೧೫ ರಷ್ಟು ಹಣವನ್ನು ವ್ಯಯ ಮಾಡಬಹುದು ಅವಶ್ಯವಿದ್ದಲ್ಲಿ ಈ ಯೋಜನೆಯಡಿ ಸ್ಥಾಪಿತವಾದ ಚಿಕ್ಕ ಉದ್ಯಮಗಳು ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡಲು ಸಹಕರಿಸಲು ಯಾವ ಸೌಲಭ್ಯ ಮತ್ತು ಸಹಕಾರವನ್ನು ನೀಡಬೇಕು ಎನ್ನುವುದರ ಬಗ್ಗೆ ಡಿಯುಡಿಎ ಸ್ಥಾನಿಕ ಸಂಸ್ಥೆಗಳೊಂದಿಗೆ ಸಮಾಲೋಚಿಸಿ ನಿರ್ಧರಿಸುತ್ತದೆ. ಈ ದಿಸೆಯಲ್ಲಿ ಬಳಕೆಯಾಗದೆ ಉಳಿದ ಹಣವನ್ನು ತರಬೇತಿ ನೀಡಲು ಉಪಯೋಗಿಸಬಹುದು. |

ಆಧಾರ: ೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ ೨೦೦೭

೪. ಪರಿಣತಿ ವರ್ಧನೆಗೆ (ನೈಪುಣ್ಯ ಹೆಚ್ಚಳಕ್ಕೆ) ನೀಡುವ ತರಬೇತಿಯ ಅವಧಿಯು ಕನಿಷ್ಠ ೩೦೦ ತಾಸುಗಳ ಸಮಯಕ್ಕೆ ಒಳಪಡಿಸಿ ಕನಿಷ್ಠ ೨ ತಿಂಗಳಿನಿಂದ ಗರಿಷ್ಠ ೬ ತಿಂಗಳುಗಳವರೆಗೆ ಇರುತ್ತದೆ. ತರಬೇತಿ ಪ್ರತಿ ಫಲಾನುಭವಿಗೆ ೨,೦೦೦ ರೂಪಾಯಿಗೆ ಮೀರದಂತೆ ಖರ್ಚು ಮಾಡಬೇಕಾಗುತ್ತದೆ.

೫. ತರಬೇತಿಗೆ ಬೇಕಾಗುವ ಸಾಮಗ್ರಿಗಳ ವೆಚ್ಚ, ತರಬೇತುದಾರರ ಸಂಭಾವನೆ, ತರಬೇತಿ ಸಂಸ್ಥೆಗೆ ತಗಲುವ ಇತರ ಖರ್ಚುಗಳು ಮತ್ತು ಫಲಾನುಭವಿಗಳಿಗೆ ನೀಡುವ ಮಾಸಿಕ ಭತ್ಯೆ ಸೇರಿ ಪ್ರತಿ ಫಲಾನುಭವಿಗಳಿಗೆ ತಗಲುವ ಮಾಸಿಕ ವೆಚ್ಚವು ತರಬೇತಿಯ ವಿಧಾನ, ಅವಧಿ ಮತ್ತು ಉದ್ಯಮದ ಮೇಲೆ ಪ್ರತಿಯೊಬ್ಬ ಫಲಾನುಭವಿಗೆ ಕನಿಷ್ಠ ೧೦೦ ರೂಪಾಯಿಗಳ ಮಾಸಿಕ ಭತ್ಯೆಯನ್ನು (ಸ್ಟೈಫಂಡ್‌ನ್ನು) ಮತ್ತು ಪ್ರತಿ ಫಲಾನುಭವಿಗೆ ಕನಿಷ್ಠ ೨೩೦ ರೂಪಾಯಿಗಳ ಮಾಸಿಕ ತರಬೇತಿ ವೆಚ್ಚಕ್ಕೆ ಒಳಪಡಿಸಿ ನೀಡುವ ತರಬೇತಿಯ ಮೇಲೆ ಅವಲಂಭಿತವಾಗಿರುತ್ತದೆ.

**ಎಸ್‌ಜೆಎಸ್‌ಆರ್‌ವೈ ಯೋಜನೆಯ ಅಡಿಯಲ್ಲಿ ಸ್ಥಾಪಿಸಲಾಗಿರುವ ಸಾಂಘಿಕ ವ್ಯವಸ್ಥೆ:**

**ಅನುಬಂಧ – ೪**

ಈ ಯೋಜನೆಯಡಿಯಲ್ಲಿ ಸ್ಥಾಪಿಸಲಾಗುವ ಸಾಂಘಿಕ ವ್ಯವಸ್ಥೆಯಲ್ಲಿ ನೆರೆಹೊರೆ ಗುಂಪುಗಳು (ನೈಬರ್‌ಹುಡ್ ಗ್ರೂಪ್ಸ್/ಎನ್‌ಹೆಚ್‌ಜಿ), ನೆರೆಹೊರೆ ಸಮಿತಿ (ನೈಬರ್ ಹುಡ್ ಸಮಿತಿ/ಎನ್‌ಹೆಚ್‌ಸಿ) ಹಾಗೂ ಸಮುದಾಯಾಭಿವೃದ್ಧಿ ಸಂಘ (ಕಮ್ಯುನಿಟಿ ಡೆವೆಲಪ್‌ಮೆಂಟ್ ಸೊಸೈಟಿ) ಗಳಂತಹ ಸಾಮಾಜಿಕ ಸಂಸ್ಥೆಗಳು ಒಳಗೊಂಡಿರುತ್ತವೆ.

**ನೈಬರ್‌ಹುಡ್ ಗ್ರೂಪ್ಸ್ (ಎನ್‌ಹೆಚ್‌ಜಿ) ನೆರೆಹೊರೆ ಗುಂಪುಗಳು):**

ಈ ಗುಂಪು ಒಂದು ಮೊಹಲ್ಲಾ ಅಥವಾ ಬಸ್ತಿ ಅಥವಾ ನೆರೆಹೊರೆಯಲ್ಲಿ ವಾಸಿಸುವ ಮಹಿಳೆಯರ ಚಿಕ್ಕ ವಿದ್ಯುಕ್ತವಲ್ಲದ ಸಮೂಹವಾಗಿರುತ್ತದೆ. (ಈ ಗುಂಪಿನ ಸಂಖ್ಯೆ ಕೊಳಚೆ ಪ್ರದೇಶದಲ್ಲಿ ವಾಸಿಸುವ ಸುಮಾರು ೧೦ ರಿಂದ ೪೦ ಮಹಿಳೆಯರಿಂದ ಪ್ರತಿನಿಧಿಸಲ್ಪಟ್ಟಿರುತ್ತದೆ). ಒಂದು ಎನ್‌ಹೆಚ್‌ಜಿ ಸೀಮೆಯನ್ನು ನಿರ್ಧರಿಸುವಾಗ ಒಂದೇ ವಿಧದ ಸಮಾನ ಮಟ್ಟದ ಜನರನ್ನು ಹಾಗೂ ಒಂದು ಪ್ರದೇಶದ ಅಕ್ಕಪಕ್ಕದ ಜನರನ್ನು ತೆಗೆದುಕೊಳ್ಳಬೇಕಾಗುತ್ತದೆ. ಈ ಗುಂಪಿನಲ್ಲಿ ಸ್ವಯಂ ಸೇವೆಗೆ ಸಿದ್ಧವಿರುವ ಓರ್ವ ಮಹಿಳೆಯನ್ನು ಗುಂಪಿನ ಸದಸ್ಯರ ಒಪ್ಪಿಗೆಯ ಮೇರೆಗೆ ಅಥವಾ ಚುನಾವಣೆಯ ಮೂಲಕ ಅಥವಾ ಇನ್ನಾವುದೇ ಪ್ರಜಾತಂತ್ರ ವಿಧಾನದ ಮೂಲಕ ನಿವಾಸಿ ಸಮಾಜ, ಸ್ವಯಂ ಸೇವಕಿ (ರೆಸಿಡೆಂಟ್ ಕಮ್ಯುನಿಟಿ ವಾಲೆಂಟಿಯರ್ (ಆರ್‌ಸಿವಿ) ಎಂದು ಆರಿಸಬೇಕು. ಅವಶ್ಯವಿದ್ದಲ್ಲಿ ಈ ಸ್ವಯಂ ಸೇವಕರನ್ನು ಸರದಿ ಪ್ರಕಾರ ನಿಯುಕ್ತಿ ಮಾಡಬಹುದು ಅಥವಾ ನಿಗದಿತ ಕಾಲಾವಧಿಯ ನಂತರ ಬದಲಿಸಬಹುದು. ಆರ್‌ಸಿವಿಯ ಕರ್ತವ್ಯಗಳು ಈ ಕೆಳಗಿನಂತಿರುತ್ತವೆ.

೧. ಆ ಗುಂಪಿನ ಕುಟುಂಬಗಳಿಗೆ ಮಾಹಿತಿ ಹಾಗೂ ಸಂಪರ್ಕದ ಮಾಧ್ಯಮವಾಗಿ ಸೇವೆಯನ್ನು ನಿರ್ವಹಿಸಬೇಕು.

೨. ನೈಬರ್‌ಹುಡ್ ಕಮಿಟಿ (ಎನ್‌ಹೆಚ್‌ಸಿ – ನೆರೆಹೊರೆ ಸಮಿತಿ) ಮತ್ತು ಕಮ್ಯುನಿಟಿ ಡೆವೆಲಪ್‌ಮೆಂಟ್ ಸೊಸೈಟಿ (ಸಿಡಿಎಸ್ – ಸಮುದಾಯಾಭಿವೃದ್ಧಿ ಸಂಘ) ಮತ್ತು ಇತರ ವೇದಿಕೆಗಳಲ್ಲಿ ತಮ್ಮ ಸಮೂಹದ ಅಭಿಪ್ರಾಯವನ್ನು ವ್ಯಕ್ತಪಡಿಸುವುದು.

೩. ನೆರೆಹೊರೆ ಮಟ್ಟದ ಆಯ್ದ ಚಟುವಟಿಕೆಗಳನ್ನು ಯೋಜಿಸುವಾಗ, ಅನುಷ್ಠಾನಗೊಳಿಸುವಾಗ ಹಾಗೂ ನಿರ್ವಹಣೆಯಲ್ಲಿ ಸಹಕಾರ ನೀಡುವುದು.

೪. ಸಮುದಾಯ ಸುಧಾರಣೆಗಾಗಿ ಸಹ ಭಾಗಿಗಳಾಗುವಂತೆ ಜನರನ್ನು ಪ್ರೋತ್ಸಾಹಿಸುವುದು ಮತ್ತು ಉತ್ತೇಜಿಸುವುದು.

೫. ಥ್ರಿಪ್ಟ್ ಅಂಡ್ ಕ್ರೆಡಿಟ್ (ಉಳಿತಾಯ ಮತ್ತು ಸಾಲ ನೀಡುವ) ಸೊಸೈಟಿಗಳ ಸದಸ್ಯರಾಗಲು ಮತ್ತು ಸಮುದಾಯ ಅಭಿವೃದ್ಧಿ ನಿಧಿಗೆ ಧನ ಸಹಾಯ ಮಾಡಲು ಜನರನ್ನು ಪ್ರೇರೇಪಿಸುವುದು.

**ನೈಬರ್‌ಹುಡ್ ಕಮಿಟಿಗಳು (ಎನ್‌ಹೆಚ್‌ಸಿ – ನೆರೆಹೊರೆ ಸಮಿತಿಗಳು)**

ನೈಬರ್‌ಹುಡ್ ಕಮಿಟಿಯು ಒಂದು ನಿರ್ದಿಷ್ಟ ಪ್ರದೇಶದಲ್ಲಿ (ಹತ್ತಿರದ ಪ್ರದೇಶಗಳನ್ನು ತೆಗೆದುಕೊಳ್ಳಬೇಕು) ಸಾಧ್ಯವಿದ್ದಲ್ಲಿ ಒಂದು ಚುನಾವಣಾ ವಾರ್ಡಿನಲ್ಲಿರುವ ನೈಬರ್‌ಹುಡ್ ಗ್ರೂಪ್ (ಎನ್‌ಹೆಚ್‌ಜಿ – ನೆರೆಹೊರೆ ಗುಂಪು) ಗಳ ಪ್ರತಿನಿಧಿಗಳ ವಿದ್ಯುಕ್ತ ಸಂಘಟನೆಯಾಗಿರುತ್ತದೆ. ನೈಬರ್‌ಹುಡ್ ಗ್ರೂಪ್‌ಗಳ ಎಲ್ಲಾ ಆರ್‌ಸಿವಿಗಳು ಈ ಸಮಿತಿಯ ಕಾರ್ಯಕಾರಿ ಸದಸ್ಯರಾಗಿರುತ್ತಾರೆ (ಮತದಾನ ಹಕ್ಕಿನೊಂದಿಗೆ) ಮತ್ತು ನೈಬರ್‌ಹುಡ್ ಕಮಿಟಿಯ ವ್ಯಾಪ್ತಿಯಲ್ಲಿ ಬರುವ ಸಂಬಂಧಿತ ಪ್ರತಿಯೊಂದು ಕುಟುಂಬದ ಓರ್ವ ಮಹಿಳೆ ಈ ಸಮಿತಿಯ ಸದ್ಯರಾಗಿರುತ್ತಾರೆ (ಮತದಾನದ ಹಕ್ಕುಗಳಲ್ಲದೆ). ಕಮ್ಯುನಿಟಿ ಆರ್ಗನೈಸರ್ಸ್ (ಸಿಒ–ಸಮಾಜ ಸಂಘಟಕರು), ಇತರ ವಿಭಾಗೀಯ ಕಾರ್ಯಕ್ರಮಗಳ ಪ್ರತಿನಿಧಿಗಳು (ಐಸಿಡಿಎಸ್ ಸೂಪರ್‌ವೈಸರ್) ಶಾಲಾ ಶಿಕ್ಷಕರು, ಎಎನ್‌ಎಮ್ (ಆಕ್ಸಲರಿ ನರ್ಸ ಮಿಡ್ ವೈಫ್) ಇತ್ಯಾದಿ ಜನರನ್ನು ಈ ಸಮಿತಿಯಲ್ಲಿ ಗೌರವಾನ್ವಿತ ಸದಸ್ಯರಾಗಿ ಮತದಾನದ ಹಕ್ಕಿಲ್ಲದೆ ಸೇರಿಸಿಕೊಳ್ಳುವ ಅವಕಾಶವಿರುತ್ತದೆ. ಈ ಸಮಿತಿಯ ಸಂಚಾಲಕರನ್ನು/ ಅಧ್ಯಕ್ಷರನ್ನು ಸಮಿತಿಯ ಕಾರ್ಯಕಾರಿ ಸದಸ್ಯರು ಆಯ್ಕೆ ಮಾಡುತ್ತಾರೆ/ಚುನಾಯಿಸುತ್ತಾರೆ. ಈ ಸಮಿತಿಯ ಸಭೆಗಳು ನಿಯಮಾನುಸಾರ ನಡೆಯುವಂತೆ ಸಮಿತಿ ಸಂಚಾಲಕರು ನೋಡಿಕೊಳ್ಳಬೇಕಾಗುತ್ತದೆ. ಎನ್‌ಹೆಚ್‌ಸಿಯ ಕರ್ತವ್ಯಗಳು ಈ ಕೆಳಗಿನಂತಿವೆ.

೧. ಸ್ಥಳೀಯ ಸಮಸ್ಯೆಗಳನ್ನು ಮತ್ತು ಅದ್ಯತೆಗಳನ್ನು ಗುರುತಿಸುವುದು.

೨. ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸಲು ಹಾಗೂ ಯೋಜನಾ ಗುರಿಗಳನ್ನು ಸಾಧಿಸಲು ಜನರ ಗುಂಪುಗಳ ಪಾಲ್ಗೊಳ್ಳುವಿಕೆ ಬಗ್ಗೆ ಸಲಹೆ ನೀಡುವುದು.

೩. ಸ್ಥಳೀಯ ಚಟುವಟಿಕೆಗಳಿಗೆ ಜವಾಬ್ದಾರಿಯುತ ಸಂಸ್ಥೆಗಳ ಸೇವೆಯನ್ನು ಕಲ್ಪಿಸುವುದು ಮತ್ತು ಸಾರ್ವಜನಿಕ ಒಪ್ಪಂದ ಮೂಡಿಸುವಲ್ಲಿ ಸಹಾಯಕವಾಗುವುದು.

೪. ಈ ಯೋಜನೆಯ ಪ್ರಯೋಜನ ಮತ್ತು ವಿಸ್ತಾರದ ಬಗ್ಗೆ ವಿಶೇಷವಾಗಿ ಮಹಿಳೆಯರಿಗೆ ಮತ್ತು ಮಕ್ಕಳಿಗೆ ಮಾಹಿತಿ ನೀಡುವುದು. ಹಾಗೂ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವುದಕ್ಕೆ ಹಾಗೂ ವಿಶೇಷವಾಗಿ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ಪ್ರಯೋಜನಗಳು ತಲುಪುವಂತಾಗಲು ಏಜೆನ್ಸಿಗಳಿಗೆ ಅಗತ್ಯ ಮಾರ್ಗದರ್ಶನ ಮಾಡುವುದು.

೫. ಕಮ್ಯುನಿಟಿ ಆರ್ಗನೈಸರ್ಸ್, ನಾನ್ ಗರ್ವನ್‌ಮೆಂಟ್ ಆರ್ಗನೈಸೇಷನ್ ಹಾಗೂ ಇತರ ವಲಯವಾರು ಇಲಾಖೆಗಳ ಸಹಾಯದಿಂದ ಜನರ ಸಾಮರ್ಥ್ಯ ಹೆಚ್ಚಿಸಲು ತರಬೇತಿಗಳನ್ನು ಏರ್ಪಡಿಸುವುದು.

೬. ಥ್ರಿಫ್ಟ್ ಮತ್ತು ಕ್ರೆಡಿಟ್ ವ್ಯವಸ್ಥೆಯನ್ನು ಹಾಗೂ ನೈಬರ್‌ಹುಡ್ ಡೆವೆಲಪ್‌ಮೆಂಟ್ ಫಂಡ್ ಅಭಿವೃದ್ಧಿಪಡಿಸುವುದು.

೭. ನಿಯಮಾನುಸಾರ ಫಲಾನುಭವಿಗಳಿಂದ ಸಾಲ ಮರುಪಾವತಿಯನ್ನು ನಿರ್ವಹಿಸುವುದು.

೮. ಮಾರ್ಗಸೂಚಿಯ ಪ್ರಕಾರ, ಸಮುದಾಯ ಸಮೀಕ್ಷೆ ಮಾಡುವುದು/ಮಾಡಲು ನೆರವಾಗುವುದು.

ಅವಶ್ಯಕವೆನಿಸಿದಲ್ಲಿ ಎನ್‌ಹೆಚ್‌ಸಿಯನ್ನು ಸೊಸೈಟಿಸ್ ರಿಜಿಸ್ಟ್ರೇಷನ್ ಕಾಯ್ದೆ ಅಥವಾ ಇತರ ಸಂಬಂಧಿತ ಕಾಯ್ದೆಯ ಪ್ರಕಾರ ನೊಂದಾಯಿಸಬಹುದು. ಸಿಡಿಎಸ್‌ನ ಕರ್ತವ್ಯಗಳನ್ನು ಈ ಕೆಳಗೆ ನೀಡಲಾಗಿದೆ.

೧. ಸಮಾಜದ ಎಲ್ಲಾ ವರ್ಗಗಳ ವಿಶೇಷವಾಗಿ ಮಹಿಳೆಯರ ಮತ್ತು ಮಕ್ಕಳ ಅವಶ್ಯಕತೆಗಳನ್ನು ಪ್ರತಿಬಿಂಬಿಸುವುದು.

೨. ಅವರ ಅವಶ್ಯಕತೆಗಳನ್ನು ಪೂರೈಸುವ ದಿಸೆಯಲ್ಲಿನ ಕಾರ್ಯಗಳಿಗೆ ಇತರ ಸಂಸ್ಥೆಗಳ ಮತ್ತು ಇಲಾಖೆಗಳ ಸಹಕಾರವನ್ನು ಕ್ರೋಢೀಕರಿಸುವುದು.

೩. ನಿರ್ದಿಷ್ಟ ತರಬೇತಿ ಕಾರ್ಯಕ್ರಮಗಳನ್ನು ಗುರುತಿಸಿ ಅವುಗಳನ್ನು ಏರ್ಪಡಿಸುವುದು.

೪. ಆರ್ಥಿಕ ಮತ್ತು ನಿವಾಸ ಸೌಲಭ್ಯಕ್ಕಾಗಿ ಅರ್ಹ ಫಲಾನುಭವಿಗಳನ್ನು ಗುರುತಿಸುವ ಸಲುವಾಗಿ ಸಮಾಜದ ಸಮೀಕ್ಷೆಗಳನ್ನು ನಡೆಸುವುದು ಮತ್ತು ಈ ಸಮೀಕ್ಷೆಗಳಿಗೆ ಸಹಕಾರ ನೀಡುವುದು.

೫. ಸಾರ್ವಜನಿಕ ಯೋಜನೆಗಳನ್ನು ಮತ್ತು ಪ್ರಸ್ತಾವನೆಗಳನ್ನು ರೂಪಿಸುವುದು, ಸಮುದಾಯದ ನಗರದ ಹಾಗೂ ಇತರ ವಲಯ ವಿಭಾಗಗಳಿಂದ ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು.

೬. ಫಲಾನುಭವಿಗಳಿಂದ ಸಕಾಲದಲ್ಲಿ ಸಾಲ ಮರುಪಾವತಿಯನ್ನು ಮಾಡಿಸಲು ನಗರ ಬಡತನ ನಿರ್ಮೂಲನಾ ವಿಭಾಗದೊಂದಿಗೆ ಸಮನ್ವಯದಿಂದ ಬ್ಯಾಂಕುಗಳಿಗೆ ನೆರವಾಗುವುದು.

೭. ಸ್ಥಾನಿಕ ಸಂಸ್ಥೆಗಳು ಹಾಗೂ ನಗರ ಬಡತನ ನಿರ್ಮೂಲನಾ ಸಮಿತಿಗಳೊಡನೆ ಸಮಾಲೋಚನೆಯೊಂದಿಗೆ ಬಡಜನರು ವಾಸಿಸುವ ಪ್ರದೇಶಗಳಲ್ಲಿ ಸಣ್ಣ ಪ್ರಮಾಣದ ಸಾರ್ವಜನಿಕ ಆಸ್ತಿಗಳನ್ನು ಸೃಜಿಸುವುದಾಗಿದೆ.[೬]

## ೧.೮. ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆ ಶೀರ್ಷಿಕೆಯ ವಿವರಣೆ :

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಶೀರ್ಷಿಕೆಯಲ್ಲಿಯೇ ಶಹರಿ ಎಂಬ ಶಬ್ದ ಅಡಗಿರುವುದರಿಂದ ನಗರಕ್ಕೆ ಮಾತ್ರವೇ ಈ ಯೋಜನೆ ಎಂಬುದನ್ನು ತಿಳಿಯಲಾಯಿತು. ಹಾಗಾಗಿ ನಗರ ಬಡತನ ನಿರ್ಮೂಲನೆಯಲ್ಲಿ ಈ ಯೋಜನೆ ತನ್ನ ಪಾತ್ರವನ್ನು ನಿರ್ವಹಿಸುತ್ತದೆ ಎಂಬುದನ್ನು ತಿಳಿದುಕೊಳ್ಳಲಾಯಿತು. ನಗರ ಸಮುದಾಯದ ಬಗ್ಗೆ ಸಂಕ್ಷಿಪ್ತವಾಗಿ ತಿಳಿದ ನಂತರ ನಗರದ ಬಗ್ಗೆ ವಿವಿಧ ಸಮಾಜಶಾಸ್ತ್ರಜ್ಞರು ತಮ್ಮದೇ ಆದ ಅರ್ಥವನ್ನು ನೀಡಿದ್ದು ಅವುಗಳನ್ನು ಮುಂದಿನಂತೆ ವಿವರಿಸಲಾಗಿದೆ.[೭]

**ನಗರ ಎಂದರೇನು ? ನಗರ ಸಮುದಾಯ :**

ಮಾನವ ಸಮುದಾಯಗಳನ್ನು "ಆದಿವಾಸಿ ಸಮುದಾಯ", "ಗ್ರಾಮ ಸಮುದಾಯ" "ನಗರಸಮುದಾಯ" ಎಂದು ಮೂರು ಪ್ರಕಾರಗಳಾಗಿ ವರ್ಗೀಕರಿಸುವ ಕ್ರಮ ಸಮಾಜಶಾಸ್ತ್ರದಲ್ಲಿ ಈ ಹಿಂದಿನಿಂದಲೂ ಇದೆ. ಇವು ಸಮುದಾಯದ ಮೂರು ಪ್ರಕಾರಗಳು ಮಾತ್ರವಲ್ಲದೆ ಸಮುದಾಯದ ಐತಿಹಾಸಿಕ ಬೆಳವಣಿಗೆಯಲ್ಲಿನ ಮೂರು ಪ್ರಮುಖ ಘಟ್ಟಗಳು ಹೌದು. ಆರಂಭದಲ್ಲಿ "ಆದಿವಾಸಿ" ರೂಪದಲ್ಲಿದ್ದ ಮಾನವ ಸಮುದಾಯ ನಂತರ ಗ್ರಾಮ ಜೀವನದ ಘಟ್ಟವನ್ನು ತಲುಪಿ ಈಗ ನಗರದ ಹಂತವನ್ನು ತಲುಪಿದೆ. ಆದಾಗ್ಯೂ ಈ ಮೂರು ಹಂತಗಳಲ್ಲಿ ಜಗತ್ತಿನ ವಿಭಿನ್ನ ಮಾನವ ಸಮುದಾಯಗಳು ಇಂದಿಗೂ ತಮ್ಮ ಜೀವನವನ್ನು ನಡೆಸುತ್ತಿವೆ. ಅಂದರೆ ಈ ವಿಭಿನ್ನ ಸಮುದಾಯಗಳು ತಮ್ಮ ವಿಕಾಸದ ಹಂತಕ್ಕೆ ಅನುಗುಣವಾಗಿ ಆದಿವಾಸಿ ಮತ್ತು ಗ್ರಾಮ, ನಗರವೆಂಬ ರೂಪಗಳಲ್ಲಿಂದು ಕಾಣ ಬರುತ್ತವೆ ಎನ್ನಬಹುದು. ಈ ಮೂರು ಪ್ರಕಾರಗಳಲ್ಲಿ ನಗರ ಸಮುದಾಯದ ಪ್ರಾಬಲ್ಯವೇ ಇಂದು ಎದ್ದು ಕಾಣಿಸುವುದು. ಜಗತ್ತಿನ ಜನಸಂಖ್ಯೆಯ ೨/೩ ಭಾಗದಷ್ಟು ಇಂದಿಗೂ ಗ್ರಾಮೀಣ ಹಂತದಲ್ಲಿಯೇ ವಾಸಿಸುತ್ತಿದ್ದರೂ ಜಗತ್ತಿನ ಚಲನೆಯ ದಿಕ್ಕನ್ನು ನಿರ್ಧರಿಸುತ್ತಿರುವ ನಗರಗಳಿಗೆ ಹೆಚ್ಚಿನ ಪ್ರಾಶಸ್ತ್ಯ.

**ನಗರ ಜೀವನದ ಅರ್ಥ** : ನಗರ ಅಥವಾ "ನಗರ ಸಮುದಾಯ" ವು ನಗರದ ಜೀವನವನ್ನು ಒಳಗೊಂಡಿರುವುದು. "ನಗರ" ಎಂಬ ಪದವನ್ನು ಎಲ್ಲರೂ ಬಳಸುತ್ತಿರುವರಾದರೂ ನಗರದ ಕುರಿತು ಸರ್ವೆ ಸಾಮಾನ್ಯವಾದ ವ್ಯಾಖ್ಯೆಯನ್ನು ಇದುವರೆಗೂ ನೀಡಲಾಗಿಲ್ಲ. ಬರ್ಗೆಲ್ ಹೇಳುವಂತೆ " ನಗರವೇನೆಂದು ಎಲ್ಲರಿಗೂ ತಿಳಿದ ವಿಚಾರ. ಆದರೆ ಯಾರೂ ಅದರ ಬಗ್ಗೆ ಸಮರ್ಪಕವಾದ ವ್ಯಾಖ್ಯೆ ನೀಡಿಲ್ಲ".

ಬೆಂಗಳೂರಿನಿಂದ ೧೦-೧೫ ಮೈಲಿ ದೂರದಲ್ಲಿ ಬಂಗಲೆಯೊಂದನ್ನು ಕಟ್ಟಿದರೆ ಅದು ನಗರದೊಳಗಿದೆ ಎನ್ನಲಾಗುವುದಿಲ್ಲ, ಹಾಗೆಯೇ ನಗರದ ಮಧ್ಯದಲ್ಲಿ ಅಲ್ಲಲ್ಲಿ ಹಳ್ಳಿಯ ವಾತಾವರಣ ಕಂಡ ಮಾತ್ರಕ್ಕೆ ಆ ನಗರವನ್ನು ಹಳ್ಳಿ ಎನ್ನುವಂತಿಲ್ಲ.

ಹಳ್ಳಿ–ನಗರಗಳನ್ನು ನಿರ್ಧಾರ ಮಾಡುವ ಮಾಪನಗಳು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆಯೇ ಆಗಿರುತ್ತವೆ.

**ನಗರದ ವ್ಯಾಖ್ಯೆ : (Definition of city)**

“ಹೊವಾರ್ಡ್‌ವುಲ್ಸ್ಟನ್ ಎಂಬ ನಗರ ಸಮಾಜಶಾಸ್ತ್ರಜ್ಞ ತನ್ನ “ಮೆಟ್ರೊಪೊಲಿಸ್” ಎಂಬ ಗ್ರಂಥದಲ್ಲಿ ನಗರವನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ. “ಒಂದು ಸ್ಥಳೀಯ ಸರ್ಕಾರದ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿರುವ, ಹಲವು ಸಮಾನ ಆಸಕ್ತಿಗಳನ್ನು ಮತ್ತು ಸಂಸ್ಥೆಗಳನ್ನು ಹೊಂದಿದ್ದು, ಒಂದು ಸೀಮಿತ ಭೌಗೋಳಿಕ ಪ್ರದೇಶದಲ್ಲಿ ದಟ್ಟವಾಗಿ ನೆಲೆಸಿರುವ ಜನಸಮೂಹವನ್ನು ನಗರ” ಎನ್ನಬಹುದು ಎಂದಿದ್ದಾರೆ.

“ಲೂಯಿವರ್ತ್” ಎಂಬಾತನ ಪ್ರಕಾರ “ನಗರವೆಂಬುದು ಸಾಪೇಕ್ಷ ದೊಡ್ಡ ಗಾತ್ರದ ಹೆಚ್ಚು ಜನಸಾಂದ್ರತೆಯುಳ್ಳ ಹಾಗೂ ಸಾಮಾಜಿಕವಾಗಿ ವೈವಿಧ್ಯತೆಯನ್ನು ಹೊಂದಿದ ಜನರ ಶಾಶ್ವತ ನೆಲೆಯಾಗಿದೆ.

“ಜೇಮ್ಸ್ ಎ ಕೈನ್” ಎಂಬಾತನು ತನ್ನ “ಅರ್ಬನ್ ಸೋಶಿಯಾಲಜಿ” ಎಂಬ ಪುಸ್ತಕದಲ್ಲಿ ನಗರವನ್ನು “ವಿಶಿಷ್ಟೀಕರಣದ ವಿದ್ಯಮಾನವಾಗಿದೆ ಮತ್ತು ಕೃಷಿಯ ಹೊರತಾದ ಉದ್ಯೋಗಗಳಲ್ಲಿ ನಿರತರಾದ ಜನರ ಸಮೂಹವಾಗಿದೆ” ಎಂದು ಹೇಳಿರುವನು.[೮]

**ನಗರ ಜೀವನದ ಗುಣ ಲಕ್ಷಣಗಳು :**

ನಗರ ಜೀವನ ಕ್ರಮವನ್ನು ಅಥವಾ ನಗರ ಸಮುದಾಯದ ಗುಣ ಲಕ್ಷಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ನಗರ ಜೀವನದ ಅನಾಮಿಕತೆ, ಸಾಮಾಜಿಕ ವೈವಿದ್ಯತೆ, ಮಾಧ್ಯಮಿಕ ಸಂಬಂಧಗಳ ಮಹತ್ವ, ಔಪಚಾರಿಕ ಸಾಮಾಜಿಕ ನಿಯಂತ್ರಣ, ವ್ಯಕ್ತಿ ಅಥವಾ ಉದ್ಯೋಗ, ಬೃಹತ್ ಪ್ರಮಾಣದ ಶ್ರಮವಿಭಜನೆ ಮತ್ತು ವಿಶೇಷ ಪರಿಣಿತಿ, ತ್ವರಿತಗತಿಯ ಸಾಮಾಜಿಕ ಚಲನೆ, ವೈಯಕ್ತಿಕೀಕರಣ, ಐಚ್ಛಿಕ ಸಂಘಗಳ ಗಾತ್ರ, ಸಾಮಾಜಿಕ ಸಹಿಷ್ಣುತೆ, ಅಭದ್ರ ಕುಟುಂಬ, ವಿವೇಚನಾ ಪೂರ್ಣವಾದ ಹಾಗೂ ಲೆಕ್ಕಾಚಾರದ ವರ್ತನೆ, ಸಮಯ ಪ್ರಜ್ಞೆ, ಶಿಕ್ಷಣದ ಪ್ರಾಮುಖ್ಯತೆ, ಮನೋರಂಜನೆ, ನಗರ–ಬಹುಮುಖ ಚಟುವಟಿಕೆಗಳ ಕೇಂದ್ರ ಹಲವು ದೇಶಗಳಲ್ಲಿ ಜನಸಂಖ್ಯೆಯ ಗಾತ್ರವನ್ನು ಆಧಾರವಾಗಿಸಿಕೊಂಡು ಸಮುದಾಯಗಳನ್ನು ‘ಗ್ರಾಮ’ ನಗರ’ಗಳೆಂದು ವರ್ಗೀಕರಿಸುವ ಕ್ರಮವಿದೆ. ಉದಾ : ಹಾಲೆಂಡಿನಲ್ಲಿ ೨೦,೦೦೦ಕ್ಕೂ ಅಧಿಕ ಜನಸಂಖ್ಯೆ ಹೊಂದಿರುವ ಸಮುದಾಯವನ್ನು ಮಾತ್ರ “ನಗರ” ಎನ್ನಲಾಗುವುದು. ಜಪಾನ್ ದೇಶದಲ್ಲಿ ಈ ಸಂಖ್ಯೆಯನ್ನು ೩೦,೦೦೦ ಎಂದು ನಿಗದಿಪಡಿಸಿದ್ದರೆ, ಭಾರತದಲ್ಲಿ ೫೦೦೦ ಎಂದು, ಅಮೆರಿಕದಲ್ಲಿ ೨೫೦೦ ಎಂದು ಹಾಗೂ ಫ್ರಾನ್ಸ್‌ನಲ್ಲಿ ೨೦೦೦ ಎಂದು ಗೊತ್ತುಪಡಿಸಲಾಗಿದೆ.

"ಮಾರ್ಕ್‌ಜೆಫರ್‌ಸನ್" ಎಂಬಾತನ ಪ್ರಕಾರ ಒಂದು ಚದುರ ಮೈಲಿ ಪ್ರದೇಶದಲ್ಲಿ ೧೦,೦೦೦ ಮಂದಿ ವಾಸಿಸುವುದಿದ್ದರೆ ಅದನ್ನು ನಗರವೆಂದು ಪರಿಗಣಿಸಬಹುದು.

"ವಾಲ್ಟರ್ ವಿಲಾಕಾಕ್ಸ್" ಎಂಬಾತನ ಪ್ರಕಾರ ಒಂದು ಚದರ ಮೈಲಿ ಪ್ರದೇಶದಲ್ಲಿ ೧೦೦೦ ಮಂದಿ ವಾಸವಾಗಿದ್ದರೂ ಅದನ್ನು ನಗರವೆಂದು ಕರೆಯಬಹುದಾಗಿದ್ದು ಅದಕ್ಕೂ ಕಡಿಮೆ ಜನಸಾಂದ್ರತೆಯ ಸಮುದಾಯಗಳು "ಗ್ರಾಮ" ಗಳೆನಿಸಿಕೊಳ್ಳುತ್ತವೆ.

**ಭಾರತದ ಉದಾಹರಣೆ :**

- ಭಾರತದ ಜನಗಣತಿ ಇಲಾಖೆ ೧೯೬೧ ರಲ್ಲಿ ನಿರ್ಧರಿಸಿದಂತೆ ಸಮುದಾಯವೊಂದನ್ನು 'ಪಟ್ಟಣ ಅಥವಾ ನಗರ' ಎಂದು ಕರೆಯಬೇಕಾದರೆ ಅದು ಈ ಕೆಳಗಿನ ಗುಣಗಳನ್ನು ಹೊಂದಿರಬೇಕು.
- ಕನಿಷ್ಠ ೫೦೦೦ ದಷ್ಟು ಜನಸಂಖ್ಯೆಯನ್ನು ಹೊಂದಿರುವುದು.
- ಒಂದು ಚದುರ ಮೈಲಿಗೆ ಕನಿಷ್ಠ ೧೦೦೦ ದಷ್ಟು ಜನಸಾಂದ್ರತೆ ಹೊಂದಿರುವುದು.
- ೩/೪ ಭಾಗದಷ್ಟು ಜನರು ಕೃಷಿಯೇತರ ಉದ್ಯೋಗಗಳಲ್ಲಿ ತೊಡಗಿರುವುದು,
- ಆ ಪ್ರದೇಶದಲ್ಲಿ ಸಾರಿಗೆ ಸಂಪರ್ಕ, ಬ್ಯಾಂಕುಗಳು, ಶಾಲೆಗಳು, ಮಾರುಕಟ್ಟೆಗಳು, ಮನೋರಂಜನಾ ಕೇಂದ್ರಗಳು, ಆಸ್ಪತ್ರೆಗಳು, ವಿದ್ಯುತ್ ಪೂರೈಕೆ, ವರ್ತಮಾನ ಪತ್ರಿಕೆಗಳು, ಮುಂತಾದ ಕೆಲವು ನಾಗರಿಕ ಸೌಲಭ್ಯಗಳು ಲಭ್ಯವಿರುವುದು. (ಇವುಗಳಿಗೆ ಕೆಲವು ಅಪವಾದಗಳೂ ಇವೆ.)

ಈ ಮೇಲಿನ ಗುಣಗಳಲ್ಲದೆ-ಪುರಸಭೆ-ಕಾರ್ಪೊರೇಷನ್, ಕಂಟೋನ್ಮೆಂಟ್ ಬೋರ್ಡ್, ಹಾಗೂ 'ಪಟ್ಟಣ'ವೆಂದು ಈಗಾಗಲೇ ಕಾನೂನಿನಾತ್ಮಕವಾಗಿ ಘೋಷಿತ ಪ್ರದೇಶಗಳೆಲ್ಲವೂ ಪಟ್ಟಣಗಳಾಗುತ್ತವೆ. ನಗರ ಸಮುದಾಯದಲ್ಲಿ ಸಾಮಾಜಿಕ ಆರ್ಥಿಕ ವಿಷಮತೆಗಳು ಬಹಳ ತೀವ್ರವಾಗಿರುತ್ತವೆ. ಬಡವರಲ್ಲಿ ಬಡವರು ಹಾಗೂ ಶ್ರೀಮಂತರಲ್ಲಿ ಶ್ರೀಮಂತರು ಎಂಬ ವ್ಯತ್ಯಾಸಗಳೂ ಇವೆ, ವರ್ಗ ಪ್ರಜ್ಞೆಯೂ ಇಲ್ಲಿ ಬಲವಾಗಿರುತ್ತದೆ, ವರ್ಗದ ನೆಲೆಯಲ್ಲಿ ಸಂಘಟಿತರಾಗುವ ಪ್ರಯತ್ನವೂ ಇಲ್ಲಿದ್ದು ವಿಷಮತೆ ನಗರದ ಅವಿಭಾಜ್ಯ ಅಂಶದಂತಿರುತ್ತದೆ.

**ಬಡತನ ಎಂದರೇನು?**

ಬಡತನ ವೆಂಬ ಪದವನ್ನು ಕಡು ಬಡತನ ಇಲ್ಲವೇ ಅಲ್ಪ ಬಡತನ ಎಂಬ ಪದಗಳಲ್ಲಿ ಉಪಯೋಗಿಸುತ್ತಾರೆ. ಅಂದರೆ ಕಡು ಬಡತನವನ್ನು ಅನುಭವಿಸುತ್ತಿರುವ ವ್ಯಕ್ತಿಗೆ ಯಾವುದೇ ರೀತಿಯಿಂದ ಆತನಿಗೆ ತನ್ನ ಮೂಲಭೂತ ಬೇಡಿಕೆಗಳನ್ನು

ಈಡೇರಿಸಿಕೊಳ್ಳಲು ಸಾಧ್ಯವಾಗಲಾರದು, ಉಪವಾಸ ಸಾಯುವದು, ಜೀವಸತ್ವಗಳಿಲ್ಲದ ಆಹಾರ, ರೋಗ-ರುಜಿನಗಳು, ಉಡಲು-ತೊಡಲು ಕೊರತೆ, ಆಶ್ರಯದ ಕೊರತೆ ಹಾಗೂ ಔಷಧೋಪಚಾರಗಳ ಕೊರತೆ ಇವು ಅಲ್ಪ ಬಡತನವನ್ನು ವಿವರಿಸುತ್ತವೆ ಎಂದು ಎ.ಇ ಪನೀತ್ ಮತ್ತು ಹೆಚ್.ಬಿ ಮಾಳಿ ತಮ್ಮ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ.

ಬಡತನವು ಒಬ್ಬ ವ್ಯಕ್ತಿಯು ತನ್ನ ಜೀವನದ ಕನಿಷ್ಠ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಸಾಕಾಗುವಷ್ಟು ಆದಾಯವನ್ನು ಗಳಿಸಲು ಸಾಧ್ಯವಾಗದ ಸ್ಥಿತಿ ಎನ್ನಬಹುದು. ಬಡತನವು ಯಾವುದೇ ವ್ಯಕ್ತಿ ಅಥವಾ ವರ್ಗದ ಬಳಿ ಕಡಿಮೆ ಆದಾಯ ಕಡಿಮೆ ಕೊಳ್ಳುವಶಕ್ತಿ ಮತ್ತು ಕಡಿಮೆ ಅನುಭೋಗದ ಮಟ್ಟವನ್ನು ಸೂಚಿಸುತ್ತದೆ ಎಂದು ಎಸ್.ಎನ್ ನಾಯಕ್ ಹೇಳಿದ್ದಾರೆ.

**ಬಡತನದ ವ್ಯಾಖ್ಯೆಗಳು : Jl and Gillin ಎ.ಕೆ ರವರು**

"ವ್ಯಕ್ತಿಯ ಕಡಿಮೆ ಆದಾಯದಿಂದಾಗಲಿ ಇಲ್ಲವೇ ಅವಿವೇಕತನದ ವೆಚ್ಚದಿಂದಾಗಲಿ ಉಚ್ಚ ಶ್ರೇಣಿಯ ಜೀವನ ಮಟ್ಟವನ್ನು ನಡೆಸದೆ ದೈಹಿಕವಾಗಿ ಇಲ್ಲವೇ ಮಾನಸಿಕವಾಗಿ ವೃದ್ಧಿ ಹೊಂದದೆ ತನ್ನ ಸಲುವಾಗಿ ಆಗಲಿ ತಾನು ಹೊಂದಿದ ಸಮಾಜದ ಮಟ್ಟದ ಅನುಗುಣವಾಗಿ ಕಾರ್ಯನಿರ್ವಹಿಸಲು ಆಗದಿರುವ ಸ್ಥಿತಿಯೇ ಬಡತನ ಎಂದು ಎ.ಐ.ಗಿಲಿಯನ್ ಮತ್ತು ಇತರರು ಹೇಳಿದ್ದಾರೆ.

ಬ್ರಿಟಾನಿಕಾದ ವಿಶ್ವಕೋಶದ ಪ್ರಕಾರ ಹಾಲೆಂಡ್‌ರ್ ಅವರು "ಜೀವನಕ್ಕೆ ಅಗತ್ಯವಾದ ಭೌತಿಕ ಅಂಶಗಳ ಕೊರತೆಯೇ ಬಡತನವಾಗಿದೆ ಎಂದಿದ್ದಾರೆ.

ಮಾಜಿ ವಿಶ್ವಬ್ಯಾಂಕ್‌ನ ಅಧ್ಯಕ್ಷರಾದ ರಾಬರ್ಟ ಎಸ್ ಮ್ಯಾಕ್‌ನಾಯರ ವ್ಯಾಖ್ಯೆಯ ಪ್ರಕಾರ "ಬಡತನ ಜೀವನದ ಕ್ರಮಬದ್ಧತೆಯ ಗುಣ ಲಕ್ಷಣಗಳಿಂದ ಪೌಷ್ಠಿಕ ಆಹಾರದ ಕೊರತೆ, ಅನಕ್ಷರತೆ, ರೋಗರುಜಿನ, ಹೆಚ್ಚಿನ ಶಿಶುಮರಣ ಮತ್ತು ಕಡಿಮೆ ಜೀವನಾವಧಿ ಇವುಗಳು ಮಾನವನ ಕೆಳದರ್ಜೆಯ ಸಮಂಜಸವಾದ ಸಭ್ಯತೆಯನ್ನು ವ್ಯಾಖ್ಯಾನಿಸುತ್ತದೆ.

ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ- ಬಡತನವೆಂಬುದು ಸಂಪತ್ತು ಹಾಗೂ ಅಧಿಕಾರ ಶಕ್ತಿಯ ಅಸಮಾನ ಹಂಚಿಕೆಯ ಫಲವಾಗಿ ಕೆಲವು ವ್ಯಕ್ತಿಗಳು ತಮ್ಮ ಹಾಗೂ ತಮ್ಮ ಅವಲಂಬಿಗಳ ದೈನಂದಿನ ಜೀವನದ ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳಲಾರದ ಸ್ಥಿತಿಯಲ್ಲಿರುವುದನ್ನು ಸಂಕೇತಿಸುವ ಕಲ್ಪನೆಯಾಗಿದೆ.

ಬಡತನದ ಅಧ್ಯಯನವು ಕೂಡಾ ಈ ಕೆಳಗಿನ ಅಂಶಗಳ ಅಧ್ಯಯನದಲ್ಲಿ ಮಹತ್ವವನ್ನು ಪಡೆದಿದೆ.

ವ್ಯಕ್ತಿಗಳ ಹಂತದಲ್ಲಿ ಬಡತನವನ್ನು ಅಳೆಯಲು ಅಂದರೆ

ಎ. ಅನಕ್ಷರತೆ

ಬಿ. ಅರೆ ನಿರುದ್ಯೋಗ

ಸಿ. ಕಡಿಮೆ ಸಂಬಳ ಬರುವ ಉದ್ಯೋಗ

ಡಿ. ಅಲ್ಪಕಾಲಿಕ ಉದ್ಯೋಗ ಅಥವಾ ಪೂರ್ಣ ಪ್ರಮಾಣದ ನಿರುದ್ಯೋಗ

ವ್ಯಕ್ತಿಗಳ ಹಂತದಲ್ಲಿ ಈ ಅಂಶಗಳನ್ನು ತಿಳಿದುಕೊಳ್ಳುವದರಿಂದ ಬಡತನದ ಪ್ರಮಾಣವನ್ನು ತಿಳಿಯಬಹುದು.

**ಕುಟುಂಬಗಳ ಮಟ್ಟದಲ್ಲಿ**

ಕೆಲವು ವಿದ್ವಾಂಸರು ತಿಳಿಸಿದಂತೆ ಕೆಲವು ಕುಟುಂಬಗಳು ಬಡತನದ ಛಾಯೆಯನ್ನು ಮತ್ತು ಲಕ್ಷಣಗಳನ್ನು ಹೊಂದಿದ್ದು, ಅವುಗಳಿಗೆ ಸಂಬಂಧಿಸಿದ ಮತ್ತು ಅವುಗಳಲ್ಲಿ ವಾಸಿಸುವ ವ್ಯಕ್ತಿಗಳು ಬಡವರಾಗಿರುವ ಮತ್ತು ಬಡವರಾಗಿಯೇ ಉಳಿಯುವ ಸಂಭಾವ್ಯತೆ ಅಧಿಕವಾಗಿರುತ್ತದೆ ಎಂದಿದ್ದಾರೆ. ಕುಟುಂಬಗಳ ಅಂತಹ ಬಡತನದ ಲಕ್ಷಣಗಳು

- ಕುಟುಂಬದ ಹಿರಿಯ ದಿನ ಕೂಲಿಯನ್ನು ಆಧರಿಸಿ ಜೀವನ ನಡೆಸುವ ಸ್ಥಿತಿ.
- ಕಡಿಮೆ ಮಟ್ಟದ ಶಿಕ್ಷಣವನ್ನು ಪಡೆದ ಸದಸ್ಯರನ್ನು ಹೊಂದಿರುವ ಕುಟುಂಬ.
- ದುಡಿಮೆಯ ಅನುಭವವನ್ನು ಹೊಂದಿರದೇ ಇರುವ ಸದಸ್ಯರುಗಳಿಂದ ಕೂಡಿದ ಕುಟುಂಬ.

**ಸಮಾಜದ ಮಟ್ಟದಲ್ಲಿ**

ಸಮಾಜವೊಂದರ ಬಡತನವು ಅಲ್ಲಿನ ಕನಿಷ್ಠ ಸಂಪನ್ಮೂಲಗಳು, ಕೆಳಮಟ್ಟದ ರಾಷ್ಟ್ರೀಯ ಆದಾಯ ತೀರಾ ನಗಣ್ಯವಾದ ತಲಾ ಆದಾಯ, ಸಂಪತ್ತಿನ ಹಂಚಿಕೆಯಲ್ಲಿನ ಅಗಾಧವಾದ ತಾರತಮ್ಯ ಮತ್ತು ಬಹಳ ದುರ್ಬಲವಾದ ರಕ್ಷಣಾ ವ್ಯವಸ್ಥೆ. ಇದರಿಂದ ಬಡತನ ಅಧ್ಯಯನದ ಮಹತ್ವವನ್ನು ಪಡೆದಿದೆ. ಬಡತನಕ್ಕೆ ಕಾರಣವಾಗಿರುವ ಅಂಶಗಳನ್ನು ಈ ಕೆಳಗಿನಂತೆ ತಿಳಿಯಬಹುದು.

**ಬಡತನಕ್ಕೆ ಕಾರಣಗಳು:**

೧. ಜನಸಂಖ್ಯಾ ಸ್ಫೋಟ

೨. ನಿರುದ್ಯೋಗ

೩. ಕಡಿಮೆ ಉತ್ಪಾದಕತೆ

೪. ಗಳಿಕೆಯ ಮೂಲಗಳ ಕೊರತೆ

೫. ನಿಧಾನ ಪ್ರಗತಿ

೬. ಬಡತನದ ವಿಷವೃತ್ತ

೭. ಔದ್ಯಮಿಕ ಒಲವು

೮. ಭೂಸುಧಾರಣೆಯ ದೋಷಗಳು

೯. ವ್ಯವಸ್ಥೆಯ ತೊಂದರೆ

೧೦. ಇತರೆ ಕಾರಣಗಳು

**ನಿರ್ಮೂಲನೆ:**

ಸಾಮಾನ್ಯವಾಗಿ ಸಮಾಜದಲ್ಲಿ ಯಾವುದೇ ಒಂದು ಸಮಸ್ಯೆ ಉಂಟಾದಾಗ ಸಾಮಾಜಿಕ ಜೀವನದಲ್ಲಿ ಹಲವಾರು ಸಮಸ್ಯೆಗಳು ಉದ್ಭವವಾಗುವುದು ಸಹಜ. ಈ ಸಮಸ್ಯೆಗಳಿಗೆ ಕಾರಣ ಪರಿಣಾಮಗಳನ್ನು ಕಂಡುಕೊಂಡು ಅದಕ್ಕೆ ಪರಿಹಾರವನ್ನು ಪಡೆದುಕೊಳ್ಳುವುದು ಸಮಾಜದ ಮುಖ್ಯ ಗುರಿಯಾಗಿರುತ್ತದೆ. ಈ ಸಮಸ್ಯೆಗಳು ಲಘುವಾಗಿರಬಹುದು ಅಥವಾ ಜಟಿಲವಾಗಿರಬಹುದು ಇವುಗಳು ಸಮಾಜಕ್ಕೆ ಕಂಟಕ ಪ್ರಾಯವಾಗದಂತೆ ಮುನ್ನೆಚ್ಚರಿಕೆ ವಹಿಸುತ್ತಾ, ಮನುಷ್ಯನ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ಅಭಿವೃದ್ಧಿಗೆ ಒಳಿತಾಗುವ ಕೆಲಸ ಹಾಗೂ ಯೋಜನಾ ಕಾರ್ಯಕ್ರಮಗಳನ್ನು ರೂಪಿಸುತ್ತಾ ಬರುವುದರಿಂದ ಯಾವುದೇ ಆತಂಕ ಮತ್ತು ಸಮಸ್ಯೆಯನ್ನು ನಿರ್ಮೂಲನೆಗೊಳಿಸಿ ಆ ಮೂಲಕ ಒಟ್ಟು ದೇಶದ ಅಭಿವೃದ್ಧಿಯನ್ನು ಸಾಧಿಸುವುದಾಗಿದೆ. ಹಾಗಾಗಿ ನಿರ್ಮೂಲನೆ ಎಂಬುದು ಯಾವುದೇ ಅಡ್ಡಿ ಆತಂಕವನ್ನು ಹೋಗಲಾಡಿಸು ಎಂಬ ಅರ್ಥದಲ್ಲಿ ಬಳಕೆಯಲ್ಲಿ ತರಲಾಗಿದೆ. ಈ ಯೋಜನೆಯಲ್ಲಿ ಬಡತನವನ್ನು ಹೋಗಲಾಡಿಸುವುದೇ ಯೋಜನೆಯ ಒಂದಂಶದ ಕಾರ್ಯಕ್ರಮವಾಗಿರುವುದರಿಂದ ನಿರ್ಮೂಲನೆ ಎಂಬ ಪದವನ್ನು ಉಪಯೋಗಿಸಿ ಕೊಳ್ಳಲಾಗಿದೆ.

ಸ್ವರ್ಣ ಜಯಂತಿ ಎಂದರೇನು? ಸ್ವರ್ಣ ಜಯಂತಿ ಎಂಬ ಹೆಸರನ್ನು ಈ ಯೋಜನೆಗೆ ಇಡಲು ಕಾರಣವೇನೆಂದರೆ ಭಾರತ ದೇಶಕ್ಕೆ ಸ್ವಾತಂತ್ರ್ಯ ಬಂದು ೧೯೯೭ ನೇ ಇಸವಿಗೆ ೫೦ ವರ್ಷಗಳು ತುಂಬಿದ್ದರಿಂದ ಎಸ್‌ಜೆಎಸ್‌ಆರ್‌ವೈ ಯೋಜನೆಯನ್ನು ಅದೇ ವರ್ಷದಲ್ಲಿ ಪ್ರಾರಂಭಿಸಲು ಕೇಂದ್ರ ಸರ್ಕಾರವು ಇಚ್ಛಿಸಿ ಅದರ ಸವಿ ನೆನಪಿನಲ್ಲಿ ಸ್ವರ್ಣ ಜಯಂತಿ ಎಂಬ ಹೆಸರಿನಲ್ಲಿ ೧.೧೨.೧೯೯೭ ರಿಂದ ಜಾರಿಗೆ ತಂದಿತು.

ಶಹರಿ ರೋಜ್ಗಾರ್ ಎಂದರೇನು ? ಶಹರಿ ಎಂದರೆ ಪಟ್ಟಣ/ನಗರ ಎಂಬ ಅರ್ಥವನ್ನು ಕೊಡುವುದರಿಂದ ಮತ್ತು ರೋಜ್ಗಾರ್ ಎಂದರೆ ಉದ್ಯೋಗ ಎಂಬ ಅರ್ಥವಿರುವುದರಿಂದ ಈ ಯೋಜನೆಯ ಉದ್ದೇಶ ನಗರ ಪ್ರದೇಶದ ಜನರಿಗೆ ಉದ್ಯೋಗ ಕಲ್ಪಿಸುವುದಾಗಿರುವುದರಿಂದ ಇದಕ್ಕೆ ಶಹರಿ ರೋಜ್ಗಾರ್ ಎಂಬ ಹೆಸರನ್ನು ನೀಡಲಾಗಿದೆ.

ಯೋಜನೆ ಎಂದರೇನು? ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಶೀರ್ಷಿಕೆಯಲ್ಲಿ ನಗರ, ಬಡತನ, ನಿರ್ಮೂಲನೆ, ಸ್ವರ್ಣ ಜಯಂತಿ, ಶಹರಿ ರೋಜ್ಗಾರ್ ಎಂಬ ಪದಗಳಿಗೆ ಮೇಲಿನಂತೆ ಅರ್ಥವನ್ನು ತಿಳಿಯಲಾಯಿತು, ಈಗ ಯೋಜನೆ ಎಂಬ ಪದದ ಬಗ್ಗೆ ವಿವಿಧ ತಜ್ಞರು ತಮ್ಮದೇ ಆದ ವ್ಯಾಖ್ಯೆಗಳನ್ನು ನೀಡಿದ್ದಾರೆ ಅವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

ಶ್ರೀಮತಿ ಬಾರ್ಬರಾ ವೂಟನ್ನರ ಪ್ರಕಾರ ಯೋಜನೆ ಎಂದರೆ "ಸಾರ್ವಜನಿಕ ಅಧಿಕಾರ ವರ್ಗದವರು ಉದ್ದೇಶ ಪೂರ್ವಕವಾಗಿ ಆಯ್ಕೆ ಮಾಡಿಕೊಳ್ಳುವ ಆರ್ಥಿಕ ಆದ್ಯತೆಗಳಾಗಿವೆ."

ಫ್ರೆಡರಿಕ್ ವಾನ್ ಹಯೆಕ್‌ರ ಪ್ರಕಾರ "ಕೇಂದ್ರೀಯ ಅಧಿಕಾರದ ಮೂಲಕ ಉತ್ಪಾದನಾ ಚಟುವಟಿಕೆಗಳನ್ನು ನಿರ್ದೇಶಿಸುವುದೇ ಯೋಜನೆ".

ಒಟ್ಟಾರೆಯಾಗಿ ಹೇಳುವುದಾದರೆ "ಕೆಲವು ನಿರ್ದಿಷ್ಠ ಧ್ಯೇಯೋದ್ದೇಶಗಳ ಈಡೇರಿಕೆಗಾಗಿ ಸರ್ಕಾರ ಬಳಸುವ ಆರ್ಥಿಕ ತಂತ್ರಗಳನ್ನು ಯೋಜನೆ" ಎಂದು ಕರೆಯಬಹುದು.

**೧.೯. ಅಧ್ಯಯನದ ನಮೂನೆ :**

ಕ್ಷೇತ್ರ ಸಮೀಕ್ಷಾ ಕಾರ್ಯವನ್ನು ಕೈಗೊಳ್ಳುವುದಕ್ಕೆ ಮುನ್ನ ಎಸ್.ಜೆ.ಎಸ್.ಆರ್.ವೈ ಘಟಕಕ್ಕೆ ಭೇಟಿ ನೀಡಿ ಬಿಪಿಎಲ್ ಕುಟುಂಬಗಳ ಬಗ್ಗೆ ಮಾಹಿತಿ ಕೇಳಿದಾಗ ಅವರು ಈ ಯೋಜನೆಯು ಬಿಪಿಎಲ್ ಕುಟುಂಬದ ಫಲಾನುಭವಿಗಳನ್ನು ಹೊರತುಪಡಿಸಿ ಬೇರೆ ಯಾರಿಗೂ ಅನ್ವಯವಾಗುವುದಿಲ್ಲ ಎಂದು ತಿಳಿಸಿ ಯೋಜನೆಯಡಿ ಫಲಾನುಭವಿಗಳ ಪಟ್ಟಿಯನ್ನು ನೀಡಿದರು. ಈ ಪಟ್ಟಿಯಲ್ಲಿ ಮಹಿಳೆಯರು, ಎಸ್‌ಸಿ ಎಸ್‌ಟಿ, ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರು ಹಾಗೂ ಅಂಗವಿಕಲರಿಗೆ ಮೀಸಲಾತಿಯನ್ನು ನೀಡಿದ್ದರಿಂದ ಹಾಗೂ ಸರಕಾರವು ಪ್ರತಿ ವರ್ಷ ಇಂತಿಷ್ಟೇ ಎಂದು ಫಲಾನುಭವಿಗಳನ್ನು ನಿಗದಿಪಡಿಸುವುದರಿಂದ ಎಲ್ಲ ಜಾತಿ ವರ್ಗಗಳು ಈ ಯೋಜನೆಯ ಫಲಾನುಭವಿಗಳಾಗಿರುವುದನ್ನು ಮನಗಂಡು ಆಯಾ ಜಾತಿ ವರ್ಗಗಳಿಗೆ ಮೀಸಲಾತಿ ನಿಗದಿಪಡಿಸಿರುವ ಈ ಯೋಜನೆಯ ಫಲಾನುಭವಿಗಳನ್ನು ಸಂಪರ್ಕಿಸಿ ಮಾಹಿತಿ ಪಡೆಯಲಾಗಿದೆ. ಒಟ್ಟು ೩೦೦ ಮಾಹಿತಿದಾರರನ್ನು ಯೋಜನೆಯ ವಿವಿಧ ಅಂಗಗಳಿಂದ ವಿಂಗಡಿಸಿಕೊಂಡು ರ್‍ಯಾಂಡಮ್ ನಮೂನೆ ಮೂಲಕ ಮಾಹಿತಿ ಕಲೆ ಹಾಕಲಾಗಿದೆ.

**೧.೧೦ ಅಧ್ಯಯನದ ತಂತ್ರಗಳು/ಅಧ್ಯಯನದ ಆಕರಗಳು :-**

ಪ್ರಸ್ತುತ ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

**ಪ್ರಾಥಮಿಕ ಮೂಲಗಳು:–(Primary Data)**

ಈ ಅಧ್ಯಯನವು ಕ್ಷೇತ್ರ ಕಾರ್ಯದ ಅಧ್ಯಯನವಾದ್ದರಿಂದ ಮತ್ತು ಸರಕಾರದ ಒಂದು ಯೋಜನೆಯ ಅನುಷ್ಠಾನ ಮತ್ತು ಕಾರ್ಯಕ್ರಮದ ಪರಿಣಾಮಗಳ ಬಗ್ಗೆ ತಿಳಿಯುವುದು, ಆಮೂಲಕ ಜನರ ಆರ್ಥಿಕ ಮಟ್ಟವನ್ನು ತಿಳಿದುಕೊಂಡು ಇವರು ಬಡತನದಿಂದ ಮುಕ್ತರಾಗಿದ್ದಾರೆಯೇ ಮತ್ತು ಸದರಿ ಯೋಜನೆಯಿಂದ ಪ್ರತಿಫಲ ಪಡೆದು ಸಂತೋಷದಿಂದಿದ್ದಾರೆಯೇ? ಎಂಬುದನ್ನು ತಿಳಿಯಲು ಜನರಿಂದಲೇ ನೇರವಾಗಿ ಪ್ರಾಥಮಿಕ ಮಾಹಿತಿಯನ್ನು ಸಮಗ್ರವಾಗಿ ಕಲೆ ಹಾಕಲು ನಿರ್ಧರಿಸಿ ಪ್ರಾಕ್ ಕಲ್ಪನೆಗಳನ್ನು ಗಮನದಲ್ಲಿಟ್ಟುಕೊಂಡು ಪ್ರಶ್ನಾವಳಿಯನ್ನು ತಯಾರಿಸಲಾಯಿತು. ಪ್ರಶ್ನಾವಳಿಯಲ್ಲಿ ಯೋಜನೆಯ ಫಲಾನುಭವಿಯಾಗುವ ಮೊದಲಿದ್ದ ಪರಿಸ್ಥಿತಿ ಯೋಜನೆಯ ಫಲಾನುಭವಿಯಾದ ನಂತರದಲ್ಲಿ ಜೀವನ ಮಟ್ಟದಲ್ಲಿ ಆದ ಬದಲಾವಣೆಯನ್ನು ತುಲನೆ ಮಾಡಬೇಕಾದುದರಿಂದ ಇದರ ಫಲಿತಾಂಶ ಪಡೆಯುವುದಕ್ಕಾಗಿ ಸರಳ ಹಾಗೂ ಸ್ಪಷ್ಟವಾಗಿ ಪ್ರಶ್ನೆಗಳನ್ನು ರಚಿಸಿಕೊಳ್ಳಲಾಯಿತು. ಪ್ರತಿ ಮಾಹಿತಿದಾರರು ತಮ್ಮ ವಿಚಾರಗಳನ್ನು ಯೋಜನೆಯ ಬಗ್ಗೆ ತಿಳಿಸಲು ಕೋರಿಕೆ ಮಾಡಿಕೊಳ್ಳಲಾಯಿತು. ಯೋಜನೆಯಲ್ಲಿ ನಿಗದಿಪಡಿಸುವ ಮೀಸಲಾತಿಯಂತೆ ಎಲ್ಲ ವರ್ಗದ ಜನರನ್ನು ಸಂದರ್ಶಿಸಿ ಪ್ರಾಥಮಿಕ ಮಾಹಿತಿ ಪಡೆದುಕೊಳ್ಳಲಾಯಿತು.

**ಅನುಷಂಗಿಕ ಮೂಲಗಳು :(Secondary Data)**

ಎಸ್.ಜೆ.ಎಸ್.ಆರ್.ವೈ ಯೋಜನೆಯು ಜಾರಿಯಾಗಿ ೧೦ ವರ್ಷಗಳನ್ನಷ್ಟೇ ಕಳೆದಿದ್ದರಿಂದ ಈ ಯೋಜನೆಯ ವಿಷಯವಾಗಿ ಪ್ರಕಟಗೊಂಡ ಲೇಖನಗಳು, ಯೋಜನಾ ವಾರ್ಷಿಕ ವರದಿ, ದಿನಪತ್ರಿಕೆಗಳಲ್ಲಿ ಪ್ರಕಟಗೊಂಡ ಮಾಹಿತಿ, ಸರಕಾರದ ಗೆಜೆಟಿಯರ್‌ಗಳು, ಅಂತರ್ಜಾಲದಿಂದ ಬಡತನಕ್ಕೆ ಸಂಬಂಧಿಸಿದ ಸಂಶೋಧನಾ ಪ್ರಬಂಧಗಳು, ಮಾಸಿಕ ಪತ್ರಿಕೆ, ವಿಚಾರ ಸಂಕೀರ್ಣಗಳಲ್ಲಿನ ಲೇಖನಗಳು ಎಸ್.ಜೆ.ಎಸ್.ಆರ್.ವೈ ಘಟಕದ ಸಮುದಾಯ ವ್ಯವಹಾರ ಅಧಿಕಾರಿಗಳಿಂದ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ.

**ಪ್ರಶ್ನಾವಳಿ ವಿವರ: (Questionnaire):**

ಪ್ರಶ್ನಾವಳಿಯನ್ನು ತಯಾರಿಸುವಾಗ ಮಾಹಿತಿದಾರರ ವೈಯಕ್ತಿಕ ಮಾಹಿತಿಗಳನ್ನೊಳಗೊಂಡ ಒಂದು ಭಾಗ ಹಾಗೂ ಮಾಹಿತಿದಾರರು ಯೋಜನೆಯ ಫಲಾನುಭವಿಗಳಾಗಿ ಅಳವಡಿಸಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಪ್ರಶ್ನೆಗಳನ್ನು ತಯಾರಿಸಿಕೊಳ್ಳಲಾಯಿತು. ಯಾಕೆಂದರೆ ಈ ಯೋಜನೆಯಲ್ಲಿ ಪ್ರಮುಖವಾಗಿ ನಾಲ್ಕು ಕಾರ್ಯಕ್ರಮಗಳು ಜಾರಿಯಲ್ಲಿರುವುದರಿಂದ ಪ್ರತಿ ಕಾರ್ಯಕ್ರಮಕ್ಕೆ ಒಬ್ಬರೇ ಫಲಾನುಭವಿಯಾಗಿರುವುದರಿಂದ ಪ್ರಶ್ನಾವಳಿಯನ್ನು ಕಾರ್ಯಕ್ರಮಕ್ಕೆ ೦೪ ವಿಭಾಗಗಳಾಗಿ ತಯಾರಿಸಲಾಯಿತು. ಮಾಹಿತಿದಾರರ ವೈಯಕ್ತಿಕ (ಪ್ರಾಥಮಿಕ)

ಸಾಮಾನ್ಯ ಮಾಹಿತಿಯನ್ನು ಎಲ್ಲಾ ೦೪ ವಿಭಾಗಗಳಿಗೂ ಸಾಮಾನ್ಯವಾಗಿ ಅಳವಡಿಸಿ ಆಯಾಯ ಕಾರ್ಯಕ್ರಮದ ಫಲಾನುಭವಿಗಳನ್ನು ಸರಳವಾಗಿ ಸಂದರ್ಶಿಸಲು ಅನುಕೂಲವಾಗುವಂತೆ ಪ್ರಶ್ನಾವಳಿಯನ್ನು ತಯಾರಿಸಲಾಯಿತು. ಕೆಲವು ಸಾಮಾನ್ಯ ಪ್ರಶ್ನೆಗಳನ್ನು ಯೋಜನೆಯ ಅಭಿಪ್ರಾಯ, ಲಾಭ, ಒಲವು-ನಿಲುವು, ಸಲಹೆ, ದೋಷ ಇತ್ಯಾದಿ ಪ್ರಶ್ನೆಗಳನ್ನು ಎಲ್ಲ ಮಾಹಿತಿದಾರರಿಗೂ ಅನ್ವಯವಾಗುವಂತೆ ಪ್ರಶ್ನಾವಳಿ ತಯಾರಿಸಲಾಗಿದೆ. ಒಟ್ಟಾರೆ ಪ್ರಶ್ನಾವಳಿಯು ೧೨೦ ಪ್ರಶ್ನೆಗಳನ್ನು ಹೊಂದಿದ್ದು, ಆಯಾಯ ಕಾರ್ಯಕ್ರಮದ ಫಲಾನುಭವಿಗನುಗುಣವಾಗಿ ವಿಭಾಗಗೊಂಡಿರುತ್ತದೆ. ಇದರ ಮಾದರಿ ಪ್ರಶ್ನಾವಳಿಯನ್ನು ಅನುಬಂಧ-೩ರಲ್ಲಿ ನೀಡಲಾಗಿದೆ. ಹೀಗೆ ಸರಕಾರದ ಯೋಜನೆಗಳು ಜನರ ಮೇಲೆ ಹೇಗೆ ಪರಿಣಾಮ ಬೀರಿವೆ ಎಂಬುವುದನ್ನು ತಿಳಿಯಲು ಪ್ರಶ್ನಾವಳಿ ಮೂಲಕ ಮಾಹಿತಿ ಪಡೆಯಲಾಗಿದೆ.

### ೧.೧೧ ಅಧ್ಯಯನದ ಅವಧಿ:-(Study Duration)

ಕ್ಷೇತ್ರ ಕಾರ್ಯದ ಅಧ್ಯಯನವಾದ್ದರಿಂದ ಜನರನ್ನು ಭೇಟಿ ಮಾಡಿ ಮಾಹಿತಿ ಪಡೆಯಬೇಕಾದ್ದರಿಂದ ಈ ಮಾಹಿತಿ ಸಂಗ್ರಹಣೆ ಕಾರ್ಯವು ದಿನಾಂಕ: ೦೧.೦೭.೨೦೧೧ ರಿಂದ ೩೦.೦೬.೨೦೧೨ ರವರೆಗೆ ನಡೆಯಿತು. ಪ್ರತಿ ದಿನಕ್ಕೆ ಪ್ರಾರಂಭದಲ್ಲಿ ೦೪ ರಿಂದ ೦೭ ಮಾಹಿತಿದಾರರನ್ನು ಮಾತ್ರ ಸಂದರ್ಶನ ಮಾಡಲು ಸಾಧ್ಯವಾಯಿತು. ತದನಂತರದಲ್ಲಿ ಇದು ಸಂಧರ್ಭಕ್ಕನುಗುಣವಾಗಿ ದಿನ ಕಳೆದಂತೆ ಹೆಚ್ಚಿನ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಈ ಯೋಜನೆಯ ನಿಯಮವೇ ೧೮ ವರ್ಷ ಮೇಲ್ಪಟ್ಟ ವಯಸ್ಕರಿಗೆ ಮಾತ್ರವೇ ಇರುವುದರಿಂದ ಮಾಹಿತಿ ಕಲೆಹಾಕಲು ವಯಸ್ಸಿನ ಗೊಂದಲವಾಗಲಿಲ್ಲ.

### ೧.೧೨. ಅಧ್ಯಯನದ ಕ್ಷೇತ್ರದ ಪರಿಚಯ ಮತ್ತು ಐತಿಹಾಸಿಕ ಹಿನ್ನಲೆ :

೧೯೯೭ರಲ್ಲಿ ಜಾರಿಯಾದ ಕೇಂದ್ರ ಸರ್ಕಾರ ಪುರಷ್ಕೃತ ಯೋಜನೆಯಾದ ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆಯು ಬೃಹತ್ ಪ್ರಮಾಣದಲ್ಲಿ ದೇಶಾದ್ಯಂತ ಇರುವ ನಿರದ್ಯೋಗಿಗಳಿಗೆ ಕೆಲಸವನ್ನು ಕೊಡಿಸುವ ಉದ್ದೇಶದೊಂದಿಗೆ ನಗರದಲ್ಲಿರುವ ಬಡ ಕುಟುಂಬಗಳ ಶ್ರೇಯೋಭಿವೃದ್ಧಿಗೆ ಹೆಜ್ಜೆ ಹಾಕುತ್ತಾ ಸಾಗಿದ್ದರಿಂದ ಈ ಯೋಜನೆಯ ಬಗ್ಗೆ ೨೦೦೮ ರಲ್ಲಿ ಇದರ ಬಗ್ಗೆ ಅಧ್ಯಯನ ಮಾಡಬೇಕೆಂದು ಮನಸ್ಸಾಯಿತು. ಹಂಪಿ ಕನ್ನಡ ವಿಶ್ವವಿದ್ಯಾಲಯ ಇಚ್ಛೆಯನ್ನು ಸಾಕಾರಗೊಳಿಸಿದ್ದರಿಂದ ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣಜಯಂತಿ ಶಹರಿ ರೋಜ್‌ಗಾರ್ ಯೋಜನೆ ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಮಾಡಲು ಅನುಮೋದನೆ ದೊರೆಯಿತು. ಈ ಶೀರ್ಷಿಕೆಗೆ ಸಂಬಂಧಿಸಿದಂತೆ ಪುಸ್ತಕಗಳು ಲೇಖನಗಳು ದಿನ ಪತ್ರಿಕೆಗಳು, ನಿಯತಕಾಲಿಕೆಗಳು, ಸಂಶೋಧನಾ ಪ್ರಬಂಧಗಳನ್ನು ಅವಲೋಕಿಸಿದೆ, ಆದರೆ ಇದರ ಬಗ್ಗೆ ಪ್ರಕಟವಾದ ಪ್ರಬಂಧ/ ಲೇಖನಗಳು, ಪುಸ್ತಕಗಳು ತುಂಬಾ ಕಡಿಮೆಯಿದ್ದರಿಂದ ಸದರಿ ಯೋಜನೆ ಬಗ್ಗೆ ಮಾಹಿತಿಯನ್ನು ಸರ್ಕಾರದ ಕಛೇರಿಗಳಿಂದ ಪಡೆಯಲು ನಿರ್ಧರಿಸಿದೆ.

ಯೋಜನೆಯನ್ನು ಪರಿಣಾಮಕಾರಿ ಜಾರಿಗೊಳಿಸುವ ಉದ್ದೇಶವನ್ನು ಇಟ್ಟುಕೊಂಡು ತೆರೆಯಲಾದ ಸಿಡಿಎಸ್ ಘಟಕಕ್ಕೆ ಭೇಟಿ ನೀಡಿದೆ ಈ ಘಟಕವು ಮಹಾನಗರ ಪಾಲಿಕೆ/ ನಗರ ಸಭೆಯ ಅಡಿಯಲ್ಲಿ ಕೆಲಸ ಮಾಡುತ್ತಿರುತ್ತದೆ. ಅಧಿಕಾರಿಗಳನ್ನು ಭೇಟಿ ಮಾಡಿದಾಗ ಈ ಶೀರ್ಷಿಕೆ ಮತ್ತು ಅಧ್ಯಯನದ ಉದ್ದೇಶವನ್ನು ತಿಳಿಸಿದಾಗ ಸದರಿ ಅಧಿಕಾರಿಗಳು ಆಯುಕ್ತರನ್ನು ಭೇಟಿ ಮಾಡಿ ಅವರಿಂದ ಅನುಮತಿ ಪಡೆದು ಬಂದ ನಂತರದಲ್ಲಿ ಮಾಹಿತಿ ನೀಡುವುದಾಗಿ ತಿಳಿಸಿದ್ದರಿಂದ ಆಯುಕ್ತರಿಗೆ ಅಧ್ಯಯನದ ಉದ್ದೇಶವನ್ನು ತಿಳಿಸಿದಾಗ ಅವರು ಒಪ್ಪಿಕೊಂಡು ಅನುಮತಿ ನೀಡಿದ್ದರಿಂದ ಹಾಗೂ ತಮ್ಮ ಅಧೀನದ ಅಡಿಯಲ್ಲಿ ಬರುವ ಅಧಿಕಾರಿಗಳಿಗೆ ಮಾಹಿತಿ ನೀಡುವಂತೆ ಸೂಚಿಸಿದ್ದರಿಂದ ಅವಶ್ಯಕವಾದ ಮಾಹಿತಿ ಪಡೆಯಲು ಸಹಾಯಕವಾಯಿತು.

ಯೋಜನೆ ೧೯೯೭ ರಲ್ಲಿ ಪ್ರಾರಂಭಗೊಂಡಿದ್ದರಿಂದ ನನ್ನ ಅಧ್ಯಯನ ಪ್ರಾರಂಭಿಸುವಷ್ಟರಲ್ಲಿ ಸದರಿ ಯೋಜನೆಗೆ ೧೦ ವರ್ಷ ತುಂಬಿದ್ದರಿಂದ ೨೦೦೮-೨೦೦೯ ನೇ ವರ್ಷಕ್ಕಿಂತ ಹಿಂದಿನ ಮಾಹಿತಿಯನ್ನು ಜನರಿಂದ ಕಲೆಹಾಕಲು ಸಮೀಕ್ಷೆಯ ಕಾರ್ಯ ಕೈಗೊಂಡು ಅಂಕಿ-ಅಂಶಗಳ ಅಧ್ಯಯನ ಮಾಡಿದೆ.

### ೧.೧೩. **ಸೂಕ್ಷ್ಮ ಅಧ್ಯಯನ :**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ಕರ್ನಾಟಕದ ಎಲ್ಲಾ ನಗರಗಳಲ್ಲಿ ಜಾರಿಯಲ್ಲಿದ್ದರೂ ಆಯಾ ನಗರದ ಭೌಗೋಳಿಕ ಹಿನ್ನಲೆಗೆ ತಕ್ಕಂತೆ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಈ ಅಧ್ಯಯನಕ್ಕೆ ವಿಶಾಲವಾದ ಹಿನ್ನಲೆಯನ್ನು ಇಟ್ಟುಕೊಂಡು ಧಾರವಾಡ ಜಿಲ್ಲೆಯಲ್ಲಿ ಬರುವ ಕರ್ನಾಟಕದ ೨ನೇ ಅತಿದೊಡ್ಡ ಹುಬ್ಬಳ್ಳಿ-ಧಾರವಾಡ ಮಹಾನಗರವನ್ನು ಆಯ್ದುಕೊಂಡು ಅದರಲ್ಲಿ ಪ್ರದೇಶವಾರು ವಿಂಗಡಿಸಿ ೨೩ ಪ್ರದೇಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ. ಈ ದೃಷ್ಟಿಯಿಂದ ಇದೊಂದು ಸೂಕ್ಷ್ಮ ಸಂಶೋಧನೆ. ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿ ನೋಡಿದಾಗ ನಗರ ಪ್ರದೇಶದ ಜನರ ಜೀವನ ರೀತಿ ನೀತಿಗಳೇ ಬೇರೆಯಾಗಿರುತ್ತವೆ. ಹಾಗಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರವು ಅತಿ ವೇಗವಾಗಿ ಬೆಳೆಯುತ್ತಿರುವ ನಗರವಾಗಿರುವುದರಿಂದ ಈ ನಗರದಲ್ಲಿನ ಬಡಜನರ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಭವಿಷ್ಯದ ನಗರಗಳ ನಿರ್ಮಾಣದ ದೃಷ್ಟಿಯಿಂದ ಅನುಕೂಲವೆಂದು ಭಾವಿಸಿ ಈ ನಗರವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

### ೧.೧೪. **ಭೌಗೋಳಿಕ ಹಿನ್ನಲೆಯ ಸಂಕ್ಷಿಪ್ತ ಪರಿಚಯ:**

ಭಾರತ ದೇಶವು ಏಷಿಯಾ ಖಂಡದ ದಕ್ಷಿಣ ಭಾಗದಲ್ಲಿದೆ, ದೇಶದ ಭೌಗೋಳಿಕ ಅಂಶಗಳು ಸಹ ಮಾನವನ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರುತ್ತವೆ. ಭೌಗೋಳಿಕ ಪ್ರದೇಶವು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುವುದನ್ನು

ನಾವು ನೋಡುತ್ತೇವೆ. ಒಂದು ಪ್ರದೇಶದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಷಯಗಳನ್ನು ಅಧ್ಯಯನ ಮಾಡುವಾಗ ಅಲ್ಲಿನ ಭೌಗೋಳಿಕ ಹಿನ್ನಲೆ ಗಮನಿಸುವುದು ಅವಶ್ಯಕ. ಭಾರತ ದೇಶವನ್ನು ಮೂರು ಭೌಗೋಳಿಕ ವಿಭಾಗಗಳಲ್ಲಿ ವರ್ಗೀಕರಿಸಲಾಗಿದೆ.

ಎ. ದಕ್ಷಿಣ ಭಾರತ, ಬಿ. ಉತ್ತರ ಭಾರತ ಸಿ. ಮಧ್ಯ ಭಾರತ ವೆಂದು ಕರೆಯಲಾಗುತ್ತಿದೆ.

ಉತ್ತರ ಭಾರತದಲ್ಲಿ ಹೆಚ್ಚಾಗಿ ಹಿಂದಿ ಭಾಷೆಯನ್ನು ಅಥವಾ ಸಂಸ್ಕೃತದ ಉಪಭಾಷೆಯನ್ನು, ದಕ್ಷಿಣ ಭಾರತವೆಂದರೆ ದ್ರಾವಿಡ ಭಾರತ, ದ್ರಾವಿಡ ಭಾರತದ ಪ್ರಮುಖ ರಾಜ್ಯಗಳು ನಾಲ್ಕು ಕರ್ನಾಟಕ, ತಮಿಳುನಾಡು, ಆಂಧ್ರ ಪ್ರದೇಶ ಮತ್ತು ಕೇರಳ. ಈ ರಾಜ್ಯಗಳ ಜನ ಸಾಮಾನ್ಯರಾಡುವ ಭಾಷೆ ಕನ್ನಡ, ತಮಿಳು, ತೆಲುಗು, ಹಾಗೂ ಮಲೆಯಾಳಂ ಇವು ದ್ರಾವಿಡ ಮೂಲದ ಭಾಷೆಗಳು. ಪ್ರಸ್ತುತ ಭಾರತ ರಾಜ್ಯವು ೨೮ ರಾಜ್ಯಗಳು ಮತ್ತು ೦೬ ಕೇಂದ್ರಾಡಳಿತ ಪ್ರದೇಶಗಳನ್ನು ಹೊಂದಿದ್ದು ಅತ್ಯಂತ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾಗಿದೆ.

**ಕರ್ನಾಟಕ ರಾಜ್ಯದ ಭೌಗೋಳಿಕ ಹಿನ್ನಲೆ:**

ಕರ್ನಾಟಕ ರಾಜ್ಯವು ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯ ಆಧಾರದ ಮೇಲೆ ರಚನೆಯಾಯಿತು. ಕನ್ನಡ ಭಾಷೆಯನ್ನು ಹೆಚ್ಚಾಗಿ ಮಾತನಾಡುವ ಪ್ರದೇಶಗಳನ್ನು ಗುರುತಿಸಿ ನವೆಂಬರ್ ೧, ೧೯೫೬ ರಂದು ವಿಶಾಲ ಮೈಸೂರು ರಾಜ್ಯ ಉದಯವಾಯಿತು. ನಂತರ ೧೯೭೩ ರಲ್ಲಿ ಡಿ.ದೇವರಾಜ್ ಅರಸ್ ಅವರ ಆಡಳಿತದಲ್ಲಿ ಕರ್ನಾಟಕ ರಾಜ್ಯವೆಂದು ಹೊಸ ನಾಮಕರಣ ಮಾಡಲಾಯಿತು. ಕರ್ನಾಟಕದ ದಕ್ಷಿಣಕ್ಕೆ ತಮಿಳುನಾಡು, ಉತ್ತರಕ್ಕೆ ಮಹಾರಾಷ್ಟ್ರ, ಪೂರ್ವಕ್ಕೆ ಆಂಧ್ರಪ್ರದೇಶ, ಪಶ್ಚಿಮಕ್ಕೆ ಅರಬ್ಬಿಸಮುದ್ರವಿದೆ, ನೈರುತ್ಯಕ್ಕೆ ಕೇರಳ, ವಾಯುವ್ಯಕ್ಕೆ ಗೋವಾ ರಾಜ್ಯ ಇವು ಕರ್ನಾಟಕದ ನೆರೆಯ ರಾಜ್ಯಗಳಾಗಿವೆ. ಕರ್ನಾಟಕವು ಭಾರತದ ಪರ್ಯಾಯ ದ್ವೀಪದ ಪಶ್ಚಿಮದ ಭಾಗದಲ್ಲಿದ್ದು ಪೂರ್ವ ರೇಖಾಂಶಗಳ ಮಧ್ಯದಲ್ಲಿದ್ದು ಪೂರ್ವ ಪಶ್ಚಿಮವಾಗಿ ೪೦೦ ಕಿ.ಮೀ ಅಗಲ ಹಾಗೂ ದಕ್ಷಿಣೋತ್ತರವಾಗಿ ೭೫೦ ಕಿ.ಮೀ ಉದ್ದವಾಗಿದೆ.

**ಕರ್ನಾಟಕದ ಭೂಪ್ರದೇಶ:**

ಕರ್ನಾಟಕ ರಾಜ್ಯದ ಭೂವಿಸ್ತೀರ್ಣವು ೧,೯೧,೭೯೧ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದ್ದು, ರಾಷ್ಟ್ರದ ಒಟ್ಟು ವಿಸ್ತೀರ್ಣದ ಶೇಕಡಾ ೫.೮೩ ರಷ್ಟನ್ನು ಹೊಂದಿದೆ. ಬೆಳಗಾವಿ, ಗುಲ್ಬರ್ಗ, ಮೈಸೂರು ಮತ್ತು ಬೆಂಗಳೂರು ಇವು ರಾಜ್ಯದ ನಾಲ್ಕು ಕಂದಾಯ ವಿಭಾಗಗಳಾಗಿವೆ. ಕರ್ನಾಟಕ ರಾಜ್ಯದಲ್ಲಿ ಒಟ್ಟು ೩೦ ಜಿಲ್ಲೆಗಳಿದ್ದು, ೧೭೬ ತಾಲ್ಲುಕುಗಳು, ೭೪೫ ಹೋಬಳಿಗಳು ಹಾಗೂ ೨೭೪೮೧ ವಸತಿ ಗ್ರಾಮಗಳನ್ನು ಹೊಂದಿದೆ. ರಾಜ್ಯದ ರಾಜಧಾನಿಯಾಗಿ ಬೆಂಗಳೂರು ಆಗ್ನೇಯ ಭಾಗದಲ್ಲಿದೆ.

**ಭಾರತದ ಜನಸಂಖ್ಯೆ :** ಭಾರತದ ಒಟ್ಟು ಜನಸಂಖ್ಯೆಯು ೨೦೧೧ರ ಜನಗಣತಿಯ ಪ್ರಕಾರ ೧೨೧,೦೧,೯೩,೪೨೨ ಇದ್ದು, ಇದರಲ್ಲಿ ೬೨,೩೭,೦೦೦೦೦ ಪುರುಷರು, ೫೮,೬೫,೦೦೦೦೦ ಮಹಿಳೆಯರಿದ್ದಾರೆ.

ಲಿಂಗಾನುಪಾತವು ೧೦೦೦ ಪುರುಷರಿಗೆ ೯೪೦ ಇದ್ದು, ಸಾಕ್ಷರತಾ ಪ್ರಮಾಣವು ೭೪.೦೪ ಆಗಿದೆ. ಕೇರಳ ರಾಜ್ಯದಲ್ಲಿ ಮಾತ್ರ ಶೇಕಡಾ ೯೦ ರಷ್ಟು ಸಾಕ್ಷರತೆಯನ್ನು ಹೊಂದಿದ್ದು ಅತ್ಯಂತ ಉನ್ನತ ಸ್ಥಾನವನ್ನು ಹೊಂದಿದೆ.

ಭಾರತದ ಕೊಳಚೆ ಪ್ರದೇಶದ ಜನಸಂಖ್ಯೆಯು ೨೦೧೧ ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ೧೪,೦೨,೯೭೧ ಇದ್ದು, ಇದರಲ್ಲಿ ೭,೧೪,೪೧೩ ಪುರುಷರು ಮತ್ತು ೬,೮೮,೫೫೮ ಮಹಿಳೆಯರಾಗಿದ್ದಾರೆ.

**ಕರ್ನಾಟಕದ ಜನಸಂಖ್ಯೆ :** ಕರ್ನಾಟಕದ ಒಟ್ಟು ಜನಸಂಖ್ಯೆಯು ೨೦೧೧ ರ ಜನಗಣತಿಯ ಪ್ರಕಾರ ೬,೧೦,೯೫,೨೯೭ ಇರುತ್ತದೆ. ಅದರಲ್ಲಿ ೩,೦೯,೬೬,೬೫೭ ಪುರುಷರು ಮತ್ತು ೩,೦೧,೨೮,೬೪೦ ಮಹಿಳೆಯರಿದ್ದಾರೆ. ಮಕ್ಕಳ ಒಟ್ಟು ಜನಸಂಖ್ಯೆ (೦–೦೬ ವರ್ಷ) ೭೧,೬೧,೦೩೩ ಇದ್ದು, ಅದರಲ್ಲಿ ಗಂಡು ಮಕ್ಕಳ ಪ್ರಮಾಣ ೩೬,೭೫,೨೯೧ ಮತ್ತು ೩೪,೮೫,೭೪೨ ಹೆಣ್ಣು ಮಕ್ಕಳಿದ್ದಾರೆ.

ಲಿಂಗಾನುಪಾತವು ೧೦೦೦ ಪುರುಷರಿಗೆ ೯೭೩ ಮಹಿಳೆಯರಿರುವುದು ಕಂಡು ಬಂದಿದೆ. ಇದು ರಾಷ್ಟ್ರೀಯ ಸರಾಸರಿಗೆ ಹೋಲಿಸಿದರೆ (೯೪೦) ಅತಿ ಕಡಿಮೆ ಇರುತ್ತದೆ. ಉಡುಪಿ, ದಕ್ಷಿಣ ಕನ್ನಡ, ಕೊಡಗು, ಹಾಸನ ಮತ್ತು ಚಿಕ್ಕಮಗಳೂರಿನಲ್ಲಿ ೧೦೦೦ ಪುರುಷರಿಗೆ ಕ್ರಮವಾಗಿ ೧೦೯೪, ೧೦೨೦, ೧೦೧೯, ೧೦೧೦ ಹಾಗೂ ೧೦೦೮ ರಂತೆ ಇರುತ್ತದೆ. ಮಕ್ಕಳ ಲಿಂಗಾನುಪಾತವು ೧೦೦೦ ಗಂಡು ಮಕ್ಕಳಿಗೆ ೯೪೮ ಇರುವುದು ಕಂಡು ಬರುತ್ತದೆ.

ಸಾಕ್ಷರತಾ ಪ್ರಮಾಣವು ಕರ್ನಾಟಕದಲ್ಲಿ ೭೫.೩೬ ರಷ್ಟಿದ್ದು ಇದರಲ್ಲಿ ೮೨.೪೭ ರಷ್ಟು ಪುರುಷರು ಮತ್ತು ೬೮.೦೮ ರಷ್ಟು ಮಹಿಳೆಯರು ಆಗಿದ್ದಾರೆ. ಕರ್ನಾಟಕದ ಒಟ್ಟು ವಿಸ್ತೀರ್ಣವು ೧.೯೧೭೯೧ ಇದ್ದು, ೨೦೧೧ ರ ಜನಗಣತಿ ಪ್ರಕಾರ ಜನಸಾಂದ್ರತೆಯ ಪ್ರಮಾಣ ಪ್ರತಿ ಚದುರ ಕಿಮೀಗೆ ೩೧೯ ಇರುತ್ತದೆ. ಇದು ರಾಷ್ಟ್ರೀಯ ಸರಾಸರಿ ಜನಸಾಂದ್ರತೆ (೩೮೨) ಕ್ಕಿಂತ ಕಡಿಮೆಯಿರುತ್ತದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳ ಹೆಣ್ಣು ಮಕ್ಕಳ ಸಾಕ್ಷರತೆ ಪ್ರಮಾಣದಲ್ಲಿ ಹೆಚ್ಚಳವಾಗಿರುವುದು ಕಂಡು ಬಂದಿದೆ.[೧೦] ಪ್ರಜಾವಾಣಿ ಕನ್ನಡ ದಿನಪತ್ರಿಕೆ ದಿನಾಂಕ: ೧೮.೭.೨೦೧೧

**ನಗರ ಜನಸಂಖ್ಯೆ :** ೨೦೧೧ ರ ಜನಗಣತಿಯ ಪ್ರಕಾರ ನಗರದ ಒಟ್ಟು ಜನಸಂಖ್ಯೆಯು ೨,೩೬,೨೫,೯೬೨ ಇದ್ದು, ಇದರಲ್ಲಿ ೧,೨೦,೩೭,೩೦೩ ಪುರುಷರು ಮತ್ತು ೧,೧೫,೮೮,೬೫೯ ಮಹಿಳೆಯರಿದ್ದಾರೆ. ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೮.೫೭ ರಷ್ಟು ಜನರು ನಗರ ಪ್ರದೇಶದಲ್ಲಿ ವಾಸಿಸುತ್ತಿರುವುದು ಅಂಕಿ ಅಂಶಗಳಿಂದ ತಿಳಿದು ಬಂದಿದೆ. ನಗರ ಪ್ರದೇಶದ

ಲಿಂಗಾನುಪಾತವು ೧೦೦೦೦ ಪುರುಷರಿಗೆ ೯೬೩ ಮಹಿಳೆಯರಿದ್ದಾರೆ ಅದರಂತೆ ಮಕ್ಕಳ ಲಿಂಗಾನುಪಾತವು (೦–೬) ೧೦೦೦ಕ್ಕೆ ೯೪೬ ಇರುತ್ತದೆ. ಒಟ್ಟು ನಗರ ಪ್ರದೇಶದಲ್ಲಿ ವಾಸಿಸುತ್ತಿರುವ ಮಕ್ಕಳ ಸಂಖ್ಯೆ ೨೬,೪೩,೩೮೮ ಆಗಿದ್ದು, ಇದು ಒಟ್ಟು ನಗರ ಜನಸಂಖ್ಯೆಯ ಶೇಕಡ ೧೧.೯ ರಷ್ಟಾಗಿದೆ.

ಸಾಕ್ಷರತಾ ಪ್ರಮಾಣವು ಸಹ ನಗರ ಪ್ರದೇಶದಲ್ಲಿ ಒಟ್ಟು ೮೫.೭೮ ಇದ್ದು, ಇದರಲ್ಲಿ ೯೦.೦೪ ರಷ್ಟು ಪುರುಷರು, ೭೭.೯೭ ರಷ್ಟು ಮಹಿಳೆಯರಿದ್ದಾರೆ. ಒಟ್ಟು ನಗರ ಪ್ರದೇಶದಲ್ಲಿ ಸಾಕ್ಷರತೆಯನ್ನು ಹೊಂದಿರುವವರ ಪ್ರಮಾಣವು ೧,೭೯,೭೮,೧೪೬ ಇರುತ್ತದೆ.[11] ವಿಜಯ ಕರ್ನಾಟಕ ದಿನಪತ್ರಿಕೆ, ಪುಟ ಸಂಖ್ಯೆ–೩ ರಾಜ್ಯವಾರ್ತೆ, ಹುಬ್ಬಳ್ಳಿ ಎಡಿಸನ್, ದಿನಾಂಕ ೨೪.೫.೨೦೧೩.

**ಹವಾಗುಣ ಮತ್ತು ಮಳೆ:** ನಗರದ ಹವಾಗುಣವು ವರ್ಷಪೂರ್ತಿ ಅತ್ಯುತ್ತಮವಾಗಿದ್ದು, ಧಾರವಾಡವು ತನ್ನ ಹಿತಕರ ಹವೆಗೆ ಪ್ರಸಿದ್ಧವಾಗಿದೆ. ಹುಬ್ಬಳ್ಳಿಯು ಸಮುದ್ರಮಟ್ಟಕ್ಕಿಂತ ೬೨೬.೯೭ ಮೀಟರು ಎತ್ತರದಲ್ಲಿದ್ದು, ಧಾರವಾಡವು ೬೯೬.೯೭ ಮೀಟರುಗಳ ಎತ್ತರದಲ್ಲಿದೆ. ೧೯೯೧ ರಲ್ಲಿ ಸರಾಸರಿ ಮಳೆಯು ೨೫೫.೬ ಮಿ.ಮೀ. ಹಾಗೂ ಧಾರವಾಡದಲ್ಲಿ ೧೩೭.೯೦ ಮಿ ಮೀ ಮಳೆ ದಾಖಲೆಯಾಗಿದೆ.

**ಬೆಳೆ:** ಹುಬ್ಬಳ್ಳಿ–ಧಾರವಾಡ ಕರ್ನಾಟಕದಲ್ಲಿ ಬೆಂಗಳೂರಿನ ನಂತರ ಎರಡನೇಯ ದೊಡ್ಡ ನಗರವಾಗಿದೆ. ಹುಬ್ಬಳ್ಳಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಮೆಣಸಿನಕಾಯಿ (ಬ್ಯಾಡಗಿ), ಹತ್ತಿ, ಈರುಳ್ಳಿ ಮತ್ತು ಶೇಂಗಾ ಬೆಳೆಗಳು ವ್ಯಾಪಕವಾಗಿ ಬೆಳೆಯಲ್ಪಡುತ್ತವೆ. ಇವುಗಳಿಗೆ ಹುಬ್ಬಳ್ಳಿ ದೊಡ್ಡ ಮಾರುಕಟ್ಟೆಯಾಗಿದೆ. ಅಮರಗೋಳದ ಹತ್ತಿರವಿರುವ ಶ್ರೀಬಸವೇಶ್ವರ ಕೃಷಿ ಉತ್ಪನ್ನ ಮಾರುಕಟ್ಟೆಯು ಭಾರತದಲ್ಲಿಯೇ ಅತಿದೊಡ್ಡ ಮಾರುಕಟ್ಟೆ ಪ್ರಾಂಗಣವನ್ನು ಹೊಂದಿದೆ.

**ಭಾಷೆ:** ಹುಬ್ಬಳ್ಳಿ–ಧಾರವಾಡದಲ್ಲಿ ಹಲವಾರು ಭಾಷೆಯನ್ನು ಮಾತನಾಡುವವರಿದ್ದು, ಅತಿ ಹೆಚ್ಚು ಕನ್ನಡ ಭಾಷೆಯನ್ನು ಮಾತನಾಡುವವರಿದ್ದಾರೆ ನಂತರ ಸ್ಥಾನದಲ್ಲಿ ಉರ್ದು, ತಮಿಳು, ತೆಲಗು, ಮರಾಠಿ, ಹಿಂದಿ ಇನ್ನು ಮುಂತಾದ ಭಾಷೆಗಳನ್ನು ಮಾತನಾಡುವ ಜನರು ಇರುವುದು ಕಂಡು ಬಂದಿದೆ.

**ಧರ್ಮ :** ಭಾರತವು ವಿವಿಧತೆಯಲ್ಲಿ ಏಕತೆಯನ್ನು ಸಾರುವ ರಾಷ್ಟ್ರವಾಗಿದೆ. ಹುಬ್ಬಳ್ಳಿ–ಧಾರವಾಡ ಮಹಾನಗರದಲ್ಲಿ ವಿವಿಧ ಧರ್ಮದವರು ವಾಸಿಸುತ್ತಿದ್ದು, ಅವುಗಳಲ್ಲಿ ಹಿಂದೂ ಧರ್ಮದವರು ಬಹುಸಂಖ್ಯಾತರಾಗಿದ್ದರೆ, ಮುಸ್ಲಿಂ ಧರ್ಮದವರು ಎರಡನೇ ಸ್ಥಾನದಲ್ಲಿದ್ದಾರೆ, ಕ್ರಿಶ್ಚಿಯನ್ ಧರ್ಮದವರು ಮೂರನೇ ಸ್ಥಾನದಲ್ಲಿದ್ದು ತಮ್ಮದೇ ಆದ ಧರ್ಮ ಗುರುಗಳನ್ನು ಹೊಂದಿದ್ದಾರೆ.

**ಸಾರಿಗೆ ಸಂಪರ್ಕ :** ಹುಬ್ಬಳ್ಳಿ–ಧಾರವಾಡ ಮಹಾನಗರದ ಸಾರಿಗೆಯು ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮದ ಅಡಿಯಲ್ಲಿ ಬರುತ್ತದೆ. ಹುಬ್ಬಳ್ಳಿ ಮತ್ತು

ಧಾರವಾಡ ನಗರಗಳಿಂದ ಕರ್ನಾಟಕ ರಾಜ್ಯದ ರಾಜಧಾನಿ ಬೆಂಗಳೂರು ಸೇರಿದಂತೆ ವಿವಿಧ ಜಿಲ್ಲೆಗಳು ಮತ್ತು ಹೊರ ರಾಜ್ಯಗಳಿಗೆ ಸಾರಿಗೆ ಸಂಪರ್ಕವನ್ನು ಹೊಂದಿದೆ. ಇದರ ಪರಿಣಾಮವಾಗಿ ವಾಣಿಜ್ಯ ವಹಿವಾಟು ಹೆಚ್ಚಾಗಿದ್ದು ಹುಬ್ಬಳ್ಳಿಯನ್ನು "ಛೋಟಾ ಬಾಂಬೆ" ಎಂದು ಸಹ ಕರೆಯಲಾಗುತ್ತದೆ.

**ವೈದ್ಯಕೀಯ ಸೌಲಭ್ಯಗಳ ವಿವರ** : ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ಹಲವಾರು ಆಸ್ಪತ್ರೆಗಳಿದ್ದು ಅವುಗಳ ಸಂಖ್ಯೆಯನ್ನು ಕೆಳಗಿನಂತೆ ವಿವರಿಸಲಾಗಿದೆ.

೧) ಆಸ್ಪತ್ರೆ ಸಂಖ್ಯೆ –೫೬, ೨) ಸರ್ಕಾರಿ ಆಸ್ಪತ್ರೆಗಳಸಂಖ್ಯೆ –೧೧, ೩) ಡಿಸ್ಪೆನ್ಸರಿಗಳ ಸಂಖ್ಯೆ – ೬೮೦, ೪) ಖಾಸಗಿ ಆಸ್ಪತ್ರೆಗಳು – ೧೧೨, ೫) ಪಾಲಿಕೆ ಆಸ್ಪತ್ರೆಗಳ ಸಂಖ್ಯೆ – ೦೪ ಇರುತ್ತವೆ.

**ಹುಬ್ಬಳ್ಳಿ– ಧಾರವಾಡದ ಮಾಹಿತಿ :**

ಹುಬ್ಬಳ್ಳಿ–ಧಾರವಾಡ ಮಹಾನಗರವು ಅವಳಿನಗರವಾಗಿರುವುದರಿಂದ ಈ ಎರಡು ನಗರಗಳ ಇತಿಹಾಸವನ್ನು ಅಧ್ಯಯನ ದೃಷ್ಠಿಯಿಂದ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು.

**ಧಾರವಾಡ ನಗರದ ಇತಿಹಾಸ :**

೧೨ನೇ ಶತಮಾನದ ವರೆಗೆ ಧಾರವಾಡ ಜಿಲ್ಲೆ ಚಾಲುಕ್ಯ ಸಾಮ್ರಾಜ್ಯದ ಭಾಗವಾಗಿತ್ತು. ನಂತರ ವಿಜಯನಗರ ಸಾಮ್ರಾಜ್ಯದ ಆಡಳಿತಕ್ಕೊಳಪಟ್ಟಿತು. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಬಿಜಾಪುರದ ಆದಿಲ್‌ಶಾಹಿ ಸುಲ್ತಾನರ ಕೈ ಸೇರಿದ ಮೇಲೆ ಧಾರವಾಡ ಜಿಲ್ಲೆಯ ಪ್ರಾಮುಖ್ಯತೆ ಹೆಚ್ಚಿತು. ಇದಕ್ಕೆ ಮುಖ್ಯ ಕಾರಣ ಆದಿಲ್‌ಶಾಹಿ ಸುಲ್ತಾನರು ಇಲ್ಲಿ ಕಟ್ಟಿಸಿದ ಕೋಟೆ ಮಣ್ಣಕಿಲ್ಲೆ, ಇದಕ್ಕೆ ಆಗಿನ ಕಾಲದಲ್ಲಿ ನಜರತಾಬಾದ್ ಎಂಬ ಹೆಸರಿತ್ತು. ಆದಿಲ್ ಶಾಹಿ ಸುಲ್ತಾನರ ನಂತರ ಧಾರವಾಡ ಜಿಲ್ಲೆ ಸ್ವಲ್ಪ ಕಾಲ ಮೊಘಲ್ ಸಾಮ್ರಾಜ್ಯದ ವಶದಲ್ಲಿದ್ದು, ನಂತರ ಅನುಕ್ರಮವಾಗಿ ಮರಾಠರು, ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಹಾಗೂ ಬ್ರಿಟಿಷರ ಆಡಳಿತಕ್ಕೆ ಸೇರಿತು. ಮುಂಬಯಿ ಸರ್ಕಾರದ ಆಡಳಿತದಲ್ಲಿದ್ದ ಧಾರವಾಡ, ಕರ್ನಾಟಕ ಏಕೀಕರಣ ಹೋರಾಟದಲ್ಲಿ ಪ್ರಮುಖ ಪಾತ್ರವಹಿಸಿತು. ಕರ್ನಾಟಕದಲ್ಲಿ ಪ್ರಥಮ ಬಾರಿಗೆ ವಿದ್ಯಾರ್ಥಿ ಸಂಘಟನೆಯು ಅಖಿಲ ಕರ್ನಾಟಕ ವಿದ್ಯಾರ್ಥಿಪರಿಷತ್ತು ಸ್ಥಾಪಿಸಿ, ರಾಜ್ಯಾದ್ಯಂತ ಕರ್ನಾಟಕ ಏಕೀಕರಣ ಹೋರಾಟದ ಪರವಾಗಿ ವಿದ್ಯಾರ್ಥಿಗಳನ್ನು ಸಂಘಟಿಸಲಾಯಿತು. ಅವರಲ್ಲಿ ಶ್ರೀಅನ್ನದಾನಯ್ಯ ಪುರಾಣಿಕ. ಹುಬ್ಬಳ್ಳಿಯಲ್ಲಿ ಕರ್ನಾಟಕ ಏಕೀಕರಣದ ಕುರಿತು ಅಂತಿಮ ತೀರ್ಮಾನ ಮಾಡಲು ನಿಜಲಿಂಗಪ್ಪವನವರ ಅಧ್ಯಕ್ಷತೆಯಲ್ಲಿ ಕೆ.ಪಿ.ಸಿ.ಸಿ ಸಭೆ ನಡೆಯುವಾಗ, ನಡೆಸಿದ ಬೃಹತ್ ವಿದ್ಯಾರ್ಥಿ ಮೆರವಣಿಗೆ, ಜ್ವಲಂತ ಉದಾಹರಣೆ. ಅದೇ ಕೆಪಿಸಿಸಿ ಸಭೆಯು ಕರ್ನಾಟಕ ಏಕೀಕರಣದ ಪರವಾಗಿ ನಿರ್ಧಾರ ಮಾಡಲು ಪ್ರಮುಖ ಕಾರಣವಾಯಿತು.

**ತಾಲ್ಲೂಕುಗಳು :**

ಧಾರವಾಡ ಜಿಲ್ಲೆಯು ೫ ಕಂದಾಯ ತಾಲೂಕುಗಳನ್ನು ಹೊಂದಿದೆ.

ಧಾರವಾಡ, ಹುಬ್ಬಳ್ಳಿ, ಕುಂದಗೋಳ , ನವಲಗುಂದ, ಕಲಘಟಗಿ.

**ಹುಬ್ಬಳ್ಳಿ ನಗರದ ಹಿನ್ನೆಲೆ :**

ಹುಬ್ಬಳ್ಳಿಯ ಇತಿಹಾಸವು ರಾಷ್ಟ್ರಕೂಟರ ಕಾಲದಷ್ಟು ಹಿಂದಿನದೆಂದು ಹೇಳಬಹುದು. ಈಗ ಹುಬ್ಬಳ್ಳಿಯೆಂದು ಕರೆಯಲ್ಪಡುವ ಪ್ರದೇಶದಲ್ಲಿ ಸುಮಾರು ಕ್ರಿ.ಶ ೮೦೦ ರ ಸಮಯದಲ್ಲಿ ಜನವಸತಿ ಇದ್ದದ್ದು ಇಲ್ಲಿ ಸಿಕ್ಕಿರುವ ಎರಡು ಶಾಸನಗಳಿಂದ ತಿಳಿದು ಬರುತ್ತದೆ. ಈ ಶಾಸನಗಳಲ್ಲಿ ರಾಷ್ಟ್ರಕೂಟ ದೊರೆಗಳಾದ ಮೂರನೆಯ ಇಂದ್ರ (ಕ್ರಿ. ಶ. ೯೧೫-೯೨೮) ಮತ್ತು ಅಮೋಘವರ್ಷ, ಕರ್ಕ (ಕ್ರಿ.ಶ.೯೭೩) ರ ಉಲ್ಲೇಖವಿದೆ. ಇಲ್ಲಿನ ಭವಾನಿ ಶಂಕರ ಆಲಯವು ಚಾಲುಕ್ಯ ವಾಸ್ತು ಶಿಲ್ಪ ಶೈಲಿಯಲ್ಲಿದೆ. ಈ ಆಲಯದಲ್ಲಿ ಸಿಕ್ಕಿರುವ ಶಾಸನದಲ್ಲಿ ಚಾಲುಕ್ಯ ದೊರೆ ಎರಡನೇ ಸೋಮೇಶ್ವರನ (ಕ್ರಿ.ಶ.೧೦೬೮-೧೦೭೮) ಉಲ್ಲೇಖವಿದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಹುಬ್ಬಳ್ಳಿ ಪ್ರಮುಖ ವಾಣಿಜ್ಯ ಕೇಂದ್ರವಾಗಿ ಪ್ರಸಿದ್ಧಿ ಪಡೆಯಿತು. ಹುಬ್ಬಳ್ಳಿಯಿಂದ ಆರು ಕಿ. ಮೀ. ದೂರದ ಶಿರಗುಪ್ಪಿಯೆಂಬ ಹಳ್ಳಿಯಲ್ಲಿ ದೊರೆತಿರುವ ಶಾಸನವೊಂದು ವಿಜಯನಗರ ಸಾಮ್ರಾಜ್ಯದ ಹೆಸರಾಂತ ಚಕ್ರವರ್ತಿ ಶ್ರೀಕೃಷ್ಣದೇವರಾಯನನ್ನು ಉಲ್ಲೇಖಿಸುತ್ತದೆ. ಈಗಲೂ ಕೆಲವೊಮ್ಮೆ ಹುಬ್ಬಳ್ಳಿಯನ್ನು **"ರಾಯರ ಹುಬ್ಬಳ್ಳಿ"** ಎಂದು ಜನರು ಕರೆಯುತ್ತಾರೆ. ವಿಜಯನಗರ ಸಾಮ್ರಾಜ್ಯದೊಂದಿಗೆ ವಾಣಿಜ್ಯ ವ್ಯವಹಾರಗಳನ್ನು ಹೊಂದಿದ್ದ ಪೋರ್ಚುಗೀಸ್ ವ್ಯಾಪಾರಿಗಳು ಮತ್ತು ಪ್ರವಾಸಿಗರು ತಮ್ಮ ಕ್ರಿ. ಶ. ೧೫೪೭ ರಲ್ಲಿ ಬರೆಯಲ್ಪಟ್ಟ ದಾಖಲೆಗಳಲ್ಲಿ ಹುಬ್ಬಳ್ಳಿಯನ್ನು **"ಒಬೇಲಿ"** ಎಂದು ಕರೆದಿದ್ದಾರೆ. ವಿಜಯನಗರ ಸಾಮ್ರಾಜ್ಯದ ಪತನದ ನಂತರ ಹುಬ್ಬಳ್ಳಿಯು ಬಿಜಾಪುರದ ಆದಿಲ್ ಷಾಹಿ ದೊರೆಗಳ ವಶಕ್ಕೆ ಬಂದಿತು. ಹದಿನೇಳನೆಯ ಶತಮಾನದಲ್ಲಿ ಇಲ್ಲಿನ ವಾಣಿಜ್ಯ ವಹಿವಾಟು ಇನ್ನೂ ಬೆಳೆದು ಸಾಕಷ್ಟು ಪ್ರಸಿದ್ಧಿ ಪಡೆಯಿತು. ಬಹಳಷ್ಟು ಶ್ರೀಮಂತ ವ್ಯಾಪಾರಿಗಳಿಂದ ತುಂಬಿತ್ತು. ಇದರಿಂದ ಆಕರ್ಷಿತರಾದ ಬ್ರಿಟಿಷರು ಇಲ್ಲೊಂದು ಜವಳಿ ಕಾರ್ಖಾನೆಯನ್ನು ತೆರೆದಿದ್ದಾರೆ. ಭಾರತದ ಸ್ವಾತಂತ್ರ್ಯ ನಂತರವೂ ಬಾಂಬೆ ರಾಜ್ಯದ ಭಾಗವಾಗಿತ್ತು. ನಂತರ ೧೯೫೬ರ ಕರ್ನಾಟಕ ಏಕೀಕರಣದ ಫಲವಾಗಿ ಕರ್ನಾಟಕ ರಾಜ್ಯದ ಭಾಗವಾಗಿ ಸೇರ್ಪಡೆಯಾಯಿತು.

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಆಗುವುದಕ್ಕೂ ಮೊದಲು ಹುಬ್ಬಳ್ಳಿಯು ಭಾರತ ಸರ್ಕಾರದ ಕಾಯ್ದೆ ೧೮೫೦ ರ ಅಡಿ ಆಗಸ್ಟ್ ೧೫-೧೮೫೫ ರಲ್ಲಿ ಹುಬ್ಬಳ್ಳಿ ನಗರ ಸಭೆ ಸ್ಥಾಪನೆಯಾಯಿತು.

ಧಾರವಾಡ ಪಟ್ಟಣವು ೦೧ ಜನೇವರಿ ೧೮೫೬ ರಲ್ಲಿ ಧಾರವಾಡ ನಗರ ಸಭೆಯಾಗಿ ಸ್ಥಾಪಿತಗೊಂಡಿತು, ಮೊಟ್ಟ ಮೊದಲ ಅಧ್ಯಕ್ಷರಾಗಿ ಶ್ರೀ. ಎಸ್. ಕೆ. ರೊಷ್ಟ

ಎಂಬುವರು ೧೯೦೭ರಲ್ಲಿ ಆಯ್ಕೆಯಾದರು. ೧೯೨೦ ರಲ್ಲಿ ಮೊಟ್ಟ ಮೊದಲ ಬಾರಿಗೆ ಚುನಾಯಿತ ಅಧ್ಯಕ್ಷರಾಗಿ ಶ್ರೀ.ಎಸ್.ಜಿ.ಕರಿಗುದರಿ, ಎಂಬುವವರು ಆಯ್ಕೆಯಾದರು.

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು ೧೯೬೨ ರಲ್ಲಿ ಅಸ್ತಿತ್ವಕ್ಕೆ ಬಂದು ತನ್ನ ಕಾರ್ಯ ಚಟುವಟಿಕೆಗಳನ್ನು ಅಭಿವೃದ್ಧಿಗೊಳಿಸುತ್ತಾ ಬರುತ್ತಿದೆ. ಈ ಮಹಾನಗರ ಪಾಲಿಕೆಯ ಜನಸಂಖ್ಯೆಯು ೨೦೦೬ರ ಜನಗಣತಿಯಂತೆ ೮,೬೮,೧೮೫ ಹೊಂದಿದ್ದು, ಜನಸಾಂದ್ರತೆಯ ಪ್ರಮಾಣ ಪ್ರತಿ ಚದುರ ಕಿ. ಮೀ. ಗೆ ೪೨೯೨ ಇರುತ್ತದೆ. ಇದರ ವಿಸ್ತೀರ್ಣವು ೨೦೦.೨೩ ಚದುರ ಕಿ. ಮೀ.ಇರುತ್ತದೆ. ಸಾಕ್ಷರತಾ ಪ್ರಮಾಣವು ೨೦೦೧ರ ಜನಗಣತಿ ಪ್ರಕಾರದಂತೆ ೮೧.೮% ಇರುತ್ತದೆ. ಇದರಲ್ಲಿ ಪುರುಷರ ಸಾಕ್ಷರತೆ ೮೮.೧%, ಮಹಿಳೆಯರ ಸಾಕ್ಷರತೆ ೭೫.೨% ಆಗಿರುತ್ತದೆ.

ಈ ಮಹಾನಗರ ಪಾಲಿಕೆಯ ಜನಸಂಖ್ಯೆಯು ೨೦೧೧ ರ ಜನಗಣತಿಯಂತೆ ೯,೪೩,೮೫೭ ಹೊಂದಿದ್ದು, ಇದರ ವಿಸ್ತೀರ್ಣವು ೨೦೦.೨೩ ಚದುರ ಕಿ. ಮೀ.ಇರುತ್ತದೆ. ಸಾಕ್ಷರತಾ ಪ್ರಮಾಣವು ೨೦೧೧ರ ಜನಗಣತಿ ಪ್ರಕಾರದಂತೆ ೮೭.೨೮% ಇರುತ್ತದೆ. ಇದರಲ್ಲಿ ಪುರುಷರ ಸಾಕ್ಷರತೆ ೯೧.೬೭%, ಮಹಿಳೆಯರ ಸಾಕ್ಷರತೆ ೮೨.೮೩% ಆಗಿರುತ್ತದೆ.[೧೨]

**ಹುಬ್ಬಳ್ಳಿ –ಧಾರವಾಡ ನಗರದ ಭೌಗೋಳಿಕ ವ್ಯಾಪ್ತಿ :**

ಈ ಮಹಾನಗರ ಪಾಲಿಕೆಯನ್ನು ಕರ್ನಾಟಕ ರಾಜ್ಯದ **“ಅವಳಿನಗರ”** ಎಂದು ಸಹ ಕರೆಯಲಾಗುತ್ತದೆ. ಈ ಅವಳಿ ನಗರವು ಹುಬ್ಬಳ್ಳಿ ಮತ್ತು ಧಾರವಾಡ ಮಹಾನಗರಗಳನ್ನು ಹೊಂದಿದೆ. ಧಾರವಾಡವು ಶೈಕ್ಷಣಿಕವಾಗಿ ಬೆಳೆಯುತ್ತಿದ್ದು, ಹುಬ್ಬಳ್ಳಿಯು ವಾಣಿಜ್ಯೋದ್ಯಮದಲ್ಲಿ ಅಭಿವೃದ್ಧಿಯನ್ನು ಹೊಂದುತ್ತಾ ಬಂದಿದೆ. ಈ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು ೦೩ ವಿಭಾಗಗಳನ್ನು ಹೊಂದಿರುತ್ತದೆ ಅವುಗಳೆಂದರೆ :

೧) ಧಾರವಾಡ ೨) ಹುಬ್ಬಳ್ಳಿ ಉತ್ತರ ೩) ಹುಬ್ಬಳ್ಳಿ ದಕ್ಷಿಣ

ಆಡಳಿತದ ಹಿತದೃಷ್ಟಿಯಿಂದ ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಇತ್ತೀಚೆಗೆ ವಲಯ ಕಛೇರಿಗಳನ್ನು ಪ್ರಾರಂಭಿಸಲಾಗಿದ್ದು, ಧಾರವಾಡದಲ್ಲಿ-೪ ವಲಯ ಕಛೇರಿಗಳು ಹಾಗೂ ಹುಬ್ಬಳ್ಳಿಯಲ್ಲಿ-೦೮ ವಲಯ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ. ಹಾಗೆಯೇ ಈ ಪಾಲಿಕೆ ವ್ಯಾಪ್ತಿಯಲ್ಲಿ ೬೭ ವಾರ್ಡಗಳಿದ್ದು, ಧಾರವಾಡದಲ್ಲಿ-೨೩ ಮತ್ತು ಹುಬ್ಬಳ್ಳಿಯಲ್ಲಿ –೪೪ ವಾರ್ಡುಗಳಿರುತ್ತವೆ.

**ವಲಯ ಕಚೇರಿಗಳ ಕಾರ್ಯಜಾಲ :**

ಹುಬ್ಬಳ್ಳಿ-ಧಾರವಾಡ ನಾಗರೀಕರಿಗೆ ಉತ್ತಮ ಸೇವೆಗಳನ್ನು ಒದಗಿಸುವ ಉದ್ದೇಶದಿಂದ ಎಚ್‌ಡಿಎಂಸಿ ೧೨ ವಲಯ ಕಚೇರಿಗಳನ್ನು ಹಾಗೂ ನಾಗರಿಕ ಸೇವಾ ಕೇಂದ್ರಗಳನ್ನು (ಸಿಎಸ್‌ಸಿಗಳು) ರಚಿಸಿದೆ. ಪ್ರತಿ ವಲಯ ಕಚೇರಿಯೂ ೬ ರಿಂದ ೯ ವಾರ್ಡ್‌ಗಳನ್ನು ಹೊಂದಿದ್ದು, ಓರ್ವ ಚೀಫ್ ಆಫೀಸರ್ ಇದರ ಮುಖ್ಯಸ್ಥರಾಗಿರುತ್ತಾರೆ. ಇವು ಪೂರ್ಣ ಪ್ರಮಾಣದ ಎಚ್‌ಡಿಎಂಸಿ ಕಚೇರಿಗಳಂತೆಯೇ ಕಾರ್ಯನಿರ್ವಹಿಸುತ್ತಿದ್ದು, ಯಾವುದೇ ಸೇವೆ ಪಡೆಯಲು ನಾಗರೀಕರು ಕೇಂದ್ರ ಕಚೇರಿಗೆ ಬರಬೇಕಾದ ಅಗತ್ಯವಿಲ್ಲ.

ಈ ಎಲ್ಲಾ ನಾಗರೀಕ ಸೇವಾ ಕೇಂದ್ರಗಳು ಕಂಪ್ಯೂಟರ್ ಮತ್ತು ಪ್ರಿಂಟರುಗಳಿಂದ ಸಜ್ಜಾಗಿದ್ದು, ಇವುಗಳನ್ನು ವೈಡ್ ಏರಿಯಾ ನೆಟ್‌ವರ್ಕ (ಡಬ್ಲ್ಯೂಎಎನ್) ಮೂಲಕ, ಹುಬ್ಬಳ್ಳಿಯ ಕೇಂದ್ರ ಕಚೇರಿಯಲ್ಲಿರುವ ಕೇಂದ್ರ ಡಾಟಾಬೇಸ್ ಸರ್ವರ್‌ನೊಂದಿಗೆ ಸಂಪರ್ಕಿಸಲಾಗಿದ್ದು, ಹುಬ್ಬಳ್ಳಿ ಕೇಂದ್ರ ಕಚೇರಿಯ ಎಲ್ಲಾ ಇಲಾಖೆಗಳೂ ಲೋಕಲ್ ಏರಿಯಾ ನೆಟ್‌ವರ್ಕ (ಎಲ್‌ಎಎನ್) ನೊಂದಿಗೆ ಸಂಪರ್ಕಿಸಲ್ಪಟ್ಟಿವೆ.

**೧.೧೫ ಅಧ್ಯಯನದ ವ್ಯಾಪ್ತಿ :**

ಈ ಯೋಜನೆಯ ವ್ಯಾಪ್ತಿಯು ವಿಶಾಲವಾದುದಾಗಿದೆ. ಇದು ಭಾರತ ದೇಶದ ಎಲ್ಲಾ ನಗರಗಳ/ಪಟ್ಟಣ (ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ ಮತ್ತು ಪಟ್ಟಣ ಪಂಚಾಯ್ತಿ) ಗಳಿಗೆ ಅನ್ವಯಿಸುತ್ತದೆ. ಭಾರತದಲ್ಲಿ ಎಸ್‌ಜೆಎಸ್‌ಆರ್‌ವೈ ಯೋಜನೆಯು ಜಾರಿಯಲ್ಲಿರುವ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಲಾಗಿದೆ.

**ಕೋಷ್ಟಕ -೧.೧**

| ಕ್ರಮ ಸಂಖ್ಯೆ | ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳು |
|---|---|
| ೦೧ | ಆಂಧ್ರ ಪ್ರದೇಶ |
| ೦೨ | ಅರುಣಾಚಲ ಪ್ರದೇಶ |
| ೦೩ | ಅಸ್ಸಾಂ |
| ೦೪ | ಬಿಹಾರ |
| ೦೫ | ಛತ್ತೀಸ್‌ಗಡ |
| ೦೬ | ಗೋವಾ |
| ೦೭ | ಗುಜರಾತ್ |
| ೦೮ | ಹರಿಯಾಣ |

| | |
|---|---|
| ೦೯ | ಹಿಮಾಚಲಪ್ರದೇಶ |
| ೧೦ | ಜಮ್ಮು ಮತ್ತು ಕಾಶ್ಮೀರ |
| ೧೧ | ಜಾರ್ಖಂಡ್ |
| ೧೨ | ಕರ್ನಾಟಕ |
| ೧೩ | ಕೇರಳ |
| ೧೪ | ಮಧ್ಯಪ್ರದೇಶ |
| ೧೫ | ಮಣಿಪುರ |
| ೧೬ | ಮಹಾರಾಷ್ಟ್ರ |
| ೧೭ | ಮೇಘಾಲಯ |
| ೧೮ | ಮಿಜೋರಾಮ್ |
| ೧೯ | ನಾಗಾಲ್ಯಾಂಡ್ |
| ೨೦ | ಒರಿಸ್ಸಾ |
| ೨೧ | ಪಂಜಾಬ್ |
| ೨೨ | ರಾಜಸ್ಥಾನ |
| ೨೩ | ಸಿಕ್ಕಿಂ |
| ೨೪ | ತಮಿಳುನಾಡು |
| ೨೫ | ತ್ರಿಪುರ |
| ೨೬ | ಉತ್ತರಖಂಡ |
| ೨೭ | ಉತ್ತರ ಪ್ರದೇಶ |
| ೨೮ | ಪಶ್ಚಿಮ ಬಂಗಾಳ |
| ೨೯ | ಅಂಡಮಾನ್ ಮತ್ತು ನಿಕೋಬಾರ್ |
| ೩೦ | ಚಂಢೀಗಡ |
| ೩೧ | ದಿಯು ಮತ್ತು ದಾಮನ್ |
| ೩೨ | ದಿಲ್ಲಿ |
| ೩೩ | ಪಾಂಡಿಚೇರಿ |
| ೩೪ | ದಾದರ್ ಮತ್ತು ನಗರ ಹವೇಲಿ |

ಈ ಯೋಜನೆಯು ಭಾರತ ಸರ್ಕಾರದ ಎಲ್ಲಾ ರಾಜ್ಯದ ಎಲ್ಲಾ ನಗರ/ಪಟ್ಟಣಗಳಲ್ಲೂ ಜಾರಿಯಲ್ಲಿದೆ. ಹಾಗೆಯೇ ಕಾಲಕಾಲಕ್ಕೆ ಯೋಜನೆಯ ಮೇಲೆ ಆಗುವ ಕಾರಣ/ಪರಿಣಾಮಗಳನ್ನು ಗುರುತಿಸಲು ಸರ್ಕಾರದ ಮಟ್ಟದಲ್ಲಿ ವಿವಿಧ

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಮಿತಿಗಳು ಹಾಗೂ ಮೇಲುಸ್ತುವಾರಿ ಸಮಿತಿಗಳನ್ನು ರಚಿಸಿ ಇನ್ನೂ ಸರಳವಾದ ರೀತಿಯಲ್ಲಿ ನಿಯಮ ನಿಬಂಧನೆಗಳನ್ನು ರೂಪಿಸಿ ಜನರಿಗೆ ನೇರವಾಗಿ ಯೋಜನೆಯ ಲಾಭ ತಲುಪಲು ಶ್ರಮಿಸುತ್ತಿದೆ. ವಿವಿಧ ಯೋಜನಾ ಸಮಿತಿಗಳು ಕಾಲಕಾಲಕ್ಕೆ ಅಧ್ಯಯನ ಮಾಡಿ ಬದಲಾದ ಪರಿಸ್ಥಿತಿಗನುಗುಣವಾಗಿ ಯೋಜನೆಯ ನೀತಿ ನಿಯಮಗಳನ್ನು ರೂಪಿಸುತ್ತಾ ಬರುತ್ತಿದೆ.

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ಕರ್ನಾಟಕದ ಎಲ್ಲಾ ನಗರಗಳಲ್ಲಿ ಜಾರಿಯಲ್ಲಿದ್ದರೂ ಆಯಾ ನಗರದ ಭೌಗೋಳಿಕ ಹಿನ್ನಲೆಗೆ ತಕ್ಕಂತೆ ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಈ ಅಧ್ಯಯನಕ್ಕೆ ವಿಶಾಲವಾದ ಹಿನ್ನಲೆಯನ್ನು ಇಟ್ಟುಕೊಂಡು ಧಾರವಾಡ ಜಿಲ್ಲೆಯಲ್ಲಿ ಬರುವ ಕರ್ನಾಟಕದ ೨ನೇ ಅತಿ ದೊಡ್ಡ ಹುಬ್ಬಳ್ಳಿ-ಧಾರವಾಡ ಮಹಾನಗರವನ್ನು ಆಯ್ದು ಕೊಂಡು ಅದರಲ್ಲಿ ಪ್ರದೇಶವಾರು ವಿಂಗಡಿಸಿ ೨೩ ಪ್ರದೇಶಗಳನ್ನು ಗಮನದಲ್ಲಿಟ್ಟು ಕೊಂಡು ಅಧ್ಯಯನ ನಡೆಸಲಾಗಿದೆ.

**ಹುಬ್ಬಳ್ಳಿ** : ನವ ಆನಂದನಗರ, ರಾಮಲಿಂಗೇಶ್ವರನಗರ, ಗಿರಣಿ ಚಾಳ, ಗಿರಿಜಾನಗರ, ಮಾರುತಿನಗರ (ಹೊಸೂರು ಪ್ಲಾಟ್), ಲೋಕಪ್ಪನ ಹಕ್ಕಲು, ದೇವಿನಗರ, ಕೇಶ್ವಾಪುರ ತಳವಾರ ಓಣಿ, ಮಾರುತಿನಗರ (ಹೆಗ್ಗೇರಿ), ಶಿರಡಿನಗರ, ಮಾಧವನಗರ, ನೇಕಾರನಗರ.

**ಧಾರವಾಡ** : ತಡಸಿನ ಕೊಪ್ಪ, ಲಿಡ್ಕರ್ ಕಾಲೋನಿ, ಸತ್ತೂರು ಆಶ್ರಯ ಕಾಲೋನಿ, ಆಂಜನೇಯನಗರ, ರಾಜೀವಗಾಂಧಿನಗರ, ಗಣೇಶ ನಗರ, (ಹಳಿಯಾಳ ರೋಡ್), ಶ್ರೀರಾಮನಗರ, ದಾನುನಗರ, ನೆಹರುನಗರ, ಹೊಸಯಲ್ಲಾಪುರ, ತೇಜಶ್ವಿನಿನಗರ.

ಇದೊಂದು ಸೂಕ್ಷ್ಮ ಸಂಶೋಧನೆ. ಇದು ಈ ಅಧ್ಯಯನದ ವ್ಯಾಪ್ತಿಯೂ, ಮಿತಿಯೂ ಹೌದು. ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿ ನೋಡಿದಾಗ ನಗರ ಪ್ರದೇಶದ ಜನರ ಜೀವನ ರೀತಿ ನೀತಿಗಳೇ ಬೇರೆಯಾಗಿರುತ್ತವೆ. ಹಾಗಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರವು ಅತಿ ವೇಗವಾಗಿ ಬೆಳೆಯುತ್ತಿರುವ ನಗರವಾಗಿರುವುದರಿಂದ ಈ ನಗರದಲ್ಲಿನ ಬಡಜನರ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಭವಿಷ್ಯದ ನಗರಗಳ ನಿರ್ಮಾಣದ ದೃಷ್ಟಿಯಿಂದ ಅನುಕೂಲವೆಂದು ಭಾವಿಸಿ ಈ ನಗರವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

### ೧.೧೬. ಅಧ್ಯಯನ ಮಹತ್ವ:

049537

ಪ್ರತಿಯೊಂದು ಅಧ್ಯಯನವು ತನ್ನದೇ ಆದ ಮಹತ್ವವನ್ನು ಹೊಂದಿದೆ. ಸಮಾಜ ಮುಂದುವರಿದಂತೆ ಬದಲಾವಣೆಗೆ ಬಾಗಿಲು ತೆರೆಯುತ್ತಾ ಇರುವುದನ್ನು ಕಾಣಬಹುದಾಗಿದೆ.

೧. ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯು ೧೯೯೭ರಲ್ಲಿ ಪ್ರಾರಂಭವಾಗಿರುವುದರಿಂದ ಈ ಯೋಜನೆಯಿಂದ ನಗರದಲ್ಲಿ ಕಂಡು ಬಂದಿರುವ ಬದಲಾವಣೆಗಳನ್ನು ತಿಳಿದು ಕೊಳ್ಳಲು ಸಹಾಯಕವಾಗುತ್ತದೆ.

೨. ಈ ಯೋಜನೆಯಿಂದ ನಗರದ ಬಡಜನರ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ತಿಳಿದುಕೊಳ್ಳಲು ಸಹಾಯಕ.

೩. ಈ ಅಧ್ಯಯನದಿಂದ ಸರ್ಕಾರದ ಯೋಜನೆಗಳ ಯಶಸ್ವಿಯ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.

೪. ಲಾಭದಾಯಕ ಸ್ವಯಂ ಉದ್ಯೋಗ ಸ್ಥಾಪಿಸಲು ನಗರದ ಆಯ್ದ ಪ್ರತಿಯೊಬ್ಬ ಬಡಕುಟುಂಬದ ಫಲಾನುಭವಿಗಳಿಗೆ ಈ ಯೋಜನೆ ಹೇಗೆ ಸಹಾಯಕಾರಿಯಾಗಿದೆ ಎಂಬುದನ್ನು ತಿಳಿದುಕೊಳ್ಳಲು.

೫. ನಗರದ ಮಹಿಳೆಯರು ಗುಂಪು ಚಟುವಟಿಕೆಗಳ ಮೂಲ ಸ್ವಯಂ ಉದ್ಯೋಗ ನಡೆಸಿ ಕೊಳ್ಳಲು ಹೇಗೆ ಸಹಾಯಕವಾಗುತ್ತದೆ ಎಂಬುದು.

೬. ಈ ಅಧ್ಯಯನದಿಂದ ನಗರದಲ್ಲಿರುವ ಬಡ ಜನರಿಗೆ ವೃತ್ತಿಪರ ಸಂಬಂಧ ಹಾಗೂ ಉದ್ಯಮಶೀಲ ನೈಪುಣ್ಯತೆಯನ್ನು ಹೆಚ್ಚಿಸಲು ತರಬೇತಿ ಹೇಗೆ ಸಹಾಯಕ ಎಂಬುದನ್ನು ತಿಳಿಯಲು ಸಹಾಯಕವಾಗಿದೆ.

೭. ನಗರಕ್ಕೆ ದಿನೇ ದಿನೇ ಗ್ರಾಮೀಣಾ ಪ್ರದೇಶದಿಂದ ವಲಸೆ ಹೆಚ್ಚಾಗುತ್ತಿದ್ದು, ಅವರು ಸರ್ಕಾರದ ಅಭಿವೃದ್ಧಿ ಯೋಜನೆಗಳಲ್ಲಿ ಭಾಗವಹಿಸದೇ ಕೂಲಿ ಮಾಡುವ ಜನರಾಗಿದ್ದು, ಸರಕಾರದ ಯೋಜನೆಗಳ ಬಗೆಗೆ ಮಾಹಿತಿ ಇಲ್ಲದವರಾಗಿದ್ದಾರೆ. ಈ ಅಧ್ಯಯನದಿಂದ ಅವರಿಗೆ ಅಗತ್ಯ ನೆರವು ಒದಗಿಸಲು ಸಹಾಯಕ.

೮. ಸರ್ಕಾರದ ಈ ಯೋಜನೆಯ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಹಾಗೂ ಅವಶ್ಯಕವಾಗಿ ಬಡ ಜನರು ಸರ್ಕಾರದ ಯೋಜನೆಗಳಿಂದ ಇಟ್ಟು ಕೊಂಡಿರುವ ನಿರೀಕ್ಷೆಗಳನ್ನು ಅಧ್ಯಯನ ಮಾಡಿ ಆ ಮೂಲಕ ಸರ್ಕಾರದ ಗಮನಕ್ಕೆ ತರುವುದು.

೯. ಸ್ವಯಂ ಉದ್ಯೋಗದಿಂದ ಉತ್ಪಾದಿತವಾದ ವಸ್ತುಗಳ ಮಾರಾಟಕ್ಕೆ ಫಲಾನುಭವಿಗಳು ಎದುರಿಸುತ್ತಿರುವ ಮಾರುಕಟ್ಟೆ ಸಮಸ್ಯೆಗಳ ಬಗ್ಗೆ ತಿಳಿದುಕೊಳ್ಳಲು ಸಹಾಯಕ.

ಸರ್.ಎಂ.ವಿಶ್ವೇಶ್ವರಯ್ಯನವರು ಭಾರತದ **"ಆರ್ಥಿಕ ಯೋಜನೆ"** ಎಂಬ ಗ್ರಂಥ ಪ್ರಕಟಿಸಿದ ನಂತರ ಆರ್ಥಿಕ ಅಭಿವೃದ್ಧಿಗೆ ಯೋಜನೆಯ ಪ್ರಾಮುಖ್ಯತೆಯನ್ನು ವಿವರಿಸಿ "ಕೈಗಾರೀಕರಣಗೊಳ್ಳು ಅಥವಾ ನಾಶ ಹೊಂದು" ಎಂದು ಹೇಳಿದ್ದಾರೆ. ಯೋಜನೆಯಿಲ್ಲದಿದ್ದರೆ ಜನರ ಹಾಗೂ ದೇಶದ ಆರ್ಥಿಕ ಅಭಿವೃದ್ಧಿ ಸಾಧ್ಯವಿಲ್ಲವೆಂಬುದು ಅವರ ಅಭಿಪ್ರಾಯವಾಗಿದೆ. ಹಾಗಾಗಿ ಯೋಜನೆಗಳ

ಅವಶ್ಯಕತೆ, ಜಾರಿ, ಉದ್ದೇಶದ ಬಗ್ಗೆ ಒತ್ತಿ ಹೇಳಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಗರ ಸಮುದಾಯದ ಯೋಜನೆಯ ನೈಜ ಚಿತ್ರಣ ಒದಗಿಸುವಲ್ಲಿ ಈ ಅಧ್ಯಯನವು ಪ್ರಾಮುಖ್ಯತೆಯನ್ನು ಹೊಂದಿದೆ.

### ೧.೧೭. ಪೂರ್ವ ಪ್ರಾತ್ಯಕ್ಷಿತೆ ಅಧ್ಯಯನ :

ಸರ್ವೆ ಕಾರ್ಯದಲ್ಲಿ ಫಲಾನುಭವಿಗಳು ವೈಯಕ್ತಿಕ ಮಾಹಿತಿಯನ್ನು ನೀಡಿದ ನಂತರ ತಾವು ಕೈಗೊಂಡ ಕಾರ್ಯಕ್ರಮದ ಬಗ್ಗೆ ವಿವರ ನೀಡಿದರು. ಸರ್ವೆ ನಮೂನೆಯಲ್ಲಿದ್ದ ಸಾಮಾಜಿಕ ಬದಲಾವಣೆಯ ಅಂಶಗಳು ಮತ್ತು ರಾಜಕೀಯ ಬದಲಾವಣೆಯ ಅಂಶಗಳಲ್ಲಿ ಕೆಲವು ಪ್ರಶ್ನೆಗಳಿಗೆ ಉತ್ತರಿಸಲು ಮೌನವಾದರು. ಉದಾ:– ಗಂಡನ ಕುಡಿತ ಬಿಡಿಸಿದ್ದೀರಾ? ಈ ವಿಷಯವಾಗಿ ಎಂದಾದರೂ ಯೋಚಿಸಿದ್ದೀರಾ? ಹೀಗೆ ಮುಂದುವರಿಸಿದಂತೆ ಈ ಕೆಳಗಿನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕಷ್ಟವಾಯಿತು ಅವುಗಳೆಂದರೆ:–

೧) ಕುಟುಂಬದ ಸದಸ್ಯರ ಆದಾಯವನ್ನು ನೀಡಲು ಸರ್ವೆ ಕಾರ್ಯದಲ್ಲಿ ಮೊದಲು ನಿರಾಕರಿಸಿ ಯಾವ ಉದ್ದೇಶಕ್ಕಾಗಿ ಎಂದು ಪ್ರಶ್ನಿಸಿದರು. ಈಗಾಗಲೇ ನಾನು ತಿಳಿಸಿದಂತೆ ಪಿಎಚ್‌ಡಿ ವಿಷಯವಾಗಿ ನಿಮ್ಮ ಆರ್ಥಿಕ ಸಾಮರ್ಥ್ಯತೆಯನ್ನು ಹಾಗೂ ಜೀವನ ಮಟ್ಟವನ್ನು ತಿಳಿಯುವುದಕ್ಕಾಗಿ ಎಂದು ಸಮಜಾಯಿಸಿ ನೀಡಲಾಯಿತು.

೨) ಪ್ರಾಣಿಗಳಿಂದ ಬರುವ ಆದಾಯವನ್ನು ಸರಾಸರಿಯಾಗಿ ವಿವರಿಸಿದರು.

೩) ಮಹಿಳಾ ಸ್ಥಾನಮಾನ ವಿಷಯದಲ್ಲಿ.

ಎ. ಕುಟುಂಬದ ನಿರ್ಣಯಗಳಲ್ಲಿ ನೀವು ಪಾಲ್ಗೋಳ್ಳುತ್ತೀರಾ?

೪) ನಿಮ್ಮ ಪತಿಗೆ ಕುಡಿತದ ಚಟವು ಇದೆಯೇ? ಇದ್ದರೆ ಅದನ್ನು ಬಿಡಿಸಲು ಪ್ರಯತ್ನಿಸಿದ್ದೀರಾ? ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ಕಷ್ಟವಾಯಿತು.

೫) ರಾಜಕೀಯ ಬದಲಾವಣೆ ಪ್ರಶ್ನೆಯಲ್ಲಿ

ಎ. ಹೆಂಡತಿಯನ್ನು ಬಡಿಯುವ ಗಂಡನನ್ನು ಪ್ರತಿಭಟಿಸುತ್ತೀರಾ?

ಬಿ. ಕೆಲಸದ ಪ್ರದೇಶಗಳಲ್ಲಿ ಮಹಿಳೆಗೆ ಕಿರುಕುಳ ಕೊಡುವುದನ್ನು ಪ್ರತಿಭಟಿಸಿದ್ದೀರಾ?

ಸಿ. ಕೂಲಿಯಲ್ಲಿ ಮಹಿಳೆ/ಪುರುಷರ ಅಸಮಾನತೆಯನ್ನು ಪ್ರತಿಭಟಿಸಿದ್ದೀರಾ?

೬) ಪ್ರಶ್ನೆ ಸಂಖ್ಯೆ ೧೦.೭ಕ್ಕೆ ಸಹಾಯಧನವನ್ನು ರೂಪಾಯಿಗಳಲ್ಲಿ ತಿಳಿಸಿರುತ್ತಾರೆ. ಹಾಗಾಗಿ ಪ್ರಶ್ನೆಯಲ್ಲಿದ್ದ ಶೇಕಡವಾರು ಎಂಬ ಅಂಶವನ್ನು ಬದಲಾಯಿಸಿಕೊಳ್ಳಲಾಯಿತು.

೭) ಪ್ರಶ್ನೆ ಸಂಖ್ಯೆ ೧೦.೧೬ ರಲ್ಲಿ ಕೇಳಲಾದ ಚಾಲ್ತಿ ಖಾತೆ ವಿವರದ ಅವಶ್ಯಕತೆ ಇರುವುದಿಲ್ಲ.

ಹೀಗೆ ಇನ್ನೂ ಅನೇಕ ಅಂಶಗಳನ್ನು ಪರಿಗಣಿಸಿ ಕೆಲವು ಪ್ರಶ್ನೆಗಳನ್ನು ಸರಿಪಡಿಸಿಕೊಂಡು ಮಾಹಿತಿ ಕಲೆಹಾಕಲಾಯಿತು.

## ೧.೧೮. ಅಧ್ಯಯನ ಅವಧಿಯಲ್ಲಿ ಅನುಭವಿಸಿದ ಸಮಸ್ಯೆಗಳು ಮತ್ತು ಆದ ಅನುಭವ:

ಹುಬ್ಬಳ್ಳಿ- ಧಾರವಾಡ ಮಹಾನಗರದ ವ್ಯಾಪ್ತಿಯನ್ನು ಈ ಸಂಶೋಧನಾ ಅಧ್ಯಯನವನ್ನಾಗಿ ಆಯ್ಕೆ ಮಾಡಿಕೊಂಡಾಗ ಈ ಮಹಾನಗರದಲ್ಲಿ ಸ್ಥಳೀಯ ಸಂಸ್ಥೆಯಿಂದ ಪಡೆದ ಮಾಹಿತಿ ಪ್ರಕಾರ ಒಟ್ಟು ೬೭ ವಾರ್ಡುಗಳನ್ನು ಹೊಂದಿ ಅತ್ಯಂತ ಬೃಹತ್ ಮಹಾನಗರವಾದ್ದರಿಂದ, ಈ ನಗರವನ್ನು ಕರ್ನಾಟಕದ ಅವಳಿ ನಗರ, ಕರ್ನಾಟಕದ ಎರಡನೇ ಅತಿ ದೊಡ್ಡ ನಗರವೆಂದು ಕರೆಯಲಾಗುತ್ತದೆ. ಅಧ್ಯಯನದ ಪ್ರಾತ್ಯೆಕ್ಷಿಕೆಯನ್ನು ಮಾಡುವ ಮೊದಲು ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನಾ ಕಛೇರಿಗೆ ಭೇಟಿ ನೀಡಲಾಯಿತು. ಕಛೇರಿಯಲ್ಲಿದ್ದ ಸಮುದಾಯ ವ್ಯವಹಾರ ಅಧಿಕಾರಿಯವರಿಗೆ ಈ ವಿಷಯದ ಬಗ್ಗೆ ತಿಳಿಸಿ ಸಂಶೋಧನಾ ಉದ್ದೇಶವನ್ನು ತಿಳಿಸಿದೆ ಸದರಿ ಅಧಿಕಾರಿಯು ಮಹಾನಗರ ಪಾಲಿಕೆ ಆಯುಕ್ತರಿಂದ ಅನುಮತಿ ಪಡೆಯಿರಿ ತದನಂತರ ನಿಮಗೆ ಬೇಕಾದ ಎಲ್ಲಾ ಅಂಕಿ ಅಂಶಗಳನ್ನು ನೀಡಲಾಗುವುದೆಂದು ತಿಳಿಸಿದರು, ಅದರಂತೆ ಆಯುಕ್ತರಿಂದ ಅನುಮತಿ ಪಡೆದು ಅನುಮೋದನಾ ಪತ್ರದ ಜೆರಾಕ್ಸ್ ಪ್ರತಿಯನ್ನು ನೀಡಿದ ನಂತರ ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿಯಲ್ಲಿ ಬರುವ ಪ್ರದೇಶಗಳನ್ನು ಮತ್ತು ಫಲಾನುಭವಿಗಳ ವಿವರಗಳನ್ನು ನೀಡಿದರು.

ನಂತರ ಈ ಪ್ರಾಕ್‌ಕಲ್ಪನೆ ಮತ್ತು ಅಧ್ಯಯನದ ಉದ್ದೇಶವನ್ನಿಟ್ಟು ಕೊಂಡು ಕರಡು ಪ್ರಶ್ನಾವಳಿಯನ್ನು ತಯಾರಿಸಲಾಯಿತು. ವಿಳಾಸ ಪಡೆದು ಫಲಾನುಭವಿಗಳನ್ನು ಭೇಟಿ ಮಾಡಲು ಪ್ರಯತ್ನಿಸಿದೆ ಮೊದಲು ನನ್ನ ಪರಿಚಯ ಮಾಡಿಕೊಳ್ಳಲಾಯಿತು, ಈ ಅಧ್ಯಯನದ ಉದ್ದೇಶವನ್ನು ತಿಳಿಸಿದಾಗ ಕೆಲವು ಫಲಾನುಭವಿಗಳು ಇದೇ ರೀತಿ ಸರ್ಕಾರದಿಂದ ಮಾಹಿತಿ ಪಡೆಯುತ್ತಾರೆ ನೀವು ಮಾಹಿತಿ ತೆಗೆದು ಕೊಳ್ಳುತ್ತೀರಿ ಆದರೆ ಇದರಿಂದ ಯಾವುದೇ ಬದಲಾವಣೆ ಮಾಡುವುದಿಲ್ಲ ಎಂಬ ಪ್ರಶ್ನೆ ಬಂದಾಗ, ಸರ್ಕಾರವು ಜಾರಿಗೊಳಿಸಿದ ಯೋಜನೆಯು ಸೂಕ್ತ ಫಲಾನುಭವಿಗಳಿಗೆ ತಲುಪಿದೆಯೇ ಎಂಬುದನ್ನು ಪರಿಶೀಲನೆ ಮಾಡಲು ಪ್ರಯತ್ನಿಸುತ್ತದೆ ಹಾಗೂ ಜನರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕಾಲಕಾಲಕ್ಕೆ ನಿಯಮಗಳಲ್ಲಿ ಇರುವ ಅಡಚಣೆಗಳ ಬಗ್ಗೆ ನಿಯಮಗಳನ್ನು ಪರಿಷ್ಕರಿಸಿ ಸರಳ ರೀತಿಯಲ್ಲಿ ರಚಿಸಲು ಇರಬಹುದು ಅಥವಾ ಈಗಾಗಲೇ ಜಾರಿಯಲ್ಲಿರುವ ಯೋಜನೆಯಿಂದಾಗಿ ಫಲಾನುಭವಿಗಳ ಆರ್ಥಿಕ/ಜೀವನ ಮಟ್ಟ ಹೇಗಿದೆ ಎಂಬುದರ ಮಾಹಿತಿ ಪಡೆದುಕೊಳ್ಳಲೆಂದು ತಿಳಿಸಿದೆ. ಈ ಮಾಹಿತಿ ಪಡೆಯುವ ಉದ್ದೇಶವನ್ನು ಜನರು ಕೇಳಿದಾಗ ಕೈಗೊಳ್ಳುವ ಅಧ್ಯಯನದ ಉದ್ದೇಶವು ಸಹ ಯೋಜನೆ ಜಾರಿಯಾದ ನಂತರ ನಿಮ್ಮ ಜೀವನ ಮಟ್ಟದ ಸ್ಥಿತಿಗತಿಗಳನ್ನು ಅರಿಯುವುದು, ಸರ್ಕಾರವು ಜಾರಿಗೊಳಿಸಿದ ಯೋಜನೆಯ ಪರಿಣಾಮಗಳ ಬಗ್ಗೆ ಜನರ ಒಲವು ನಿಲುವುಗಳು ಸರ್ಕಾರದ ಯೋಜನೆಯ ಲಾಭ-ನಷ್ಟ ಇತ್ಯಾದಿ ವಿವರಗಳ ಅಧ್ಯಯನ ಮಾಡಿ ಇದರಿಂದ ಜನರಿಗಾಗಿರುವ ಲಾಭ-ನಷ್ಟ, ನಿಮ್ಮ ಅಭಿಪ್ರಾಯಗಳನ್ನು

ಸಲಹೆಗಳನ್ನು ನನ್ನ ಅಧ್ಯಯನದಲ್ಲಿ ಪ್ರಕಟಿಸಲಾಗುವುದು ಎಂದು ತಿಳಿಸಿದಾಗ ಕೆಲವು ಮಾಹಿತಿದಾರರು ನೀವು ಬಂದಿದ್ದೀರಾ ಬರೆದು ಕೊಳ್ಳಿ ಎಂದರು, ಇನ್ನು ಕೆಲವರು ಸಂತೋಷದಿಂದ ಮಾಹಿತಿ ನೀಡಿರುತ್ತಾರೆ, ಇನ್ನು ಕೆಲವರು ಗ್ರಾಮೀಣ ಪ್ರದೇಶದಂತಿರುವ ನಗರ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿ ಜನರು ಆ ಪ್ರದೇಶದ ಹಿರಿಯ ಮುಖಂಡರನ್ನು ಅಥವಾ ಮಹಾನಗರ ಪಾಲಿಕೆ ಅಧಿಕಾರಿಗಳನ್ನು ಭೇಟಿ ಮಾಡಿ ಅನುಮತಿ ಪಡೆದು ಬನ್ನಿ ನಮ್ಮದೇನೂ ಅಭ್ಯಂತರವಿಲ್ಲ ಮಾಹಿತಿ ನೀಡುತ್ತೇವೆ ಎಂದರು, ಕೆಲವು ಮುಸ್ಲಿಂ ಸಮುದಾಯದ ಕುಟುಂಬಗಳಿಗೆ ಭೇಟಿ ನೀಡಿದಾಗ ಬಾಗಿಲು ತೆರೆಯುವ ಮುನ್ನವೇ ನೀವು ಯಾರು ಯಾಕೆ ಬಂದಿದ್ದೀರಿ ನಮ್ಮ ಮನೆಯಲ್ಲಿ ಗಂಡಸರು ಹೊರಗಡೆ ಹೋಗಿದ್ದಾರೆ ಆನಂತರ ಬನ್ನಿ ಎಂದು ಉತ್ತರ ನೀಡಿದರು, ಈ ಮಾತನ್ನು ಹೇಳುವಾಗ ಅವರ ಮುಖದಲ್ಲಿ ಭಯವಿತ್ತು. ಸ್ವಸಹಾಯ ಸಂಘಗಳ ಬಗ್ಗೆ ಮಾಹಿತಿ ಪಡೆಯುವ ಸಂದರ್ಭದಲ್ಲಿ ಅಲ್ಲಿನ ಜನರು ಸ್ವಯಂ ಉದ್ಯೋಗ ಕೈಗೊಳ್ಳಲು ಕೆಲವರಿಗೆ ಮಾತ್ರ ಒಪ್ಪಿಗೆ ನೀಡಿರುತ್ತೀರಿ ನಮಗೇನು ಎಲ್ಲಾ ಸರಿಯಾಗಿದೆ ಎಂದು ತಿಳಿದುಕೊಂಡಿದ್ದೀರಾ ನಮಗೂ ವ್ಯಾಪಾರ ಮಾಡಲು ಸಬ್ಸಿಡಿ ಕೊಡಿಸಿ ಎಂದು ಕೇಳಿದರು, ಪ್ರತಿ ಪ್ರದೇಶದಲ್ಲೂ ಎಲ್ಲಾ ವರ್ಗಗಳ ಕಾರ್ಯಕ್ರಮದ ಫಲಾನುಭವಿಗಳಾಗಿರುವವರು ಎಸ್‌ಜೆಎಸ್‌ಆರ್‌ವೈ ಅಧಿಕಾರಿ/ಸಿಬ್ಬಂದಿಗಳಿಗೆ ತಿಳಿಸಿ ಬಂದಿದ್ದೀರಾ ಎಂಬ ಬಗ್ಗೆ ಪ್ರಶ್ನಿಸಿದರು, ಆ ಸಂದರ್ಭದಲ್ಲಿ ಸದರಿ ಅಧಿಕಾರಿ /ಸಿಬ್ಬಂದಿಗಳ ಹೆಸರುಗಳನ್ನು ಹೇಳಿದಾಗ ಮಾಹಿತಿ ನೀಡಿದರು. ಫಲಾನುಭವಿಯಲ್ಲದ ಮಹಿಳೆಯರು ನೋಡುತ್ತಾ ನಿಂತಿದ್ದು, ಈ ಯೋಜನೆ ನಮಗೇಕೆ ಇನ್ನೂ ನೀಡಿಲ್ಲ ಎಂದು ಬೇಸರಿಸಿ ಕೊಂಡರು ಆಗ ಸರ್ಕಾರದ ಯೋಜನೆಗಳಲ್ಲಿ ವರ್ಷಕ್ಕೆ ಇಂತಿಷ್ಟು ಎಂದು ಫಲಾನುಭವಿಗಳನ್ನು ನಿಗದಿ ಮಾಡಿರುತ್ತಾರೆ ಅದರಲ್ಲಿ ನಿಯಮದ ಪ್ರಕಾರ ಆದ್ಯತೆ ಮೇರೆಗೆ ನೀಡಬೇಕಾಗುತ್ತದೆಂದು ತಿಳಿಸಿದಾಗ ಅಸಮಧಾನ ವ್ಯಕ್ತಪಡಿಸುತ್ತಿದ್ದುದು ಕಂಡು ಬಂತು. ಕ್ಷೇತ್ರ ಕಾರ್ಯಕ್ಕೆ ತೆರಳುವ ಮುನ್ನ ಎಸ್‌ಜೆಎಸ್‌ಆರ್‌ವೈ ಯೋಜನಾಧಿಕಾರಿಗಳಿಗೆ ಭೇಟಿ ಮಾಡಿ ಕೆಲವರಿಗೆ ಮೊಬೈಲ್ ಮೂಲಕ ಸಂಪರ್ಕಿಸಿ ತೆರಳಲಾಯಿತು, ಯಾಕೆಂದರೆ ಮನೆಗೆ ವಿಳಾಸ ಹಿಡಿದು ಹೋಗುವುದು ಫಲಾನುಭವಿ ಬಾಗಿಲು ಬಂದ್ ಮಾಡಿ ಕೆಲಸಕ್ಕೆ ಹೋಗಿರುವುದು ಗೊತ್ತಾದಾಗ ಮರಳಿ ಬರುವುದು ಇದೇ ರೀತಿ ಹಲವು ಬಾರಿ ಹೋಗಿ ವಾಪಸ್ಸು ಬಂದ ನಿದರ್ಶನಗಳಿವೆ. ಸಂದರ್ಶಿಸಿದ ಎಲ್ಲಾ ಫಲಾನುಭವಿಗಳು ಒಳಚರಂಡಿ, ಮಳೆನೀರು ಚರಂಡಿ, ಸುಸಜ್ಜಿತವಾದ ರಸ್ತೆಯ ಬಗ್ಗೆ ಪ್ರಶ್ನಿಸುತ್ತಿದ್ದುದು ಕ್ಷೇತ್ರ ಕಾರ್ಯದಲ್ಲಿ ತಿಳಿದು ಬಂದಿದೆ. ಅತಿ ಸೂಕ್ಷ್ಮ ವಿಷಯವಾದ ನೀರು ಸರಬರಾಜು ಬಗ್ಗೆ ಅಷ್ಟಾಗಿ ಜನರಿಂದ ಅತೃಪ್ತಿ ಕಂಡು ಬರಲಿಲ್ಲ.

ಒಟ್ಟಾರೆ ಮೇಲಿನ ಎಲ್ಲಾ ಅನುಭವಗಳಾದರೂ ಸಹ ಪ್ರಾತ್ಯಕ್ಷಿತೆ ಅಧ್ಯಯನ ಮುಗಿಸಿ ಪ್ರಶ್ನಾವಳಿಯನ್ನು ಅಂತಿಮಗೊಳಿಸಲಾಯಿತು.

**೧.೧೯. ಅಧ್ಯಯನ ವಿನ್ಯಾಸ:**

ಪ್ರಸ್ತುತ ಅಧ್ಯಯನ ನಗರದ ಬಡ ಜನರ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಬೃಹತ್ ಪ್ರಮಾಣದಲ್ಲಿ ಎಲ್ಲಾ ರಾಜ್ಯಗಳ ಎಲ್ಲಾ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ವಿಸ್ತರಿಸಿರುವುದರಿಂದ ಈ ಯೋಜನೆಯ ಸಾಧಕ ಭಾದಕಗಳ ಕುರಿತು ವಿವರಗಳನ್ನು ಕೆಲೆಹಾಕಿ ಯೋಜಯಲ್ಲಿರುವ ಸಮಸ್ಯೆಗಳು ಹಾಗೂ ಅದಕ್ಕೆ ಪರಿಹಾರಗಳನ್ನು ಕಂಡು ಕೊಳ್ಳಬೇಕಾಗುತ್ತದೆ. ಹಾಗಾಗಿ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟಕೊಂಡು ಈ ಅಧ್ಯಯನವನ್ನು ಒಟ್ಟು ೦೫ ಅಧ್ಯಾಯಗಳಲ್ಲಿ ವರ್ಗೀಕರಿಸಲಾಗಿದೆ.

**ಅಧ್ಯಾಯ – ೦೧: ಅಧ್ಯಯನದ ಪರಿಚಯ:**

ಪ್ರಸ್ತಾವನೆ, ಎಸ್‌ಜೆಎಸ್‌ಆರ್‌ವೈ ಯೋಜನೆಯ ಕಾರ್ಯಕ್ರಮಗಳ ಕಿರುನೋಟ, ಅಧ್ಯಯನದ ಉದ್ದೇಶಗಳು, ಎಸ್‌ಜೆಎಸ್‌ಆರ್‌ವೈ ಯೋಜನೆಯ ಶೀರ್ಷಿಕೆಯ ವಿವರಣೆ, ಅಧ್ಯಯನದ ನಮೂನೆ, ಅಧ್ಯಯನ ಕ್ಷೇತ್ರದ ಪರಿಚಯ ಮತ್ತು ಹಿನ್ನಲೆ, ಸೂಕ್ಷ್ಮಅಧ್ಯಯನ, ಭಾರತ ದೇಶದ ಭೌಗೋಳಿಕ ಹಿನ್ನಲೆಯ ಸಂಕ್ಷಿಪ್ತ ಪರಿಚಯ, ಅಧ್ಯಯನ ತಂತ್ರಗಳು/ ಆಕರಗಳು, ಪೂರ್ವ ಪ್ರಾತ್ಯಕ್ಷಿಕೆ ಅಧ್ಯಯನ, ಅಧ್ಯಯನದ ಅವಧಿ, ಅಧ್ಯಯನ ಅವಧಿಯಲ್ಲಿ ಅನುಭವಿಸಿದ ಸಮಸ್ಯೆಗಳು, ಅಧ್ಯಯನದ ಹಿತಿಮಿತಿಗಳು, ಅಧ್ಯಯನ ವಿಷಯದ ಸಮಸ್ಯೀಕರಣ, ಅಧ್ಯಯನದ ವ್ಯಾಪ್ತಿ, ಪ್ರಾಕ್ ಕಲ್ಪನೆಗಳು, ಅಧ್ಯಯನ ವಿಧಾನ, ಮಹತ್ವ, ಅಧ್ಯಾಯಗಳ ವಿನ್ಯಾಸ ಈ ಅಧ್ಯಾಯದಲ್ಲಿ ನೀಡಲಾಗಿದೆ.

**ಅಧ್ಯಾಯ – ೦೨ : ಅಧ್ಯಯನದ ಸಮೀಕ್ಷೆ:**

ಎಸ್‌ಜೆಎಸ್‌ಆರ್‌ವೈ ಯೋಜನೆಯು ಭಾರತದಾದ್ಯಂತ ಜಾರಿಯಲ್ಲಿರುವ ಯೋಜನೆಯಾಗಿದ್ದು, ಈ ಯೋಜನೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ಅನುದಾನದಲ್ಲಿ ನಡೆಯುತ್ತಿದ್ದು, ಅಧ್ಯಯನಕ್ಕೆ ಸಂಬಂಧಿಸಿದಂತೆ ಆಗಿರುವ ಸರ್ಕಾರದ ವರದಿ ಮತ್ತು ಅಧ್ಯಯನಗಳಿಂದ ಅಧ್ಯಯನಗಳ ವಿಶ್ಲೇಷಣೆಯ ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ – ೦೩ : : ಸಾಮಾಜಿಕ ಆರ್ಥಿಕ ನಿರ್ಧಾರಕಾಂಶಗಳು :**

ಈ ಅಧ್ಯಾಯದಲ್ಲಿ ನಗರ ಸಮುದಾಯದ ಎಲ್ಲಾ ಯೋಜನಾ ಫಲಾನುಭವಿಗಳ ವಯಸ್ಸು, ಜಾತಿ, ಲಿಂಗ, ಶಿಕ್ಷಣ, ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ಥಿತಿಗತಿ ಮೊದಲಾದ ಅಂಶಗಳನ್ನು ಅರಿತುಕೊಳ್ಳುವುದರಿಂದ ಮಾತ್ರ ಯೋಜನೆಯಿಂದ ಜನರ ಜೀವನ ಮಟ್ಟ ಜನರಿಗೆ ಆಗಿರುವ ಅನುಕೂಲ ಮತ್ತು ಅನಾನುಕೂಲತೆಗಳನ್ನು ವಿಶ್ಲೇಷಣೆ ಮಾಡಲು ಸಾಫಲ್ಯವಿರುವುದರಿಂದ ಪ್ರಸ್ತುತ ಅಧ್ಯಾಯವನ್ನು ಮೀಸಲಿಡಲಾಗಿದೆ.

**ಅಧ್ಯಾಯ – ೦೪ : ಸರ್ಕಾರದ ಯೋಜನೆಯ ಪರಿಣಾಮಗಳು:**

ಈ ಅಧ್ಯಾಯದಲ್ಲಿ ಯೋಜನೆಯಿಂದ ಜನರಿಗೆ ಪರಿಣಾಮಕಾರಿಯಾಗಿ ಆಗಿರುವ ಪ್ರಯೋಜನ ಮತ್ತು ಸಮಾಜದಲ್ಲಿ ಉಂಟಾದ ಬದಲಾವಣೆ, ಜನರ ಸ್ಥಾನಮಾನಗಳಲ್ಲಿ ಉಂಟಾದ ಬದಲಾವಣೆಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯನ – ೦೫: ಸಮಾರೋಪ:**

ಪ್ರಸ್ತುತ ಅಧ್ಯಯನದ ಫಲಿತಾಂಶಗಳು ಇಲ್ಲಿವೆ. ಅಧ್ಯಯನದಿಂದ ಕಂಡುಕೊಳ್ಳಲಾದ ಫಲಿತಾಂಶಗಳ ದಾಖಲೆ, ಅಧ್ಯಯನದ ಫಲ, ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಆಗಬೇಕಾಗಿರುವ ಬದಲಾವಣೆಗಳು, ಸರ್ಕಾರವು ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಸೂಚಿಸಲಾಗಿದೆ. ಪ್ರಾಕ್ ಕಲ್ಪನೆಗಳ ಸತ್ಯಾಸತ್ಯಾತೆಗಳ ಪರಿಶೀಲನೆ, ಪ್ರಮುಖವಾದ ಸಲಹೆಗಳನ್ನು ಒಳಗೊಂಡಿದೆ.

ವಿವಿಧ ವರ್ಗ, ಲಿಂಗ, ಜಾತಿ, ಧರ್ಮದಿಂದ ಒಳಗೂಡಿದ ನಗರ ಸಮುದಾಯದ ಆಯ್ದ ೩೦೦ ಫಲಾನುಭವಿಗಳನ್ನು ಸಂದರ್ಶಿಸಿ ಸಿದ್ಧಪಡಿಸಲಾದ ಅಧ್ಯಯನದಿಂದ ಕಂಡುಕೊಂಡ ವಿವಿಧ ಸಮಸ್ಯೆಗಳು ಆ ಸಮಸ್ಯೆಗಳ ನಿವಾರಣೆಗೆ ಸರ್ಕಾರ ಅಥವಾ ಮೇಲ್ವಿಚಾರಣಾ ಸಮಿತಿ ಕೈಗೊಳ್ಳಬೇಕಾಗಿರುವ ಪರಿಹಾರೋಪಾಯಗಳನ್ನು ಕ್ರಮ ಬದ್ಧಗೊಳಿಸಲಾಗಿದೆ. ಇದು ಅಧ್ಯಯನದ ಸಮಾರೋಪವೂ ಹೌದು.

* * *

**ಅಡಿ ಟಿಪ್ಪಣಿಗಳು :**

೧. ಡಾ. ನೇ.ತಿ ಸೋಮಶೇಖರ್, ಕರ್ನಾಟಕದ ಆರ್ಥಿಕತೆ, ಪುಟ ಸಂಖ್ಯೆ-೫೬, ವಸ್ತು ಪ್ರಕಾಶನ-ಪ್ರಥಮ ಮುದ್ರಣ-೨೦೧೦.

೨. ನೇ.ತಿ. ಸೋಮಶೇಖರ್, ಭಾರತದ ಆರ್ಥಿಕಾಭಿವೃದ್ಧಿ, ಪುಟ ಸಂಖ್ಯೆ-೪೯, ಅನ್ನ ಪ್ರಕಾಶನ ಶಿವಮೊಗ್ಗ- ೧ ನೇ ಆವೃತ್ತಿ-೨೦೦೮.

೩. ಡಾ. ವಿ. ಪ್ರಭಾಕರ ಶಿಶಿಲ, ಭಾರತದ ಆರ್ಥಿಕತೆ, ಪುಟ ಸಂಖ್ಯೆ-೩೮. ಕಲಾ ಪ್ರಕಾಶನ, ಬೆಂಗಳೂರು- ಪ್ರಥಮ ಮುದ್ರಣ-೨೦೦೬.

೪. ಡಾ. ಬಿ. ಪ್ರಭಾಕರ ಶಿಶಿಲ, ಭಾರತದ ಆರ್ಥಿಕಾಭಿವೃದ್ಧಿ, ಪುಟ ಸಂಖ್ಯೆ-೫೯, ಎಸ್.ಎಸ್.ಭಾವಿಕಟ್ಟಿ ಪ್ರಕಾಶನ, ಗುಲ್ಬರ್ಗ-೦೯.೦೯.೦೯

೫. ರಾಜ್ಯ ಸರ್ಕಾರ ಹೊರ ತಂದಿರುವ ಯೋಜನಾ ಕೈಪಿಡಿ-೨೦೦೭

೬. ಕೇಂದ್ರ ಪುರಷ್ಕೃತ ಸ್ವರ್ಣಜಯಂತಿ ಶಹರಿ ರೋಜ್ಗಾರ್ ಯೋಜನೆ, ಮಾರ್ಗಸೂಚಿ ೨೦೦೪.

೭. ಸ್ವರ್ಣಜಯಂತಿ ಶಹರಿ ರೋಜ್ಗಾರ್ ಯೋಜನೆಯ, ಕೇಂದ್ರ ವಸತಿ ಮತ್ತು ಬಡತನ ನಿರ್ಮೂಲನಾ ಮಂತ್ರಾಲಯದ ಬ್ರೋಚರ್ ಪುಸ್ತಕ ಪ್ರಕಟಣೆ: ಪೌರಾಡಳಿತ ನಿರ್ದೇಶನಾಲಯ, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.

೮. ಚ.ನ ಶಂಕರರಾವ್, ನಗರ ಸಮಾಜ ಶಾಸ್ತ್ರ, ಜೈ ಭಾರತ್ ಪ್ರಕಾಶನ, ಮಂಗಳೂರು, -ಪ್ರಥಮ ಆವೃತ್ತಿ- ಪುಟ ಸಂಖ್ಯೆ-೩೩, ೨೦೧೦-೨೦೧೧.

೯. ರಾಜಶೇಖರ್.ಎಸ್, ಜನಸಂಖ್ಯಾ ಶಾಸ್ತ್ರ, ಪುಟ ಸಂಖ್ಯೆ-೨೯, ಭ್ರಮರ ಪ್ರಕಾಶನ, ಶಿವಮೊಗ್ಗ ಪರಿಷ್ಕೃತ ಆವೃತ್ತಿ- ೨೦೦೩.

೧೦. ಪ್ರಜಾವಾಣಿ ಕನ್ನಡ ದಿನಪತ್ರಿಕೆ ದಿನಾಂಕ: ೧೮.೭.೨೦೧೧.

೧೧. ವಿಜಯ ಕರ್ನಾಟಕ ದಿನಪತ್ರಿಕೆ, ಪುಟ ಸಂಖ್ಯೆ-೩ ರಾಜ್ಯವಾರ್ತೆ, ಹುಬ್ಬಳ್ಳಿ ಎಡಿಸನ್, ದಿನಾಂಕ ೨೪.೫.೨೦೧೩.

೧೨. ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಅಂತರ್ಜಾಲ ಮಾಹಿತಿ- ೨೦೦೯-೨೦೧೦.

* * *

ಅಧ್ಯಾಯ -೦೨

# ಅಧ್ಯಯನದ ಸಮೀಕ್ಷೆ

## ೨.೧ ಸಾಹಿತ್ಯ ಪರಾಮರ್ಶೆ:

ಬಡತನಕ್ಕೆ ಸಂಬಂಧಿಸಿದ ಹಲವಾರು ಅಧ್ಯಯನಗಳು ನಡೆಯಲ್ಪಟ್ಟಿದ್ದು ಅವುಗಳಲ್ಲಿ ಕೆಲವೊಂದನ್ನು ಪುನರಾವಲೋಕಿಸಿದೆ.

ಟಿ.ವಿ ಮಹಾಲಿಂಗಮ್[೧] ಎಂಬುವರು ೧೯೭೫ರಲ್ಲಿ ರಚಿಸಿದ ತಮ್ಮ ಗ್ರಂಥವಾದ Administration and social lift under vijaya Nagara" ಎಂಬುದರಲ್ಲಿ ವಿಜಯನಗರದ ಜನರ ಸಾಮಾಜಿಕ ಜೀವನ ಹಾಗೂ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆಯನ್ನು ವಿವರಿಸಿದ್ದಾರೆ, ವಿಜಯನಗರದಲ್ಲಿ ಸಮೃದ್ದಿಯ ಮಧ್ಯದಲ್ಲಿಯ ಬಡತನವಿತ್ತು ಎಂಬುದನ್ನು ತಿಳಿಸಿದ್ದಾರೆ. ಅಂದರೆ ವಿಜಯನಗರದಲ್ಲಿ ಸಂಪತ್ತು ವಿಫುಲವಾಗಿತ್ತು, ಅಲ್ಲಿಯ ಜನರ ಜೀವನಮಟ್ಟದಲ್ಲಿ ತಾರತಮ್ಯವಿತ್ತು. ಅಂದರೆ ಅಲ್ಲಿಯ ಜನರು ದುಂದು ವೆಚ್ಚವನ್ನು ಮಾಡುತ್ತಿದ್ದರು, ಇದನ್ನೇ ಟಿ.ವಿ ಮಹಾಲಿಂಗಮ್ ರವರು ಎಷ್ಟೇ ಸಮೃದ್ಧಿಯ ಕಾಲ ಇದ್ದರೂ ಸಹ ಅದನ್ನು ಕೆಲವು ಮಂದಿ ಮಾತ್ರ ಅನುಭವಿಸುತ್ತಿದ್ದರು ಇನ್ನುಳಿದ ಬಹಳಷ್ಟು ಜನರು ಕಡು ಬಡತನವನ್ನು ಅನುಭವಿಸಿದ್ದಾರೆ ಎಂದು ಅಧ್ಯಯನದಲ್ಲಿ ಹೇಳಿದ್ದಾರೆ. ಇವರ ಅಧ್ಯಯನದಲ್ಲಿ ತಿಳಿದುಕೊಳ್ಳುವುದೇನೆಂದರೆ ವಿಜಯನಗರದ ಸಾಮ್ರಾಜ್ಯದಲ್ಲಿ ಮುತ್ತು ರತ್ನಗಳನ್ನು ಸೇರಿನಲ್ಲಿ ಅಳೆದು ಕೊಡುವಷ್ಟು ಉತ್ತಮ ಆರ್ಥಿಕ ವ್ಯವಸ್ಥೆ ಇದ್ದರೂ ಸಹ ಬಡತನವೆಂಬ ತಾರತಮ್ಯ ಇರುವುದನ್ನು ತಮ್ಮ ಅಧ್ಯಯನದಲ್ಲಿ ವಿವರಿಸಿದ್ದಾರೆ.

೧೯೭೪ರಲ್ಲಿ ಶ್ರೀವಾಸ್ತವ[೨] ಅವರು ತಮ್ಮ ಗ್ರಂಥವಾದ "The Mugal Empire" ಎಂಬುದರಲ್ಲಿ ಭಾರತ ದೇಶವು ಸಮೃದ್ಧಿಯಿಂದ ಕೂಡಿದ ದೇಶವಾದರೂ ಬಡತನವನ್ನು ಅನುಭವಿಸುತ್ತಿತ್ತು ಎಂದು ತಿಳಿಸಿದ್ದಾರೆ. ರಾಜಮಹರಾಜರು ಅಪರಿಮಿತವಾಗಿ ರಾಜ ಬೊಕ್ಕಸದಲ್ಲಿ ಸಂಪತ್ತು ಕಲೆ ಹಾಕುವುದರಿಂದ ದೊಡ್ಡ ಪ್ರಮಾಣದಲ್ಲಿ ಸಂಪತ್ತು ರಾಜ ಬೊಕ್ಕಸದಲ್ಲಿಯೇ ಸಂಗ್ರಹವಾಗಿದ್ದರೂ ಸಹ ಅರ್ಥವ್ಯವಸ್ಥೆಯ ಚಕ್ರ ಉರುಳದಂತಾಯಿತು. ಇದರಿಂದ ಜನಸಾಮಾನ್ಯರು ಅಂದರೆ ಪ್ರಜೆಗಳು ಕಡು ಬಡತನದಲ್ಲಿಯೇ ಉಳಿದರು ಎಂದಿದ್ದಾರೆ.

೧೯೭೩ ರಲ್ಲಿ ಬಿ.ಎಸ್ ಮಿನ್ಹಾಸ್[೩] ಅವರು ಬರೆದ ತಮ್ಮ ಗ್ರಂಥವಾದ "Poverty in India Then and Now" ಎಂಬುದರಲ್ಲಿ ಬಡತನವನ್ನು ಈ ರೀತಿಯಾಗಿ ವಿವರಿಸಿದ್ದಾರೆ. ಅವರು ಭಾರತದಲ್ಲಿಯ ಬಡತನವು ಎರಡು ರೀತಿಯಲ್ಲಿರಬೇಕೆಂದು ತಿಳಿಸಿ ಗ್ರಾಮಾಂತರ ಪ್ರದೇಶಗಳಿಗೊಂದು ಹಾಗೂ ನಗರ ಪ್ರದೇಶಗಳಿಗೊಂದು ಎಂಬುದು ಅವರ ಅಭಿಪ್ರಾಯವಾಗಿರುವುದು ಕಂಡು ಬರುತ್ತದೆ.

೧೯೬೦-೬೧ ನೇ ವರ್ಷವನ್ನು ತಳಹದಿಯನ್ನಾಗಿಟ್ಟು ತಲಾ ವಾರ್ಷಿಕ ಆದಾಯ ೨೦೦ ರೂ.ಗಳೆಂದು ಗ್ರಹಿಸಿಕೊಂಡು ಮೊದಲಿನ ಹಾಗೂ ಮುಂದಿನ ನಾಲ್ಕು ವರ್ಷಗಳ ಆದಾಯವನ್ನು ಅಭ್ಯಸಿಸಿ ಬಡತನದ ವ್ಯಾಪಕತೆಯನ್ನು ನಿರ್ಧರಿಸಿದ್ದಾರೆ. ಅವರ ವಿಶ್ಲೇಷಣೆಯ ಪ್ರಕಾರ ೧೯೬೭-೬೮ ರಲ್ಲಿ ಬಡತನದ ರೇಖೆಯ ಕೆಳಗೆ ನೆಲೆಸಿರುವವರ ಪ್ರಮಾಣ ಪ್ರತಿಶತ ೩೭.೧ ಕ್ಕೆ ಇಳಿಯಿತು. ಯಾಕೆಂದರೆ ಈ ಪ್ರಮಾಣ ೧೯೫೬-೫೭ ರಲ್ಲಿ ಪ್ರತಿಶತ ೫೨.೪ ರಷ್ಟು ಇದ್ದಿತು. ಹೀಗಾಗಿ ಅವರು ೧೨ ವರ್ಷಗಳ ಅವಧಿಯಲ್ಲಿ (೧೯೫೬ ರಿಂದ ೧೯೬೮) ಬಡತನ ರೇಖೆಯ ಕೆಳಗೆ ವಾಸಿಸುವವರ ಸಂಖ್ಯೆ ಮೆಚ್ಚುವ ಮಟ್ಟದಲ್ಲಿ ಇಳಿಮುಖವಾಯಿತೆಂದು ನಿರ್ಣಯಿಸುತ್ತಾರೆ.

೧೯೬೨ ರಲ್ಲಿ ನೇಮಿಸಿದ ಯೋಜನಾ ಮಂಡಳಿಯಲ್ಲಿ ಗಂಗೂಲಿ, ಲೋಕನಾಥನ್, ಮಸಾನಿ, ಅಶೋಕ ಮೆಹ್ತಾ, ಶ್ರೀಮನ್ ನಾರಾಯಣ್, ಪಿತಾಂಬರ್ ಪಂತ್, ವಿ.ಕೆ.ಆರ್.ವಿ.ರಾವ್, ಇವರುಗಳು ಬಡತನದ ಆಳವಾದ ಅಧ್ಯಯನವನ್ನು ಮಾಡಿ ಈ ರೀತಿಯಾಗಿ ತೀರ್ಮಾನಕ್ಕೆ ಬಂದರು. ೧೯೬೦-೬೧ ರ ಬೆಲೆಗಳನ್ನು ಆಧಾರದಲ್ಲಿಟ್ಟುಕೊಂಡು ತಲಾ ಉಪಭೋಗದ ಮಿತಿಯನ್ನು ಪ್ರತಿ ತಿಂಗಳಿಗೆ ೨೦ ರೂ.ಗಳೆಂದು (ವರ್ಷಕ್ಕೆ ರೂ.೨೪೦) ನಿಗದಿಪಡಿಸಿದರು. ಈ ಕನಿಷ್ಠ ಆದಾಯದ ಮಿತಿ ಬಡತನದ ರೇಖೆಯಿಂದ ನಿಗದಿಪಡಿಸಿದರು. ೧೯೬೦-೬೧ ರಲ್ಲಿ ಭಾರತದಲ್ಲಿ ಪ್ರತಿಶತ ೫೯.೪ ರಷ್ಟು ಜನ ಬಡತನ ರೇಖೆಯ ಕೆಳಮಟ್ಟದಲ್ಲಿ ಇದ್ದರೆಂದು ತೀರ್ಮಾನಿಸಿದರು. ಅದರಂತೆ ೧೯೭೦-೭೧ ರ ಬೆಲೆಗಳ ಪ್ರಮಾಣದ ಆಧಾರದ ಅನುಗುಣವಾಗಿ ತಲಾ ಆದಾಯ ರೂ. ೪೦ ಇದ್ದರೆ ಆತನು ಕನಿಷ್ಟ ಪ್ರಮಾಣದ ಜೀವನವನ್ನು ನಡೆಸುತ್ತಾನೆಂದು ಇದಕ್ಕಿಂತಲೂ ಕಡಿಮೆ ಮೊತ್ತವನ್ನು ಹೊಂದಿದ ವ್ಯಕ್ತಿಗೆ ಬಡವನೆಂದು ಕರೆಯುತ್ತದೆ. ಅಂದರೆ ೫ ಜನರಿರುವ ಕುಟುಂಬದ ವಾರ್ಷಿಕ ಉತ್ಪನ್ನ ೧೯೬೦-೬೧ ರಲ್ಲಿ ರೂ ೧೨೦೦ ಗಳಿದ್ದರೆ ಇಲ್ಲವೇ ೧೯೭೦-೭೧ ರಲ್ಲಿ ರೂ ೨೦೦೪ ಗಳಿದ್ದರೆ ಆ ಕುಟುಂಬವು ಕನಿಷ್ಟ ಪ್ರಮಾಣದ ಜೀವನವನ್ನು ನಡೆಸುತ್ತದೆ. ಒಂದು ವೇಳೆ ಆ ಕುಟುಂಬವು ರೂ ೨೪೦೦ ಗಳಿಗಿಂತಲೂ ಕಡಿಮೆ ವಾರ್ಷಿಕ ಉತ್ಪನ್ನವನ್ನು ಹೊಂದಿದ್ದರೆ ಅದನ್ನು ಬಡ ಕುಟುಂಬವೆಂದು ಪರಿಗಣಿಸಲಾಗುತ್ತದೆ (೧೯೮೦-೮೧ ರಲ್ಲಿ) ರೂ. ೩೬೦೦ ಗಳಿಗಿಂತ ಕಡಿಮೆ ಆದಾಯವಿದ್ದರೆ ಆ ಕುಟುಂಬವನ್ನು ಬಡ ಕುಟುಂಬವೆಂದು ಕರೆಯಲಾಗಿದೆ. ೧೯೯೦-೯೧ ರಲ್ಲಿ ರೂ. ೭೨೦೦ ಗಳಿಗಿಂತ ಕಡಿಮೆ ಇದ್ದರೆ ಆ ಕುಟುಂಬವನ್ನು ಬಡ ಕುಟುಂಬವೆಂದು ತೀರ್ಮಾನಿಸಿದ್ದಾರೆ.

ಬಡತನವು ಶ್ರೀಮಂತ ದೇಶಗಳಲ್ಲಿದ್ದಂತೆ ಒಂದು ಸಾಮಾಜಿಕ ಹೋಲಿಕೆಯಾಗಿದ್ದು ಸಾಂಸ್ಕೃತಿಕತೆಯಿಂದ ಕೂಡಿದೆ. ಆರ್ಥಿಕ ಹಾಗೂ ಸಾಮಾಜಿಕವಾಗಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಬಡತನವು ನಿರುದ್ಯೋಗ ಹಾಗೂ ಕಡಿಮೆ ಉತ್ಪಾದನೆಗೆ ಸಂಬಂಧಿಸಿದ್ದಾಗಿದೆ. ಬಹುತೇಕವಾಗಿ ಸಾಂಪ್ರದಾಯಿಕ

ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ್ದಾಗಿದೆ ಎಂದು ೧೯೭೯ ರಲ್ಲಿ ಜೆ.ಬಿ ರೋಜರ್ಸ್ ರವರು "Approaches to the Analysis of Poverty" ಎಂಬ ನಿಯತಕಾಲಿಕೆಯಲ್ಲಿ ವಿವರಿಸಿದ್ದಾರೆ.[೫]

ರಾವ್ ಮತ್ತು ವಿವೇಕಾನಂದ ರವರು ೧೯೮೨ ರಲ್ಲಿ "Economic and Political weekly" ಎಂಬ ನಿಯತಕಾಲಿಕೆಯಲ್ಲಿ "The Poor as a Social Stratum" ಎಂಬ ವಿಷಯವನ್ನು ಮಂಡಿಸಿದ್ದಾರೆ. ಅದರಲ್ಲಿ ಬಡತನವನ್ನು ವಿವರಿಸುತ್ತಾ, ಬಡತನದ ಅಂಶಗಳು ಹಾಗೂ ಅದನ್ನು ಹುಟ್ಟುಹಾಕುವ ಸಾಮಾಜಿಕ ಯಂತ್ರವು ಎಲ್ಲೆಡೆ ಒಂದೇಯಾಗಿಲ್ಲ. ಬಡತನದ ವಿವರಣೆಯು ಅದರ ರಚನೆ ಮತ್ತು ಸನ್ನಿವೇಶದ ಮೇಲೆ ಅವಲಂಬಿತವಾಗಿದೆ ಎಂದು ತೀರ್ಮಾನಿಸಿದ್ದಾರೆ.[೬]

ಎ.ಕೆ ಖಾನ್[೭] ರವರು ೧೯೭೭ ರಲ್ಲಿ "Basic Needs Targets" ಎಂಬ ಗ್ರಂಥದಲ್ಲಿ ಬಾಂಗ್ಲಾದೇಶದ ಅಧ್ಯಯನದಲ್ಲಿ ಮೂಲಭೂತ ಅವಶ್ಯಕತೆಗಳ ಬೆಳವಣಿಗೆಯನ್ನು ಅಧ್ಯಯನಿಸಿದ್ದಾರೆ. ಅದರಲ್ಲಿ ಅವರು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಬಹುತೇಕ ಸಂಶೋಧನೆಗಳು ಬಡತನವನ್ನು ನಷ್ಟಕ್ಕೆ ಸಂಬಂಧಿಸಿದ ಒಂದು ಮಹತ್ವದ ಕಲ್ಪನೆಯನ್ನಾಗಿ ಬಳಸಿವೆ ಮತ್ತು ಬಡತನದ ಅಧ್ಯಯನವು ಮೂಲಭೂತ ಬೇಡಿಕೆಗಳಿಗೆ ಹಾಗೂ ಜೀವನಾವಶ್ಯಕವಾದ ಅಂಶಗಳಿಗೆ ಸಂಬಂಧಿಸಿದೆ ಎಂದು ಹೇಳಿದ್ದಾರೆ.

ಡಿ.ಎನ್ ಮುಜುಮದಾರ್ ರವರು ೧೯೬೦ ರಲ್ಲಿ "Social Controls of an Industrial City" ಎಂಬ ಗ್ರಂಥದಲ್ಲಿ ಸಾಮಾಜಿಕ ಅಧ್ಯಯನದಿಂದ ಈ ತೀರ್ಮಾನಕ್ಕೆ ಬಂದಿದ್ದಾರೆ. ಭಾರತೀಯ ಸ್ತ್ರೀಯರು ಪ್ರೌಢ ಶಿಕ್ಷಣಕ್ಕಿಂತ ಮೇಲ್ಪಟ್ಟ ಶಿಕ್ಷಣವನ್ನು ಹೊಂದುವರು, ಅವರಲ್ಲಿ ಅನೇಕರು ಹೆಚ್ಚಾಗಿ ಕಡಿಮೆ ಫಲಿತತೆಯನ್ನು ಹೊಂದಿದ್ದಾರೆ. ಭಾರತದಲ್ಲಿ ಮುಸ್ಲಿಂ ಸ್ತ್ರೀಯರು ಹಿಂದೂ ಸ್ತ್ರೀಯರಿಗಿಂತ ಹೆಚ್ಚಿನ ಫಲಿತತೆಯನ್ನು ಹೊಂದಿದ್ದಾರೆ ಮತ್ತು ಖಾನಪೂರ ಪಟ್ಟಣದ ಅಧ್ಯಯನದಲ್ಲಿ ಮುಸ್ಲಿಂ ಸ್ತ್ರೀಯರಿಗೆ ಎಂಟು ಮಕ್ಕಳಿದ್ದರೆ ಹಿಂದೂ ಸ್ತ್ರೀಯರಿಗೆ ೭ ಮಕ್ಕಳಿವೆ ಎಂದು ಕಂಡುಕೊಂಡಿದ್ದಾರೆ. ಹೆಚ್ಚು ಮಕ್ಕಳಿದ್ದ ಕುಟುಂಬಗಳು ಬಡತನವನ್ನು ಹೊಂದಿದವರಾಗಿದ್ದಾರೆ.[೮]

'ಸ್ವ ಸಹಾಯ ಸಂಘಗಳ ಮೂಲಕ ಮಹಿಳಾ ಸಶಕ್ತೀಕರಣ'[೯] ಮೇಲೆ ಪ್ರಬಂಧವನ್ನು ಡಾ//ಎ.ವಿನಾಯಕಮೂರ್ತಿ ಅವರು ಪೆರಿಯಾರ್ ಯುನಿವರ್ಸಿಟಿ ತಮಿಳುನಾಡಿನಲ್ಲಿ ರೀಡರ್ ಆಗಿದ್ದು, ಇದರಲ್ಲಿ ಅವರು ಉತ್ತರ ತಮಿಳುನಾಡಿನಲ್ಲಿ ಸ್ವಸಹಾಯ ಗುಂಪುಗಳ ಬಗ್ಗೆ ಅಭ್ಯಸಿಸಿ, ಅದರ ಫಲಿತಾಂಶಗಳನ್ನು ಮಂಡಿಸಿದ್ದಾರೆ. ಸ್ವಸಹಾಯ ಗುಂಪುಗಳು ಬರೀ ಉಳಿತಾಯಕ್ಕೆ ಸೀಮಿತಗೊಳ್ಳದೇ ಸರ್ಕಾರವು ವಿವಿಧ ಹಂತಗಳಲ್ಲಿ ನೀಡುವ ವಿವಿಧ ಕೌಶಲ್ಯ ತರಬೇತಿಗಳ ಪ್ರಯೋಜನ ಪಡೆದುಕೊಂಡು ಸ್ವಯಂ ಉದ್ಯೋಗದ ಕಡೆಗೆ ಹೆಚ್ಚು ಗಮನ ನೀಡಬೇಕಾಗಿದೆ ಎಂಬ ಸಲಹೆಯನ್ನು ನೀಡಿದ್ದಾರೆ.

ಟಿ.ಎಫ್.ವಾಯ್.ಪಿ.–ಕಮಿಟಿ[೧೦] ಅನಂ ೨/೨೦೦೧, ಹತ್ತನೇಯ ಪಂಚವಾರ್ಷಿಕ ಯೋಜನೆ (೨೦೦೨–೨೦೦೭) ಪ್ರಕಾರ ಭಾರತೀಯ ಸರ್ಕಾರದ ಯೋಜನಾ ಆಯೋಗದ (ಅಕ್ಟೋಬರ್ ೨೦೦೧) ವರದಿಯಲ್ಲಿ 'ಮಹಿಳೆ ಸಬಲೀಕರಣ ಮತ್ತು ಮಕ್ಕಳ ಅಭಿವೃದ್ಧಿ" ಬಗ್ಗೆ ವಿವರವಾದ ಮಾಹಿತಿಗಳ ಮೌಲ್ಯಮಾಪನವನ್ನು ಮಾಡಲಾಗಿದೆ. ಇದರಲ್ಲಿ ಮಹಿಳೆಯ ಜನನ ದರ ಮತ್ತು ಜನಗಣತಿವಾರು ಮಹಿಳೆಯರ ಅನುಪಾತದ ಬಗ್ಗೆ ಚರ್ಚಿಸಿ, ಮಹಿಳೆಯರ ಸಬಲೀಕರಣದ ಅವಶ್ಯಕತೆ ಬಗ್ಗೆ ಚರ್ಚಿಸಿದ್ದು, ಮಹಿಳೆ ಉದ್ಯಮ ಕ್ಷೇತ್ರದಲ್ಲಿ ಬರಬೇಕು ಈ ನಿಟ್ಟಿನಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ಅವರಿಗೆ ಆರ್ಥಿಕ ಸಹಾಯ ನೀಡಿದಾಗ ಮಾತ್ರ ಸಮಾಜದ ಸಮತೋಲನ ಮತ್ತು ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಸಾಧ್ಯ ಎನ್ನುವ ಅಂಶವನ್ನು ಪರಿಗಣಿಸಿದೆ.

ಆಂಧ್ರ ಪ್ರದೇಶದಲ್ಲಿ ಡಾ. ಕೆ ಲಲಿತಾ ಅವರು 'ಸ್ವಸಹಾಯ ಗುಂಪುಗಳಿಂದ ಸಬಲೀಕರಣ ಮತ್ತು ಬಡತನದಿಂದ ಮೇಲೆತ್ತುವ ಹಾದಿಗಳು' ಎಂಬ ವಿಷಯದ ಮೇಲೆ ಮಂಡಿಸುತ್ತಾ, ಸ್ವಸಹಾಯ ಗುಂಪುಗಳ ರಾಜ್ಯವಾರು ಹೋಲಿಕೆ, ಸ್ವಸಹಾಯ ಗುಂಪುಗಳಲ್ಲಿ ಜಾತಿವಾರು ಫಲಾನುಭವಿಗಳು, ಸ್ವಸಹಾಯ ಗುಂಪುಗಳಲ್ಲಿ ಉದಯೋನ್ಮುಖ ಸಮಸ್ಯೆಗಳು ಹೀಗೆ ಅನೇಕ ವಿಷಯಗಳ ಬಗ್ಗೆ ಅಧ್ಯಯನ ಕೈಗೊಂಡಿದ್ದು, ಮಹಿಳೆಗೆ ಕೌಟುಂಬಿಕ ಬೆಂಬಲ ಸಿಕ್ಕರೆ ಮಾತ್ರ ಅವಳು ಸ್ವತಂತ್ರ ವಾಗಿ ಮೇಲಕ್ಕೇರಲು ಸಾಧ್ಯ ಎಂಬ ಸಲಹೆ ನೀಡಿದ್ದಾರೆ.

ಜೆ.ಭಾಸ್ಕರ್‌ರಾವ್[೧೧] ಹಾಗೂ ಅವರ ಸಂಶೋಧನಾ ತಂಡದವರು ಎ.ಪಿ.ಎಮ್.ಎ.ಎಸ್.೨೦೦೭, ಹೈದ್ರಾಬಾದ್‌ದಲ್ಲಿ 'ಸ್ವಸಹಾಯ ಸಂಘದ ಮೂಲಕ ಮಹಿಳಾ ಸಶಕ್ತೀಕರಣ' ಎಂಬ ಸಂಶೋಧನಾ ಪ್ರಬಂಧವನ್ನು ತಯಾರಿಸಿದ್ದು, ಅದರಲ್ಲಿ ವಿಶೇಷವಾಗಿ ನಿಜಾಮ್‌ಬಾದ್ ಜಿಲ್ಲೆಯ ಸ್ವಸಹಾಯ ಸಂಘಗಳ ಸಾಧನೆಗಳನ್ನು ವಿಶ್ಲೇಷಿಸಿದ್ದು, ಇನ್ನೂ ಕೂಡಾ ಜನರಿಗೆ ಹೆಚ್ಚಿನ ರೀತಿಯಲ್ಲಿ ಕೌಶಲ್ಯಾಭಿವೃದ್ಧಿ ತರಬೇತಿಗಳು ಬೇಕು ಎಂಬ ಸಲಹೆಯನ್ನು ನೀಡಿದ್ದಾರೆ.

ತಿರುಚನಾಪಳ್ಳಿಯ ಮ್ಯಾನೆಜ್‌ಮೆಂಟ್[೧೨] ಸಂಸ್ಥೆಯಲ್ಲಿಯ ಶ್ರೀ ವಿ.ಪಿ ಶ್ರೀರಾಮನ್ ಭಾರತಿದಾಸನವರು 'ಮೈಕ್ರೋ, ಸ್ವಸಹಾಯ ಮೂಲಕ ಸಬಲೀಕರಣ' ಎಂಬ ಸಂಶೋಧನಾ ವರದಿಯನ್ನು ಮಂಡಿಸಿದ್ದಾರೆ. ಇದರಲ್ಲಿ ಅವರು ಸ್ವಸಹಾಯ ಗುಂಪುಗಳ ಪ್ರಚಲಿತ ಸಮಸ್ಯೆಗಳು ಹಾಗೂ ಸ್ಪಂದನಗಳ ಕುರಿತು ವಿವರವಿದೆ. ಅಲ್ಲದೇ ಮಹಿಳಾ ಗೃಹ ಉದ್ಯೋಗ ಹಾಗೂ ಲಿಜ್ಜತ್ ಹಪ್ಪಳದ ಸಾಧನೆಯ ವಿವರವನ್ನು ತಿಳಿಸುತ್ತಾ, ಮಹಿಳಾ ಸಬಲೀಕರಣದ ಕುರಿತು ವಿವರಣೆ ನೀಡಿದ್ದು, ಮಹಿಳೆಗೆ ಆರ್ಥಿಕ ಸಹಾಯವನ್ನು ನೀಡಿದ್ದೇ ಆದಲ್ಲಿ ಅವಳು ಉನ್ನತ ಮಟ್ಟವನ್ನು ತಲುಪಲು ಪ್ರಯತ್ನಿಸುತ್ತಾಳೆ ಮತ್ತು ಕುಟುಂಬವನ್ನು ನಿರ್ವಹಣೆ ಮಾಡುತ್ತಾಳೆ ಹಾಗಾಗಿ ಮಹಿಳೆಗೆ ಅವಕಾಶಗಳ ಕೊರತೆಯಿದೆ ಎಂಬ ಅಂಶವನ್ನು ಉಲ್ಲೇಖಿಸಿದ್ದಾರೆ.

ಎ.ಪಿ.ಎಮ್.ಎ.ಎಸ್. ೨೦೦೬[೧೩] ಹೈದ್ರಾಬಾದ್‌ದಲ್ಲಿ ಮಹಿಳಾ ಅಭಿವೃದ್ಧಿ ಸಂಘದವರು 'ಭಾರತದಲ್ಲಿ ಸ್ವಸಹಾಯ ಸಂಘಗಳು' ಎಂಬ ವಿಷಯ ಮಂಡನೆ ಮಾಡಿದ್ದಾರೆ. ಇದರಲ್ಲಿ ಉತ್ತರ ಭಾರತದಲ್ಲಿಯ ರಾಜ್ಯಗಳಾದ ಓರಿಸ್ಸಾ ಮತ್ತು ರಾಜಸ್ಥಾನ ಹಾಗೂ ದಕ್ಷಿಣ ಭಾರತದ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ಕರ್ನಾಟಕ ರಾಜ್ಯಗಳಲ್ಲಿಯ ಸ್ವಸಹಾಯ ಗುಂಪುಗಳ ಬಗ್ಗೆ ವಿವರವಾದ ಮಾಹಿತಿ ಸಂಗ್ರಹಿಸಿ ತುಲನಾತ್ಮಕ ಅಧ್ಯಯನ ಕೈಗೊಂಡಿದ್ದಾರೆ. ಇವರ ಅಭಿಪ್ರಾಯದಲ್ಲಿ ದೇಶದಲ್ಲಿಯೇ ಆಂಧ್ರ ಪ್ರದೇಶದಲ್ಲಿಯ ಸ್ವಸಹಾಯ ಗುಂಪುಗಳು ಮುಂಚೂಣಿಯಲ್ಲಿವೆ. ಸ್ವಸಹಾಯ ಸಂಘಗಳ ಮೂಲಕ ದೇಶದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಪ್ರಾಥಮಿಕ ಹಂತದಿಂದ ಪ್ರಾರಂಭವಾಗುವುದು ಎಂಬ ಅಂಶವನ್ನು ಉಲ್ಲೇಖಿಸಿದ್ದಾರೆ.

ಕರ್ನಾಟಕ ಸರ್ಕಾರ ಡಿ.ಇ.ಎಸ್, ಬೆಂಗಳೂರು ಇದು ಕರ್ನಾಟಕದಲ್ಲಿ ಪುರುಷ ಮತ್ತು ಮಹಿಳೆ ಬಗ್ಗೆ ವಿವರವಾದ ದಾಖಲೆಗಳನ್ನು ಸಂಗ್ರಹಿಸಿದೆ. ಈ ದಾಖಲೆಗಳ ಬಗ್ಗೆ ವಿವರಿಸುತ್ತಾ, ಮಹಿಳಾ ಸಬಲೀಕರಣದ ಬಗ್ಗೆ ಒತ್ತು ನೀಡಿದೆ.

ಎ.ಪಿ,ಎಮ್.ಎ.ಎಸ್. ಇದು ರಾಜ್ಯ ಮಟ್ಟದ ಸ್ವಸಹಾಯ ಗುಂಪುಗಳ ಕಾರ್ಯಗಾರ ಏರ್ಪಡಿಸಿ, ಅದರಲ್ಲಿ ಸ್ವಸಹಾಯ ಗುಂಪುಗಳ ಸದ್ಯದ ಸ್ಥಿತಿಗತಿ, ಸ್ವಸಹಾಯ ಗುಂಪುಗಳ ಪ್ರಮುಖ ಸಮಸ್ಯೆಗಳು, ಸ್ವಸಹಾಯ ಗುಂಪುಗಳ ಒಕ್ಕೂಟಗಳ ಬಗ್ಗೆ ಚರ್ಚಿಸಲಾಯಿತು.

ಶಶಿಕಲಾ ಸೀತಾರಾಮ್ ಇವರು[೧೪] ಎ.ಡಿ.ಬಿ. ಮೇ ೨೦೦೭ರಲ್ಲಿ 'ಭಾರತದಲ್ಲಿ ಸ್ವಸಹಾಯದ ಮೂಲಕ ನಗರ ಸಮಾಜದ ಅಭಿವೃದ್ಧಿ" ಸಂಶೋಧನಾ ವಿಷಯವನ್ನು ಮಂಡಿಸಿದ್ದಾರೆ. ಇದರಲ್ಲಿ ಅವರು ಮಹಿಳೆಯರ ಜೀವನದಲ್ಲಿ ಸ್ಥಳೀಯ ಮತ್ತು ರಾಜ್ಯ ಸರ್ಕಾರಗಳ ಪಾತ್ರ, ಹಾಗೂ ಬಡತನ ನಿವಾರಣೆ ಮತ್ತು ಸಬಲೀಕರಣದಂತಹ ವಿಷಯಗಳ ಬಗ್ಗೆ ಅಧ್ಯಯನವನ್ನು ನಡೆಸಿ ಗ್ರಾಮೀಣ ಪ್ರದೇಶದ ಗುಂಪಿಗೂ ನಗರ ಪ್ರದೇಶದ ಗುಂಪಿಗೂ ತುಂಬಾ ವ್ಯತ್ಯಾಸವಿರುವುದನ್ನು ಉಲ್ಲೇಖಿಸಿ ನಗರ ಪ್ರದೇಶದಲ್ಲಿ ಮಹಿಳೆಯು ಬೇಗ ಸಂಘಟನೆಯಾಗುವುದು ಕಡಿಮೆ ಎಂಬ ಅಂಶವನ್ನು ತಿಳಿಸಿರುವುದು ಕಂಡು ಬಂದಿದೆ.

ನವೆಂಬರ್ ೨೦೦೨, ದಿನಾಂಕ ೨೫, ೨೬[೧೫] ರಂದು ನವದೆಹಲಿಯಲ್ಲಿ ಮಾಲ್ಕಮ್ ಹಾರ್‌ಪರ್ ಅವರು 'ಸ್ವಸಹಾಯ ಗುಂಪು ಮತ್ತು ಬ್ಯಾಂಕ್‌ಗಳ ಸಂಬಂಧಗಳ ಮುಖಾಂತರ ಸ್ವಸಹಾಯ ಗುಂಪುಗಳ ಅಭಿವೃದ್ಧಿ' ಎಂಬ ವಿಷಯವನ್ನು ಮಂಡಿಸಿದರು. ಇದರಲ್ಲಿ ಅವರು ಸ್ವಸಹಾಯ ಗುಂಪುಗಳು ಬ್ಯಾಂಕ್ ಜೋಡಣೆಯಿಂದಾದ ಲಾಭವನ್ನು ವಿವರಿಸಿದ್ದಾರೆ.

೨೦೦೫ ರ ಕರ್ನಾಟಕದ ಮಾನವ ಅಭಿವೃದ್ಧಿ ವರದಿಯಲ್ಲಿ 'ಸ್ವಸಹಾಯ ಗುಂಪುಗಳಲ್ಲಿ ಸಹಭಾಗಿತ್ವದ ಮೂಲಕ ಸಬಲೀಕರಣ' ಎಂಬ ವಿಷಯವನ್ನು

ವಿವರವಾಗಿ ಚರ್ಚಿಸಲಾಗಿದೆ. ಇದರಲ್ಲಿ ಸಹಭಾಗಿತ್ವದ ಮಹತ್ವವನ್ನು ವಿವರಿಸಲಾಗಿದೆ.[೧೬]

'ಸ್ವಸಹಾಯ ಗುಂಪುಗಳ ಮೂಲಕ ಮಹಿಳಾ ಸಬಲೀಕರಣ'[೧೭] ಎಂಬ ವಿಷಯವಾಗಿ ಆಂಧ್ರಪ್ರದೇಶದಲ್ಲಿ ವಿಶಾಖಪಟ್ಟಣ ಜಿಲ್ಲೆಯನ್ನು ಕುರಿತು ಪಿ.ವೆಂಕಟರಾವ್ ಅವರು ಆಂಧ್ರ ವಿಶ್ವವಿದ್ಯಾಲಯಕ್ಕೆ ತಮ್ಮ ಪಿ.ಎಚ್.ಡಿ ಪದವಿಗಾಗಿ ಸಂಶೋಧನಾ ಪ್ರಬಂಧವನ್ನು ಮಂಡಿಸಿದ್ದಾರೆ. ಅವರು ೨೪೦ ಫಲಾನುಭವಿಗಳ ಪ್ರತಿಕ್ರಿಯೆಗಳನ್ನು ತಮ್ಮ ಸಂಶೋಧನೆಯಲ್ಲಿ ಬಳಸಿದ್ದಾರೆ. ಸ್ವಸಹಾಯ ಗುಂಪುಗಳಲ್ಲಿ ಆಂತರಿಕ ಸಾಲ, ಸ್ವಸಹಾಯ ಗುಂಪುಗಳ ಸೇರ್ಪಡೆಯ ನಂತರದ ಸಾಮಾಜಿಕ ಮಾಹಿತಿಗಳ ಪ್ರಜ್ಞೆಯ ಮಟ್ಟ, ಮಹಿಳೆಯರ ಸ್ಥಿತಿಗತಿಯಲ್ಲಿಯ ಸುಧಾರಣೆ, ಮುಂತಾದ ವಿಷಯಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಸರ್ಕಾರವು ಮಹಿಳಾ ಸ್ವಸಹಾಯ ಸಂಘಗಳಿಗೆ ನೀಡುತ್ತಿರುವ ಅನುದಾನವನ್ನು (ಸುತ್ತು ನಿಧಿಯನ್ನು) ಹೆಚ್ಚಿಸಬೇಕು ಎಂಬ ಸಲಹೆ ನೀಡಿರುತ್ತಾರೆ.

ಶ್ರೀಮತಿ ಭಾರತಿ ಪಾಟೀಲ[೧೮] ಇವರು 'ಮಹಿಳಾ ಸಬಲೀಕರಣದಲ್ಲಿ ಅಥಣಿ ತಾಲ್ಲೂಕಿನ ಸ್ವಸಹಾಯ ಸಂಘಗಳು' ಎಂಬ ವಿಷಯವಾಗಿ ತಮ್ಮ ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಶೋಧನಾ ಪ್ರಬಂಧವನ್ನು ಸಾದರಪಡಿಸಿ, ಅಥಣಿ ತಾಲ್ಲೂಕಿನ ಸ್ವಸಹಾಯ ಸಂಘಗಳ ಮೌಲ್ಯಮಾಪನ ಮಾಡಿದ್ದಾರೆ.

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು (ಕರ್ನಾಟಕ ಸರ್ಕಾರದ ಒಂದು ಉದ್ಯಮ) ನಗರ ಸ್ತ್ರೀಶಕ್ತಿ ಯೋಜನೆ ಗುಂಪು ನಿರ್ವಹಣೆ ಕೈಪಿಡಿ ಪ್ರಕಟಿಸಿ. ನಗರ ಸ್ತ್ರೀಶಕ್ತಿ ಯೋಜನೆ ಗುಂಪು ಹೇಗೆ ಕಾರ್ಯ ನಿರ್ವಹಿಸಬೇಕೆಂದು ಮಾಹಿತಿ ನೀಡಿದೆ.

ಕರ್ನಾಟಕ ಸರ್ಕಾರವು ಸ್ತ್ರೀಶಕ್ತಿ- ಅಂತರಾಳ ಸಂಚಿಕೆ-೨ ಎಂಬ ಹೊತ್ತಿಗೆಯನ್ನು ಪ್ರಕಟಿಸಿ ನಗರ ಸ್ತ್ರೀಶಕ್ತಿ ಯೋಜನೆ ಗುಂಪುಗಳ ಮೌಲ್ಯಮಾಪನ ಮೂಲಕ ಸಾಧಿಸಿದ ಸಾಧನೆಯನ್ನು ಜಿಲ್ಲಾವಾರು ತಿಳಿಸಿದ್ದಾರೆ.

ಭಾರತದ ಮಹಿಳೆ ಅಸಮರ್ಥಳಲ್ಲ, ಅದನ್ನೇ ನಾವು ಪುರಾಣಗಳಿಂದಲೂ ಕೇಳುತ್ತಾ ಬಂದಿದ್ದೇವೆ. ಆದರೆ ಈಗ ಆಕೆ ಆರ್ಥಿಕ ಶಕ್ತಿಯಾಗುವುದು ಹಿಂದೆಂದಿಗಿಂತಲೂ ಅವಶ್ಯಕವಾಗಿತ್ತು ಅದೀಗ ಸಾಧ್ಯವಾಗಿದೆ. ಹಾಗಾಗಿ ಭಾರತದ ಆರ್ಥಿಕ ಶಕ್ತಿಯಾಗಿ ಬದಲಾಗುವ ಸಮಯ ಬರುತ್ತಿದೆ. ಸಂಘಟಿತಳಾದ ಮಹಿಳೆ, ಸುಶಿಕ್ಷಿತ ಸ್ತ್ರೀಯಿಂದ ಸಮಾಜದಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ ಎಂದು ಚಕ್ರವರ್ತಿಸೂಲಿಬೆಲೆ ಅವರು ಹೋಂಗೆ ಕಾಮ್ ಯಾಬ್ ಎಂಬ ಶೀರ್ಷಿಕೆಯಲ್ಲಿ 'ನವದುರ್ಗೆಯರ ಸರ್ವಶಕ್ತಿ ಒಂದಾಗಿ ಹೊಮ್ಮಿದ ಸ್ತ್ರೀಶಕ್ತಿ' ಎಂಬ ವಿಷಯವಾಗಿ ಬರೆಯುತ್ತಾ ತಿಳಿಸಿದ್ದಾರೆ.

೨೦೦೮, ಆಗಸ್ಟ್ ತಿಂಗಳಿನ ಸಮಾಜಶಾಸ್ತ್ರದ ಬುಲೆಟಿನ್‌ದಲ್ಲಿ (ಜನರಲ್ ಆಫ್ ಇಂಡಿಯನ್ ಸೋಶಿಯಾಲಜಿಕಲ್ ಸೊಸೈಟಿ) ಸ್ವಸಹಾಯ ಗುಂಪಿನಿಂದ ಸಮಾಜದ ಮೇಲಿನ ಪ್ರಭಾವವನ್ನು, ೧೮೦ ಫಲಾನುಭವಿಗಳ ಪ್ರತಿಕ್ರಿಯೆಗಳಿಂದ ಮೌಲ್ಯಮಾಪನ ಮಾಡಲಾಗಿದೆ. ಸ್ವ ಸಹಾಯ ಗುಂಪುಗಳು ಉಳಿತಾಯವನ್ನಷ್ಟೇ ಅಲ್ಲದೆ ಸಮಾಜದಲ್ಲಿ ನಡೆಯುತ್ತಿರುವ ಅಂಕು ಡೊಂಕುಗಳನ್ನು ತಿದ್ದುವ ಪರಿಣಾಮಕಾರಿಯಾದ ಸಂಘಟನೆಯಾಗಿ ಕಾರ್ಯನಿರ್ವಹಿಸುವುದರ ಕುರಿತು ತನ್ನ ಅಧ್ಯಯನದಲ್ಲಿ ಉಲ್ಲೇಖಿಸಿದ್ದಾರೆ.[೧೯]

ನಡೆಮುಂದೆ– ಮಹಿಳಾ ಸಬಲೀಕರಣಕ್ಕೆ ದಾರಿ ಎಂಬ ಶೀರ್ಷಿಕೆಯಲ್ಲಿ ಡಾ. ಶಾಲಿನಿ ರಜನೀಶ್[೨೦] ಅವರು ಸ್ತ್ರೀಶಕ್ತಿಯಿಂದ ಸಬಲತೆ, ಸ್ತ್ರೀಶಕ್ತಿ ಸಾಫಲ್ಯವಾದಾಗ, ಒಕ್ಕೂಟಗಳ ರಚನೆ, ಸ್ತ್ರೀಶಕ್ತಿ ಬಲವರ್ಧನೆ. ಎಂಬ ವಿಷಯಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಅವರ ಪ್ರಕಾರ ಎಂದಿನ ತನಕ ನಾವು ಪರಾವಲಂಬಿಗಳಾಗಿರುತ್ತೇವೆಯೋ ಅಂದಿನವರೆಗೆ ನಾವು ಸ್ವಂತ ಬಲದಿಂದ, ಸ್ವಾಭಿಮಾನದಿಂದ ಬದುಕಲು ಸಾಧ್ಯವಿಲ್ಲ ಎಂದು, ನಾವು ಯಾರನ್ನು ದೂಷಿಸದೆ ನಮ್ಮ ಭವಿಷ್ಯವನ್ನು ನಾವೇ ರೂಪಿಸಿಕೊಳ್ಳುವ ನಿರ್ಧಾರ ಮಾಡುತ್ತೇವೆಯೋ ಅಂದಿನಿಂದ ನಾವು ಯಾವುದರಲ್ಲೂ ವಿಫಲರಾಗುವುದಿಲ್ಲ. ಮಹಿಳೆಯರ ಗುಂಪುಗಳನ್ನು ರಚಿಸಿ, ಸಂಘಟನೆಯ ಅನುಕೂಲಗಳನ್ನು ತಿಳಿಸಿ, ತಮ್ಮ ತಾಪತ್ರಯಗಳಿಗೆ ತಾವೇ ಆಲೋಚನೆ ಮಾಡಿ ಹೇಗೆ ತಾವೇ ಪರಿಹಾರಗಳನ್ನು ಕಂಡು ಕೊಳ್ಳಬೇಕೆಂಬುದನ್ನು ತರಬೇತಿಗಳನ್ನು ಕೊಟ್ಟು ಬಡ ಮಹಿಳೆಯರು ಸಾಫಲ್ಯ ಪಡೆಯಲು ಅನುವು ಮಾಡಿ ಕೊಟ್ಟಿದೆ. ಪ್ರತಿಯೊಂದು ಮಹಿಳಾ ಗುಂಪುಗಳೂ ಒಂದು ಮಹತ್ತರ ಕ್ರಾಂತಿಯನ್ನೇ ಉಂಟು ಮಾಡಿವೆ. ಮೊದಲನೆಯದಾಗಿ ತಮ್ಮದೇ ಸಾಮಾಜಿಕ ಹಿನ್ನೆಲೆ ಇರುವವರೆಲ್ಲರೂ ಒಂದಾಗಿ ಗುಂಪುಗಳನ್ನು ಮಾಡಿಕೊಂಡು, ಪರಸ್ಪರ ನಂಬಿಕೆ ಆಧಾರದ ಮೇಲೆ ಒಬ್ಬಳೇ ಮಾಡಲಾಗದುದನ್ನು ಒಗ್ಗಟ್ಟಿನಿಂದ ಮಾಡಿ ತೋರಿಸಬಹುದು ಎಂದು ಅರಿತುಕೊಂಡಿದ್ದಾಳೆ. ಬ್ಯಾಂಕ್ ಖಾತೆ ತೆರೆಯುವುದಕ್ಕಾಗಿ ಓದು, ಬರಹ ಕಲಿತಿದ್ದಾಳೆ. ಇದರಿಂದ ಸ್ವಾವಲಂಬನೆಯ ಮೊದಲ ಹೆಜ್ಜೆ ಹಾಕಿದ್ದಾಳೆ. ಮನೆಯ ಸಣ್ಣ ಪುಟ್ಟ ಕೆಲಸಗಳಾಗಲೀ, ಮಗುವಿನ ಚಿಕಿತ್ಸೆಯಾಗಲೀ, ಸಾಮಾಜಿಕ ಬಾಧ್ಯತೆಗಳಿಗಾಗಲಿ, ಅವಳು ಯಾರನ್ನೂ ಬೇಡುತ್ತಾ ಕುಳಿತು ಕೊಳ್ಳಬೇಕಾಗಿಲ್ಲ, ತಾನೇ ಬೇರೆಯವರಿಗೆ ಹಣ ಸಹಾಯ ಮಾಡುವಷ್ಟು ಬೆಳೆದು ನಿಂತಿದ್ದಾಳೆ. ಸಾಲದಿಂದ ಮುಕ್ತಿ, ಜತೆಗೆ ತಾನೇ ನಿರ್ಧಾರ ತೆಗೆದುಕೊಳ್ಳಬಲ್ಲೆ ಎಂಬ ಆತ್ಮ ವಿಶ್ವಾಸ ಅವಳು ಸಬಲೀಕರಣದತ್ತ ನಡೆಯಲು ಮಾರ್ಗದರ್ಶಿಯಾಗುತ್ತದೆ. ಅಂದಿನಿಂದ ಅವಳು ಹಿಂತಿರುಗಿ ನೋಡದೆ ಒಬ್ಬಳು ಅಥವಾ ಗುಂಪಿನಲ್ಲಿ ಆರ್ಥಿಕ ಚಟುವಟಿಕೆ ಆರಂಭಿಸಿ ಸ್ವಾವಲಂಬಿಯಾಗುತ್ತಿದ್ದಾಳೆ. ಇಡೀ ಗುಂಪು ಇತರರ ಕಷ್ಟ ಸುಖಗಳು, ಸುತ್ತಮುತ್ತಲಿನ ಸಮಾಜದ ಬಗ್ಗೆಯೂ ಆಲೋಚಿಸಲು ಆರಂಭಿಸುತ್ತಾಳೆ ಎಂದು ಡಾ.ಶಾಲಿನಿ ರಜನೀಶ್ ಅವರು ತಿಳಿಸಿದ್ದಾರೆ.

ಅಭಿವೃದ್ಧಿ– ವಾಸ್ತವ ಮತ್ತು ವಿಕಲ್ಪ ಎಂಬ ಪುಸ್ತಕದಲ್ಲಿ, 'ಅಭಿವೃದ್ಧಿ ಮತ್ತು ಸಾಂಗತ್ಯದ ನಡುವೆ ಕರ್ನಾಟಕದ ಹೆಣ್ಣು ಮಕ್ಕಳ ಒಂದು ಅವಲೋಕನ' ಎಂಬ ಶೀರ್ಷಿಕೆ ಅಡಿಯಲ್ಲಿ ಸ್ವಸಹಾಯ ಮತ್ತು ಸ್ತ್ರೀಶಕ್ತಿ ಯೋಜನೆಯನ್ನು ರಾಜ್ಯದಲ್ಲಿ ಮಹಿಳಾ ಸಶಕ್ತೀಕರಣದ ಭಾಗವಾಗಿ ಅನುಷ್ಠಾನಗೊಂಡಿರುವ (ಪುಟಾಣಿ ಸಾಲ ಯೋಜನೆಯಾಗಿರುವ) ಮಹಿಳಾ ಗುಂಪು ವಿಸ್ತಾರವಾಗಿ ಬೆಳೆಯುತ್ತಿದೆ. ರಾಜ್ಯದಲ್ಲಿ ಸುಮಾರು ೧,೯೫.೫೮೫ ಮಹಿಳಾ ಗುಂಪುಗಳು ಕಾರ್ಯ ನಿರ್ವಹಿಸುತ್ತಿವೆ. ಕೆಲವೊಂದು ಜಿಲ್ಲೆಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಅನುಷ್ಠಾನಗೊಳ್ಳುತ್ತಿರುವ ಈ ಯೋಜನೆಯನ್ವಯ ಆರ್ಥಿಕವಾಗಿ ಹಿಂದುಳಿದ ಮಹಿಳೆಯರು ಅಗತ್ಯವಿರುವ ಹಣಕಾಸಿನ ನೆರವನ್ನು ಪಡೆಯಲು ಸಾಧ್ಯವಾಗಿದೆ ಎಂದು ಡಾ.ಉದಯ ಕುಮಾರ ಇರ್ವತ್ತೂರ ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ.

ಮಾರ್ಚ್ ೧೪, ೨೦೦೫ ರಂದು ಡಾ. ಕೆ ಎಸ್ ರತ್ನಮ್ಮ ಇವರು ಸುಮನಾ ಮಹಿಳಾ ಅಭಿವೃದ್ಧಿ ಸಂಸ್ಥೆ ಹಾಗೂ ಸ್ತ್ರೀ ಸ್ವಸಹಾಯ ಒಕ್ಕೂಟ ಏರ್ಪಡಿಸಿದ್ದ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಮಾಡಿದ ಭಾಷಣವನ್ನು 'ಸ್ತ್ರೀಲೇಖ' ಎಂಬ ಪುಸ್ತಕವನ್ನಾಗಿ ಪ್ರಕಟಿಸಲಾಗಿದೆ. ಸ್ವಸಹಾಯ ಸಂಘಗಳು ಈಗ ಪ್ರತಿ ಗ್ರಾಮಗಳಲ್ಲಿವೆ, ಸ್ತ್ರೀಯರನ್ನು ಆರ್ಥಿಕ ಸ್ವಾವಲಂಬನೆಗೆ ಸಂಘಟಿಸುವ ಕೆಲಸ ಸ್ತ್ರೀಶಕ್ತಿ ಯೋಜನೆಯಿಂದ ಆಗುತ್ತಿರುವದು ಅತ್ಯಂತ ಸಾರ್ಥಕ ಕಾರ್ಯವಾಗಿದೆ. ಸ್ತ್ರೀಯರ ಸಾಮಾಜಿಕ ಕಳಕಳಿ, ಹೊಣೆಗಾರಿಕೆ, ನೈತಿಕತೆ, ಸ್ವಾವಲಂಬನೆ ಶಕ್ತಿಗಳಿಂದ, ಕುಟುಂಬ ಮತ್ತು ಸಮಾಜದಲ್ಲಿ ನೆಮ್ಮದಿ ಮೂಡುತ್ತಿದೆ ಎಂದು ಇದರಲ್ಲಿ ಡಾ.ಕೆ ಎಸ್ ರತ್ನಮ್ಮ ಅವರು ತಿಳಿಸಿದ್ದಾರೆ.[೨೧]

ಸ್ತ್ರೀವಾದ– ಸಾಹಿತ್ಯದ ಒಂದು ಚಳುವಳಿ ಮತ್ತು ಲೇಖನಗಳು' ಎಂಬ ಪುಸ್ತಕದಲ್ಲಿ' ಕೆ ಎಂ ವಿಜಯಲಕ್ಷ್ಮೀ ಅವರು ಬರೆದ ಸಬಲೆಯಾಗಲು ಕಲಿಯೇ ಸಖಿ– ಸರ್ಕಾರದ 'ಸಮಖ್ಯಾಮಂತ್ರ' ಎಂಬ ಶೀರ್ಷಿಕೆಯಲ್ಲಿ ಸಬಲೀಕರಣದ ಮಹತ್ವವನ್ನು ಒತ್ತಿ ಹೇಳಿದ್ದಾರೆ.

ಮಹಿಳಾ ಅಧ್ಯಯನ ಎಂಬ ಪುಸ್ತಕದಲ್ಲಿ ಎಸ್.ಬಿ. ಜೋಗುರು ಇವರು ಸ್ತ್ರೀಶಕ್ತಿ ಯೋಜನೆ, ಅದರ ಉದ್ದೇಶಗಳು, ಹಾಗೂ ಸ್ವಸಹಾಯ ಗುಂಪುಗಳ ರಚನೆ, ಕಾರ್ಯ, ಲಕ್ಷಣ ಮತ್ತು ಸ್ವರೂಪವನ್ನು ವಿವರವಾಗಿ ಚರ್ಚಿಸಿದ್ದಾರೆ. ಎಸ್.ಜಿ. ಹಿರೇಮಠ ಅವರು 'ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ" ಎಂಬ ಗ್ರಂಥದಲ್ಲಿ ಸ್ತ್ರೀಶಕ್ತಿ ಯೋಜನೆ ಮತ್ತು ಸ್ವಸಹಾಯ ಗುಂಪುಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ಮಹಿಳಾ ಸ್ವಸಹಾಯ ಸಂಘಗಳು ಉಳಿತಾಯ ಬ್ಯಾಂಕ್‌ಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರೆ ದೇಶದ ಆರ್ಥಿಕತೆಯ ದೃಷ್ಟಿಯಿಂದ ಮತ್ತು ಮಹಿಳೆಯ ಆರ್ಥಿಕ ಸುರಕ್ಷತೆಯ ದೃಷ್ಟಿಯಿಂದ ಒಳ್ಳೆಯ ಬೆಳವಣಿಗೆ ಇದು ಇನ್ನೂ ಆಂದೋಲನದ ರೀತಿಯಲ್ಲಿ ಸಂಘಗಳು ರಚನೆಯಾಗುವದರ ಕುರಿತು ಒತ್ತಿ ಹೇಳಿದ್ದಾರೆ.[೨೨]

'ಭಾರತದಲ್ಲಿ ಆರ್ಥಿಕ ಅಭಿವೃದ್ಧಿ' (೨೦೦೯-೧೦) ಎಂಬ ಪುಸ್ತಕದಲ್ಲಿ ಎಚ್ಚಾರ್ಕ್ ಅವರು ಸ್ವಸಹಾಯ ಗುಂಪುಗಳ ನಿಯಮಗಳು, ಉದ್ದೇಶಗಳು ಮತ್ತು ಸ್ವಸಹಾಯ ಗುಂಪುಗಳ ಬ್ಯಾಂಕ್ ಸಂಪರ್ಕದ ಬೆಳವಣಿಗೆಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಪುರುಷರಿಗಿಂತ ಮಹಿಳೆಯು ಬ್ಯಾಂಕ್ ವ್ಯವಹಾರದಲ್ಲಿ ಮುಂದೆ ಬಂದರೆ ಮಾತ್ರ ಸಮತೋಲನದ ಅಭಿವೃದ್ಧಿ ಸಾಧ್ಯ ಎಂದು ತನ್ನ ಸಲಹೆಯನ್ನ ನೀಡಿರುವುದನ್ನು ಅವರ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

ಮಹಿಳಾ ಗುಂಪು ಯೋಜನೆಯ ಉದ್ದೇಶ, ವ್ಯಾಪ್ತಿ, ರೂಪರೇಷೆಗಳನ್ನು 'ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ" ಎಂಬ ಪುಸ್ತಕದಲ್ಲಿ ಡಾ. ಈರಣ್ಣಾ. ಚ. ಮುಳಗುಂದ ಇವರು 'ಸ್ತ್ರೀಶಕ್ತಿ ಯೋಜನೆ ಮತ್ತು ಸ್ವಸಹಾಯ ಗುಂಪುಗಳು' ಎಂಬ ಶೀರ್ಷಿಕೆಯಲ್ಲಿ ಚರ್ಚಿಸಿದ್ದಾರೆ. ಅಲ್ಲದೇ ಸ್ವಸಹಾಯ ಗುಂಪುಗಳ ಕಾರ್ಯ ವಿಧಾನ, ಯೋಜನೆ ಅನುಷ್ಠಾನಕ್ಕಿರುವ ಸಂಘಟನಾತ್ಮಕ ರಚನೆ, ಸ್ವಸಹಾಯ ಗುಂಪುಗಳಿಗೆ ಸಾಲ ಮತ್ತು ಇತರ ಸೌಲಭ್ಯಗಳ ಬಗ್ಗೆಯೂ ಹೇಳಿದ್ದಾರೆ. ಮಹಿಳೆಗೆ ಬ್ಯಾಂಕ್‌ಗಳು ಮುಂದೆ ಬಂದು ಹೆಚ್ಚಿನ ರೀತಿಯಲ್ಲಿ ಸಾಲ ಸೌಲಭ್ಯ ನೀಡಿದರೆ ಬ್ಯಾಂಕ್‌ಗಳು ತನ್ನ ವ್ಯವಹಾರವನ್ನು ಹೆಚ್ಚಿಸಿ ಕೊಳ್ಳುವುದರ ಜೊತೆಗೆ ಮಹಿಳೆಯು ಸಹ ಆರ್ಥಿಕವಾಗಿ ಸಶಕ್ತಳಾಗುತ್ತಾಳೆ ಎಂಬ ಅಂಶವನ್ನು ತಮ್ಮ ಸಾರಾಂಶದಲ್ಲಿ ತಿಳಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಹ 'ಸಬಲೀಕರಣ ಮತ್ತು ಸ್ವಸಹಾಯ ಗುಂಪುಗಳು' ಎಂಬ ವಿಷಯವಾಗಿ ಹಾವೇರಿ ಜಿಲ್ಲೆಯ ಕುರಿತಾದ ಸಂಶೋಧನೆಗಳೂ ಜರುಗಿವೆ. ಈ ಅಧ್ಯಯನದಲ್ಲಿ ಸ್ವಸಹಾಯ ಸಂಘಗಳಿಂದ ಮಹಿಳೆಯ ಆರ್ಥಿಕ ಮಟ್ಟ ಸುಧಾರಿಸಿದೆ ಹಾಗೂ ಸಮಾಜದಲ್ಲಿ ನಡೆಯುತ್ತಿರುವ ಬದಲಾವಣೆಗೆ ಮಹಿಳೆ ಹೊಂದಿಕೊಳ್ಳುತ್ತಾ ಬರುತ್ತಿದ್ದಾಳೆ ಎಂಬ ಸಾರಂಶವನ್ನು ಉಲ್ಲೇಖಿಸಿದ್ದಾರೆ.

ವಸತಿ ಮತ್ತು ನಗರ ಬಡತನ ನಿರ್ಮೂಲನಾ ಸಚಿವಾಲಯ, ಭಾರತ ಸರ್ಕಾರ ನವದೆಹಲಿಯ ಪ್ರಾಯೋಜಕತ್ವದಲ್ಲಿ ಯೋಜನೆ ಬಗ್ಗೆ ನಡೆದ ಅಧ್ಯಯನದ ಪರಾಮರ್ಶೆ.

**ಡಾ., ಎ ಕೆ ಸಿಂಗ್ ಮತ್ತು ಡಾ., ಕಮಲ್ ಕುಮಾರ್ ಸಿಂಗ್ ನಗರ ಮತ್ತು ಪರಿಸರ** ಅಧ್ಯಯನದ ಪ್ರಾದೇಶಿಕ ಕೇಂದ್ರ, ಲಕ್ನೊ ವಿಶ್ವವಿದ್ಯಾನಿಲಯ, ಲಕ್ನೊ ಇವರು ವಿವಿಧ ರಾಜ್ಯಗಳಲ್ಲಿ ಎಸ್.ಜೆ.ಎಸ್.ಆರ್‌ವೈ ಯೋಜನೆಯ ಅಧ್ಯಯನ ಕೈಗೊಂಡು ಉತ್ತರ ಪ್ರದೇಶದ ಮಿರ್ಜಾಪುರ ಜಿಲ್ಲೆ ಅಧ್ಯಯನ ನಡೆಸಿದ್ದು, ಚೆಮೆಲಿದೇವಿಯು ಈ ಯೋಜನೆಯು ಫಲಾನುಭವಿಯಾಗುವುದಕ್ಕಿಂತ ಮೊದಲು ಇದ್ದ ಸ್ಥಿತಿ (Earful Labor in construction sector) ಮತ್ತು ಈ ಯೋಜನೆಗೆ ಫಲಾನುಭವಿಯಾದ ನಂತರ ಗುಂಪು ರಚಿಸಿಕೊಂಡು ಚೆಮೆಲಿದೇವಿ ಆರ್ಥಿಕವಾಗಿ ಸಬಲಳಾದುದ್ದು ನಂತರ ಆರ್‌ಸಿವಿ ಆಗಿ ನೇಮಕಗೊಂಡು ಮುಂದೆ ಸಮುದಾಯ

ಅಭಿವೃದ್ಧಿ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿ, ೨೦೦೬ ರಲ್ಲಿ ನಡೆದ ಸ್ಥಳೀಯ ಸಂಸ್ಥೆಯ ಚುನಾವಣೆಯಲ್ಲಿ ೦೫ ಮತಗಳಿಂದ ಸೋಲನ್ನನ್ನುಭವಿಸಿದ್ದು ಇದರಿಂದ ಮಹಿಳೆ ಹೇಗೆ ಹಂತಹಂತವಾಗಿ ಈ ಯೋಜನೆಯಿಂದ ಮೇಲಕ್ಕೇರಿದ್ದಾಳೆ ಎಂಬುದನ್ನು ತಿಳಿದು ಕೊಳ್ಳಲಾಗಿದೆ.[೨೩]

ಎಸ್.ಜೆ,ಎಸ್ ಆರ್ ವೈ ಯೋಜನೆಯ ಅಡಿಯಲ್ಲಿ ಉದಾ: ಗುಂಪುಗಳ ಬಗ್ಗೆ ಛತ್ತೀಸ್‌ಗಡದ ಮಹಾಸಮುಂದ್ ನಗರ ಪಾಲಿಕೆಯಲ್ಲಿ ಅಧ್ಯಯನ ನಡೆಸಿದ್ದು, ಈ ಗುಂಪುಗಳು ಈ ಯೋಜನೆಯಲ್ಲಿ ಮಿಕ್ಸರ್ ಯಂತ್ರವನ್ನಿಟ್ಟುಕೊಂಡು ಆದಾಯದ ಮೂಲ ಕಂಡು ಕೊಂಡು ಆರ್ಥಿಕವಾಗಿ ಪ್ರಬಲವಾಗುತ್ತಿರುವ ಬಗ್ಗೆ ತಿಳಿಸಿದ್ದಾರೆ. ಈ ಯೋಜನೆಗೆ ಇನ್ನೂ ಪರಿಣಾಮಕಾರಿಯಾದ ಮೇಲ್ವಿಚಾರಣೆಯ ಅಗತ್ಯತೆಯ ಬಗ್ಗೆ ಸಲಹೆಯನ್ನು ನೀಡಿದ್ದಾರೆ.

**ಲಕ್ನೋ ಸಮುದಾಯ ಅಭಿವೃದ್ಧಿ ಸಂಸ್ಥೆ** ರಾಜ್‌ನಂದ್‌ಗಾಂವ್ ಛತ್ತೀಗಡದಲ್ಲಿ ಎಸ್.ಜೆ.ಆರ್‌ವೈ ಯೋಜನೆಯನ್ನು ಶ್ರೀ ಎಸ್ ಪಿ ದಿಬೆ ನಿವೃತ್ತ ಐಎಎಸ್ ಅಧಿಕಾರಿ ಮತ್ತು ಶ್ರೀ ಆರ್‌ವಿ ಶರ್ಮ ಪ್ರಾದೇಶಿಕ ನಿರ್ದೇಶಕರು ಅಖಿಲ ಭಾರತ ಸ್ಥಳೀಯ ಸಂಸ್ಥೆಗಳ ಸರ್ಕಾರ ಇವರು ಲಕ್ನೋಗೆ ಭೇಟಿ ನೀಡಿರುವುದು,[೨೪] ಏಷಿಯನ್ ಅಭಿವೃದ್ಧಿ ಬ್ಯಾಂಕ್ ತಂಡವು ಸಹ ಸೆಪ್ಟೆಂಬರ್ ೧೨.೨೦೧೧ ರಲ್ಲಿ ಅಧ್ಯಯನ ಮಾಡಿ ಸಮುದಾಯ ಚಟುವಟಿಕೆಗಳ ಬಗ್ಗೆ ಶ್ಲಾಘಿಸಿರುವುದನ್ನು ಕಾಣುತ್ತೇವೆ ಹಾಗೂ ಮಾರ್ಚ್ ೨೪ ೨೦೧೨ ರಲ್ಲಿ ಯುನಿಸೆಫ್ ಭೂಪಾಲ್‌ನಿಂದ ಶ್ರೀಮತಿ ಸರಳರಾವ್ ಮತ್ತು ಕುಮಾರಿ ರೈಜಾಷಾ ಅವರು ಭೇಟಿ ನೀಡಿ ಉಳಿತಾಯ ಮತ್ತು ಸಾಲದ ಗುಂಪುಗಳು, ತರಬೇತಿ ಕೇಂದ್ರ ಹಾಗೂ ಸಮುದಾಯ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿರುವುದನ್ನು ತಿಳಿಯಲಾಗಿದೆ.[೨೫]

**ಕ್ಯಾಲಿಕಟ್ ಸಮುದಾಯ ಅಭಿವೃದ್ಧಿ ಸಂಘ ಕೇರಳದ ಬಗ್ಗೆ** ಅಧ್ಯಯನ ಮಾಡಿ ಕೇರಳದಲ್ಲಿರುವ ಎಸ್.ಜೆ.ಎಸ್‌ಆರ್‌ವೈ ಕಾರ್ಯಯೋಜನೆಯ ಬಗ್ಗೆ ವಿವರವಾಗಿ ತಿಳಿಸಿದ್ದು, ಬಡತನ ನಿರ್ಮೂಲನೆಯಲ್ಲಿ ಈ ಯೋಜನೆಯಲ್ಲಿ ಅಳವಡಿಸಿಕೊಂಡಿರುವ ವಿವಿಧ ಘಟಕಗಳಾದ ಎನ್‌ಎಸ್‌ಡಿಪಿ, ವಿಎಂಬಿಎವೈ ಡಿಡಬ್ಲೂಸಿಯುಎ, ಯುಎಸ್‌ಇಪಿ ಬಗ್ಗೆ ತಿಳಿಸಿದ್ದಾರೆ. ಎಸ್.ಜೆ.ಎಸ್‌ಆರ್‌ವೈ ಯೋಜನೆಯಲ್ಲಿ ಹೊಸ ರಾಜ್ಯವಾದ ಉತ್ತರ ಖಂಡದ ಹರಿದ್ವಾರ ಜಿಲ್ಲೆಯಲ್ಲಿ ತರಬೇತಿ ಕಾರ್ಯಕ್ರಮಗಳು ಯಶಸ್ವಿ ಸಾಧಿಸಿರುವುದರ ಬಗ್ಗೆ ಅಧ್ಯಯನ ಮಾಡಿದ್ದು ಅದರ ಸಾಧಕ ಬಾಧಕಗಳ ಬಗ್ಗೆ ತಮ್ಮ ವರದಿಯನ್ನು ನೀಡಿರುತ್ತಾರೆ.

**ಪಂಜಾಬ್ ರಾಜ್ಯದ ಅಮೃತಸರದಲ್ಲಿ ಎಸ್.ಜೆ.ಎಸ್‌ಆರ್‌ವೈ ಯೋಜನೆಯ** ಕಾರ್ಯಕ್ರಮಗಳ ಪರಿಣಾಮಕಾರಿ ಜಾರಿಯ ಬಗ್ಗೆ ಅಧ್ಯಯನ ನಡೆಸಿದ್ದು, ಯುಎಸ್‌ಇಪಿ, ಯುಬಿಎಸ್‌ಬಿ, ಡಿಡಬ್ಲೂಸಿಯುಎ, ಟಿಸಿಜಿ ಗಳ ಬಗ್ಗೆ ವಿವರವಾದ ಮಾಹಿತಿಯನ್ನು ತಿಳಿಯಲಾಗಿದೆ. ಈ ಯೋಜನೆಯಿಂದಾಗಿ ಜನರ ಜೀವನ ಮಟ್ಟ

ಸುಧಾರಿಸಿದ್ದು ಯೋಜನೆಯ ಪ್ರಸ್ತುತ ಸಾಲ ಸೌಲಭ್ಯದ ಹಾಗೂ ಸಹಾಯಧನವನ್ನು ಹೆಚ್ಚಿಸುವ ಪ್ರಸ್ತಾಪ ಮಾಡಿದ್ದಾರೆ.

**ಗುಜರಾತ್ ರಾಜ್ಯದಲ್ಲಿ ಜಾರಿಯಾಗಿರುವ ಎಸ್.ಜೆ.ಎಸ್‌ಆರ್‌ವೈ** ಯೋಜನೆ ಬಗ್ಗೆ ಅಧ್ಯಯನ ಮಾಡಿದ್ದು, ಅದರಲ್ಲಿ ಸುರತ್ ಮಹಾನಗರ ಪಾಲಿಕೆಯಲ್ಲಿ ಜಾರಿಯಾಗಿರುವ ಯೋಜನೆಯ ವಿವರಗಳನ್ನು ತಿಳಿಯಲಾಗಿದೆ. ಈ ಪಾಲಿಕೆಯಲ್ಲಿ ಇಲ್ಯಾಕ್ಸಿಬೆಲ್ ಧೂಮಾಸಿಯಾ ರವರು ಡ್ವಾಕ್ವಾ ಗುಂಪಿನಲ್ಲಿ ಯಶಸ್ವಿಯಾಗಿ ಮೇಲೆ ಬಂದು ಪ್ರಸ್ತುತ ಅವರು ಇತರರಿಗೆ ಟೀಚರ್ ಆಗಿ ವಿವಿಧ ತರಬೇತಿ ನೀಡುತ್ತಿರುವುದನ್ನು ತಿಳಿದುಕೊಳ್ಳಲಾಗಿದೆ.

**ಕೇರಳದ ರಾಜ್ಯದಲ್ಲಿ "ಕುಟುಂಬಶ್ರೀ" ಯೋಜನೆಯ** (Prosperity of the Family) ಮೂಲಕ ಗುಂಪುಗಳನ್ನು ರಚಿಸಿಕೊಂಡು ಬಡ ಮಹಿಳೆಯರು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ತಮ್ಮ ಆರ್ಥಿಕ ಭದ್ರತೆಯನ್ನು ಹೊಂದಿದ್ದು ಜೀವನ ಮಟ್ಟದಲ್ಲಿ ಸುಧಾರಿಸುವುದನ್ನು ತಿಳಿಯಲಾಗಿದೆ.

**ಛತ್ತೀಸ್‌ಗಢ್ ರಾಜ್ಯದ ಧಾಮ್‌ತಾರಿ ಜಿಲ್ಲೆಯ ರಾಯ್‌ಪುರ್ ಜಿಲ್ಲೆಯಿಂದ** ೬ ಜುಲೈ ೧೯೯೮ ರಲ್ಲಿ ಬೇರ್ಪಟ್ಟಿದ್ದು, ಈ ಜಿಲ್ಲೆಯಲ್ಲಿನ ಎಸ್.ಜೆ.ಎಸ್‌ಆರ್‌ವೈ ಯೋಜನೆಯ ಬಗ್ಗೆ ಮಾಡಿರುವ ಅಧ್ಯಯನವನ್ನು ಅವಲೋಕಿಸಲಾಗಿದೆ. ಕಮಲ್‌ಜಿತ್ ಸಂಧು ಎಂಬಾಕೆ ಪಂಜಾಬ್‌ನಿಂದ ಧಾಮ್‌ತಾರಿ ನಗರಕ್ಕೆ ವಲಸೆ ಬಂದು ಪ್ರತಿ ತಿಂಗಳು ಬಾಲವಾಡಿ ಕೇಂದ್ರದಲ್ಲಿ ಟೀಚರ್ ಆಗಿ ತಿಂಗಳಿಗೆ ರೂ ೫೦೦ ದುಡಿಯುತ್ತಿದ್ದರು, ನಂತರದಲ್ಲಿ ಎಸ್‌ಜೆಎಸ್‌ಆರ್‌ವೈ ಯೋಜನೆಯ ಅಡಿಯಲ್ಲಿ ಫಲಾನುಭವಿಯಾದ ನಂತರ ಸಿಡಿಎಸ್‌ನ ಕಾರ್ಯದರ್ಶಿಯಾಗಿ ಹಂತ ಹಂತವಾಗಿ ಸಾಧನೆಯನ್ನು ಮಾಡಿರುವ ಬಗ್ಗೆ ಅಧ್ಯಯನದಿಂದ ತಿಳಿದು ಕೊಳ್ಳಲಾಗಿದೆ.

**ಒರಿಸ್ಸಾ ರಾಜ್ಯದ ಕಟಕ್ ಮುನ್ಸಿಪಾಲಿಟಿಯಲ್ಲಿ ಸ್ವಸಹಾಯ ಗುಂಪುಗಳನ್ನು** ಕ್ರೋಢೀಕರಿಸಿ "SWAYANSHREE" ಎಂಬ ಸ್ವ ಸಂಘಗಳ ಒಕ್ಕೂಟವನ್ನು ರಚಿಸಿಕೊಂಡು ಆಮೂಲಕ ಸಂಘಗಳಿಗೆ ಪ್ರಾಥಮಿಕವಾಗಿ ಹೆಚ್ಚು ಹೆಚ್ಚು ಹಣಕಾಸು ಸೇವೆಯನ್ನು ನೀಡುತ್ತಾ ನಗರದ ಬಡವರ ಜೀವನ ಮಟ್ಟವನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗಿರುವುದನ್ನು ತಿಳಿಯಲಾಗಿದೆ. ಈ ಒಕ್ಕೂಟ ನಗರದ ಬಡ ಮಹಿಳೆಯರು ತಾವಾಗಿಯೇ ನಿಯಂತ್ರಣ ಮಾಡುತ್ತಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ.

**೨.೨ ಸಮಾಜಶಾಸ್ತ್ರೀಯ ಅಧ್ಯಯನ:**

ಸಮಾಜಶಾಸ್ತ್ರದ ಪಿತಾಮಹಾ ಆಗಸ್ಟ್ ಕಾಮ್ಟೆ ಇವರು, ಮೊದಲಿಗೆ ಸಮಾಜದ ವೈಜ್ಞಾನಿಕ ಅಧ್ಯಯನದ ಅವಶ್ಯಕತೆಯ ಬಗ್ಗೆ ತಿಳಿಸಿ ಕೊಟ್ಟವರು. ನಂತರದಲ್ಲಿ ಬಂದಂತಹ ಹಲವಾರು ಸಮಾಜಶಾಸ್ತ್ರಜ್ಞರುಗಳು ಸಮಾಜಶಾಸ್ತ್ರದ

ಅಧ್ಯಯನದ ಉನ್ನತಿಗಾಗಿ ಶ್ರಮಿಸಿದ್ದಾರೆ ಹಾಗೂ ತಮ್ಮದೇ ಆದ ಅನೇಕ ಕೊಡುಗೆಗಳನ್ನು ನೀಡಿದ್ದು, ಇಂದಿನ ಆಧುನಿಕ ವಿಜ್ಞಾನದಲ್ಲಿ ಸಮಾಜಶಾಸ್ತ್ರವು ಒಂದು ಪ್ರಮುಖ ಶಾಖೆಯಾಗಿ/ಅಧ್ಯಯನ ವಿಷಯವಾಗಿ ಪರಿಗಣಿಸಿದೆ. ನಗರ ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್ಗಾರ ಯೋಜನೆ ಎಂಬ ಸಂಶೋಧನಾ ವಿಷಯವನ್ನು ಒಂದು ಸಮಾಜಶಾಸ್ತ್ರೀಯ ಅಧ್ಯಯನದ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಲು ಅಧ್ಯಯನಕ್ಕಾಗಿ ವಿವಿಧ ಸಮಾಜಶಾಸ್ತ್ರಜ್ಞರು ಮಂಡಿಸಿರುವ ಸಮಾಜಶಾಸ್ತ್ರೀಯ ಸಿದ್ಧಾಂತಗಳನ್ನು ಅವಲೋಕಿಸಲಾಯಿತು. ಅವುಗಳೆಂದರೆ: [೨೬ ರಿಂದ ೩೩]

೧. "ಪೆರಟೋ"ರವರ ತಾರ್ಕಿಕ –ಅತಾರ್ಕಿಕ ಕ್ರಿಯೆ (Logical and Non Logical).

೨. "ಜಾಜ್ ಸಿಮೆಲ್" ರವರ ಅನಾಥ ಪ್ರಜ್ಞೆ ಇಲ್ಲವೇ ಅನ್ಯಾಕ್ರಾಂತತೆ (Theory ofAlienation).

೩. ಟಾಲ್ಕಾಟ್ ಪಾರ್ಸನ್ಸ್‌ರವರ ಕ್ರಿಯಾ ಸಿದ್ಧಾಂತ (Thery of Social action).

೪. ಮ್ಯಾಕ್ಸ್‌ವೆಬರ್ ರವರ ಸಾಮಾಜಿಕ ಕ್ರಿಯೆ (Social Action).

೫. ಹರ್ಬರ್ಟ ಸ್ಪೆನ್ಸರ್‌ರವರ ವಿಕಾಸವಾದಿ ಸಿದ್ಧಾಂತ.

೬. ಆಗಸ್ಟ್ ಕಾಮ್ಟೆರವರ ಪ್ರತ್ಯಕ್ಷ ಪ್ರಮಾಣವಾದ (Positivisim) ಹಾಗೂ

೭. ಪಿ. ಎ ಸಾರೋಕಿನ್‌ರವರ ಸಾಮಾಜಿಕ ಸಂಚಲನೆ ಇವರೆಲ್ಲರ ಸಿದ್ಧಾಂತಗಳನ್ನು ಅಧ್ಯಯನ ಮಾಡಲಾಯಿತು. ಈ ಎಲ್ಲಾ ಸಿದ್ಧಾಂತಗಳು ನನ್ನ ಸಂಶೋಧನಾ ವಿಷಯಕ್ಕೆ ಒಂದಿಲ್ಲೊಂದು ರೀತಿಯಲ್ಲಿ ವಿಶ್ಲೇಷಿಸಲು ಸಾಧ್ಯವಾಗಿದ್ದರೂ ಅದರಲ್ಲಿ ನನ್ನ ಸಂಶೋಧನೆಯು ಹೆಚ್ಚಾಗಿ ಜನರ ಆರ್ಥಿಕ, ಸಾಮಾಜಿಕ, ರಾಜಕೀಯ, ಶಿಕ್ಷಣ, ಉದ್ಯೋಗ, ಸಂಪತ್ತು, ಕುಟುಂಬದ ಹಾಗೂ ಇತರೆ ಕ್ಷೇತ್ರಗಳ ಮೇಲೆ ಹೆಚ್ಚು ಪ್ರಭಾವವನ್ನು ಹೊಂದಿರುವುದರಿಂದ ಇದರ ಪರಿಣಾಮಗಳನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ವಿವರಿಸಲು ಮೇಲಿನ ಸಿದ್ಧಾಂತಗಳಲ್ಲಿ ಪ್ರಖ್ಯಾತ ಸಮಾಜಶಾಸ್ತ್ರಜ್ಞರಾದ ಮೂಲತಃ ರಷ್ಯಾದವರಾದ ಪಿ. ಎ. ಸಾರೋಕಿನ್‌ರವರ "ಸಾಮಾಜಿಕ ಸಂಚಲನ" (Social Mobility) ಸಿದ್ಧಾಂತವು ಅತಿ ಹೆಚ್ಚು ಸೂಕ್ತವೆನಿಸಿದ್ದರಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಸಾಮಾಜಿಕ ಸಂಚಲನೆ (Social Mobility) ಈ ಸಿದ್ಧಾಂತದಲ್ಲಿ (೧) ಸಮಾನಾಂತರ ಸಂಚಲನೆ (Horizontal Mobility) (೨) ಲಂಬರೂಪದ ಸಂಚಲನೆ (Vertical Mobility) ಎಂಬ ಎರಡು ಪ್ರಕಾರಗಳಿದ್ದು, ಇವೆರಡರಲ್ಲಿ ಅತಿ ಪ್ರಮುಖವಾದ ಲಂಬಾಂತರ ಸಂಚಲನೆ ಸಿದ್ಧಾಂತದ ಆಧಾರದ ಮೇಲೆ ಅಧ್ಯಯನದ ಪರಿಣಾಮಗಳನ್ನು ವಿಶ್ಲೇಷಿಸಲಾಗುವುದು.

## ಲಂಬಾಂತರ ಸಂಚಲನೆ ಸಿದ್ಧಾಂತ (Vertical mobility)

### ಲಂಬಾಂತರ ಸಂಚಲನೆ ಎಂದರೇನು?

ಒಂದು ಅಂತಸ್ತಿನಿಂದ ಇನ್ನೊಂದು ಅಂತಸ್ತಿಗೆ ಮೇಲ್ಮುಖವಾಗಿ ಇಲ್ಲವೇ ಕೆಳಮುಖವಾಗಿ ಉಂಟಾಗುವ ಸಂಚಲನೆಯನ್ನು ಲಂಬರೂಪದ ಸಂಚಲನೆ ಎಂದು ಕರೆಯುತ್ತಾರೆ. ಅಂದರೆ ಅದು ಊರ್ಧ್ವಮುಖವಾಗಿರಬಹುದು ಇಲ್ಲವೇ ಅದೋಮುಖವಾಗಿರಬಹುದು. ಇವುಗಳನ್ನು ನಾವು ಸಾಮಾಜಿಕ ಆರೋಹಣ ಮತ್ತು ಸಾಮಾಜಿಕ ಅವರೋಹಣ ಎಂದು ಕರೆಯಲಾಗುವದು.

**ಉದಾ:** ಒಂದು ಹೋಟೆಲ್‌ನಲ್ಲಿ ಕೆಲಸ ಮಾಡುವ ಕಾರ್ಮಿಕನೊಬ್ಬ ಲಾಟರಿ ತಾಗುವ ಮೂಲಕ ಶ್ರೀಮಂತನಾಗುವದು ಊರ್ದ್ವಮುಖವಾದರೆ, ಒಬ್ಬ ಅಧಿಕಾರಿ ಲಂಚ ತೆಗೆದುಕೊಳ್ಳುವಾಗ ಸಿಕ್ಕುಬಿದ್ದು ಉದ್ಯೋಗ ಕಳೆದುಕೊಳ್ಳುವುದು ಅಧೋಮುಖ ಸಂಚಲನೆಯಾಗಿದೆ.

ಈ ಅಧ್ಯಯನದಲ್ಲಿ ಊರ್ದ್ವಮುಖಕ್ಕೆ ಜನರಿಗಾಗಿ ಸರ್ಕಾರ ಜಾರಿಗೆ ತಂದಿರುವ ಯೋಜನೆಯನ್ನು ಜನರು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಂಡು ಮೇಲೆ ಬಂದಿದ್ದಾರೆ ಎಂಬುದನ್ನು ಹೋಲಿಸಲಾಗಿದ್ದು, ಇದರ ಪರಿಣಾಮ ಹಾಗೂ ಫಲಿತಾಂಶಗಳನ್ನು ಅಧ್ಯಯನದಲ್ಲಿ ನೋಡಲಾಗುವುದು, ಹಾಗೆಯೇ ಅಧೋಮುಖ ಸಂಚಲನೆಗೆ ಸರ್ಕಾರದ ಯೋಜನೆ ಜನರಿಗೆ ಸರಿಯಾಗಿ ಮುಟ್ಟದಿರುವುದು ರಾಜಕೀಯ ವ್ಯಕ್ತಿ/ಅಧಿಕಾರಿಗಳ ಬೇಜವಾಬ್ದಾರಿತನ ಹಾಗೂ ಜನರ ನಿರ್ಲಕ್ಷತನವನ್ನು ಹೋಲಿಸಲಾಗಿದ್ದು, ಮುಂದಿನ ಅಧ್ಯಯನದಲ್ಲಿ ಅಂಕಿ ಸಂಖ್ಯೆಗಳ ಆಧಾರದ ಮೇಲೆ ಕಾರಣ ಪರಿಣಾಮಗಳನ್ನು ತಿಳಿಯಲಾಗುವುದು.

ಪಿ.ಎ.ಸಾರೋಕಿನ್‌ರವರು ಲಂಬಾತರ ಸಂಚಲನೆಯು ಸಾರ್ವತ್ರಿಕವಾದುದು, ಈ ಭೂಮಂಡಲದ ಮೇಲೆ ಸಂಪೂರ್ಣವಾಗಿ ಮುಚ್ಚಿದ ಸಮಾಜ ಎಲ್ಲಿಯೂ ಇಲ್ಲ. ತೀರಾ ಹಿಂದುಳಿದ ಆದಿವಾಸಿ ನೆಲೆಗಳಲ್ಲಿಯೂ ಪರಿವರ್ತನೆಯಿದೆ. ಹಿಂದೂ ಸಮಾಜ ತುಂಬಾ ಜಡವಾದುದು ಎಂದು ಹೇಳುವವರಿಗೆ ಅಲ್ಲಿಯೂ ಸಂಚಲನೆಗೆ ಅವಕಾಶವಿತ್ತು ಎಂಬುದು ತಿಳಿದು ಬರುತ್ತದೆ. ವರ್ಣಪದ್ಧತಿಯಲ್ಲಿ ವ್ಯಕ್ತಿಯ ಗುಣ ಕರ್ಮಗಳನ್ನು ಆಧರಿಸಿ ಕಾರ್ಯಗಳನ್ನು ಹಂಚಿ ಕೊಡಲಾಗಿತ್ತು. "ಲಂಬಾಂತರ ಸಂಚಲನೆ ಮುಕ್ತವಾದುದ್ದಲ್ಲ ಒಂದೊಮ್ಮೆ ಇದು ಮುಕ್ತವಾಗಿದ್ದರೆ ಸ್ತರವಿನ್ಯಾಸವೇ ಇರುತ್ತಿರಲಿಲ್ಲವೆಂದು ಸಾರೋಕಿನ್ ಅಭಿಪ್ರಾಯಪಡುತ್ತಾರೆ. ಅಮೇರಿಕಾದಂತಹ ತೀರಾ ಮುಂದುವರೆದ ರಾಷ್ಟ್ರಗಳಲ್ಲಿಯೂ ಮುಕ್ತ ಸಂಚಲನೆ ಸಾಧ್ಯವಾಗಿಲ್ಲ, ಅಲ್ಲಿಯೂ ಕೂಡಾ ಅನೇಕ ಅನೌಪಚಾರಿಕ ಅಡೆತಡೆಗಳಿವೆ ಎಂದಿದ್ದಾರೆ.

ಒಂದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಜನರು ತಮ್ಮ ಅಂತಸ್ತಿನಲ್ಲಿ ಬದಲಾವಣೆ ಹೊಂದಿದ್ದಾರೆ ಎಂಬುದು ಚಲನೆಯ ಸಾಮಾನ್ಯತೆಯನ್ನು ಸೂಚಿಸುತ್ತದೆ. ಅಂದರೆ ಚಲನೆಯ ತೀವ್ರತೆಯು ಗುಣಾತ್ಮಕವಾದುದೆಂದೂ

ಸಾಮಾನ್ಯತೆಯು ಪ್ರಮಾಣಾತ್ಮಕವಾದುದೆಂದು ಹೇಳಬಹುದು, ಲಂಬಾಂತರ ಸಂಚಲನೆಯು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರುತ್ತದೆ ಎಂದು ಹೇಳಿದ್ದಾರೆ.

**ಲಂಬಾಂತರ ಸಂಚಲನೆಯ ಬಗ್ಗೆ ಪಿ. ಎ. ಸಾರೋಕಿನ್‌ರ ಕೆಲವು ಅಭಿಪ್ರಾಯಗಳು:**

ಇಂದಿನ ಸಮಾಜದಲ್ಲಿ ಸಂಚಲನೆಗೆ ಸಾಕಷ್ಟು ಅವಕಾಶವಿರುವುದರಿಂದ ಸ್ಥಾನಮಾನಗಳನ್ನು ಹೊಂದಲು ಸಾಧ್ಯವಾಯಿತು ಎಂಬ ಕಲ್ಪನೆಯನ್ನು ಇವರು ಒಪ್ಪುವುದಿಲ್ಲ, ಯಾಕೆಂದರೆ ಹಿಂದಿನ ಕಾಲದಲ್ಲಿ ಬಹುತೇಕ ಪ್ರಭಾವಿ ಸ್ಥಾನಗಳು ಅನುವಂಶೀಯವಾಗಿರಲಿಲ್ಲ ರಾಜರು, ಧರ್ಮಗುರುಗಳು ಕೆಳಸ್ಥರದಿಂದಲೇ ಮೇಲೇರಿದವರು ಎಂದು ಹೇಳಿದ್ದಾರೆ. ಇವರ ಈ ಕಲ್ಪನೆಯ ಆಧಾರದ ಮೇಲೆಯೇ ಈ ಅಧ್ಯಯನ ವಿಷಯವನ್ನು ವಿಶ್ಲೇಷಿಸಬಹುದಾಗಿದೆ.

ಒಂದು ಸಮಾಜದಲ್ಲಿ ಯಾವುದಾದರೂ ಒಂದು ಅವಧಿಯಲ್ಲಿ ಅಧಿಕ ಚಲನೆಯುಂಟಾದರೆ ಅದು ಚಿರಸ್ಥಾಯಿ (Perpetualtrend) ಯಾದ ಪ್ರವೃತ್ತಿಯಾಗುವದಿಲ್ಲವೆಂದು ವಾದಿಸುತ್ತಾರೆ.

**ಪಿ. ಎ ಸಾರೋಕಿನ್ ರವರ ಚಲನೆಯ ಮಾರ್ಗಗಳು: (Channals of vertical mobility):**

ಶಿಕ್ಷಣ, ರಾಜಕೀಯ, ಉದ್ಯೋಗ, ಸಂಪತ್ತು, ವಿವಾಹವನ್ನು ಲಂಬಾಂತರ ಸಂಚಲನೆಯ ಮಾರ್ಗಗಳಿಗೆ ಬಳಸಿಕೊಂಡು ವಿಮರ್ಶೆ ಮಾಡಿದ್ದಾರೆ. ಸಾಮಾಜಿಕ ಸಂಚಲನೆಯಿಂದಾಗಿ ಸಾಮಾಜಿಕ ಪ್ರಗತಿ ಮತ್ತು ಆರ್ಥಿಕ ಅಭಿವೃದ್ಧಿ ಉಂಟಾಗುವುದು, ಸಾಮಾರ್ಥ್ಯವಿದ್ದವರು ಮೇಲೆ ಬರುವಲ್ಲಿ ಈ ಸಂಚಲನೆ ನೆರವಾಗುವುದು ಹಾಗಾಗಿ ಸಾಮಾಜಿಕ ಸಂಚಲನೆ ಸಾಮಾಜಿಕ ದೃಢತೆ ಹಾಗೂ ವ್ಯವಸ್ಥೆಯ ಮೇಲೆ ಧನಾತ್ಮಕ ಹಾಗೂ ಋಣಾತ್ಮಕ ಪ್ರಭಾವ ಬೀರುವುದು. ಈ ಸಂಶೋಧನೆಯಲ್ಲಿ ಕಂಡು ಬರುವ ಸಾಧಕ ಬಾಧಕಗಳನ್ನು ಈ ಸಿದ್ಧಾಂತದ ಆಧಾರದ ಮೇಲೆ ಮಂಡಿಸಲಾಗುವುದು. ಆದ್ದರಿಂದ ಪಿ.ಎ. ಸಾರೋಕಿನ್ ರವರ ಲಂಬಾಂತರ ಸಂಚಲನೆಯು ಈ ಸಂಶೋಧನಾ ವಿಷಯಕ್ಕೆ ಹೆಚ್ಚು ಸೂಕ್ತವಾದುದಾಗಿ ಕಂಡು ಬಂದಿದ್ದರಿಂದ ಈ ಸಿದ್ಧಾಂತದ ಆಧಾರದ ಮೇಲೆ ಅಂಕಿ ಅಂಶಗಳ ವಿಶ್ಲೇಷಣೆ ಮೂಲಕ ಹೆಚ್ಚು ಪರಿಣಾಮಕಾರಿಯಾಗಿ ಅಧ್ಯಯನ ಮಾಡಲಾಗಿದೆ. '೩೪'

**೨.೩. ಬಡತನದ ಕುರಿತು ಅಮರ್ತ್ಯಸೇನ್‌ರ ಆಯ್ದ ಚಿಂತನೆಗಳು:**

ಅಮಾರ್ತ್ಯಸೇನ್ ಮಾನವ ಕಲ್ಯಾಣದಿಂದ ಆರ್ಥಿಕ ಅಭಿವೃದ್ಧಿ ಎಂದು ಹೇಳಿದ ಕಲ್ಯಾಣ ಅರ್ಥಶಾಸ್ತ್ರಜ್ಞರಲ್ಲಿ ಪ್ರಮುಖರು.

ಅಮಾರ್ತ್ಯಸೇನ್‌ರ ಪ್ರಮುಖ ಆರ್ಥಿಕ ಚಿಂತನೆಗಳಲ್ಲಿ ಕೆಲವನ್ನು ಸಂಕ್ಷಿಪ್ತವಾಗಿ ಇಲ್ಲಿ ಕ್ರೋಢಿಕರಿಸಲಾಗಿದೆ.

೧. **ಬರಗಾಲದ ಬಗ್ಗೆ:** ಅಮರ್ತ್ಯಸೇನ್ ಬಂಗಾಳದಲ್ಲಿ ಭೀಕರ ಕ್ಷಾಮ ಸಂಭವಿಸಿತು, ಅದು ದ್ವಿತೀಯ ಯುದ್ಧದ ಬೇಗೆಯ ಕಾಲ ಬಡ ರೈತರು ತಿನ್ನಲು ಅನ್ನವಿಲ್ಲದೇ ಮರಣ ಹೊಂದಿದ್ದನ್ನು ಕಣ್ಣಾರೆ ಕಂಡಿದ್ದ ಸೇನ್‌ರು ಮುಂದೆ ಬರಗಾಲದ ಬಗ್ಗೆ ಆಳವಾದ ಅಧ್ಯಯನ ಮಾಡಿದರು. ಭಾರತ, ಬಾಂಗ್ಲಾದೇಶ ಮತ್ತು ಸಹರಾ ಮರುಭೂಮಿಯ ಹತ್ತಿರದ ಆಫ್ರಿಕನ್ ದೇಶಗಳ ಕ್ಷಾಮ ಪರಿಸ್ಥಿತಿಯ ಅಧ್ಯಯನ ಮಾಡಿದ ಸೇನ್ ಆಹಾರ ಪೂರೈಕೆಯ ಕೊರತೆಯೇ ಕ್ಷಾಮಕ್ಕೆ ಏಕೈಕ ಕಾರಣವಲ್ಲ ಎಂಬ ಸತ್ಯವನ್ನು ತೆರೆದಿಟ್ಟರು.

ಅಮರ್ತ್ಯಸೇನ್‌ರ ಪ್ರಕಾರ ಜನರಲ್ಲಿ ಆಹಾರ ಕೊಳ್ಳಲು ಹಣವಿಲ್ಲದೆ ಹೋದಾಗಲೂ ಕ್ಷಾಮ ಉಂಟಾಗುತ್ತದೆ, ೧೯೭೪ ರಲ್ಲಿ ಬಾಂಗ್ಲಾದಲ್ಲಿ ಅತಿ ವೃಷ್ಟಿಯಿಂದ ಕ್ಷಾಮ ಸಂಭವಿಸಿತ್ತು, ಅಮರ್ತ್ಯಸೇನ್ ರಾಜಕೀಯ ವ್ಯವಸ್ಥೆಗೂ ಕ್ಷಾಮಕ್ಕೂ ಸಂಬಂಧ ಕಲ್ಪಿಸಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ರಾಜಕೀಯ ಮತ್ತು ಸುದ್ದಿ ಮಾಧ್ಯಮಗಳ ಒತ್ತಡದಿಂದಾಗಿ, ಕ್ಷಾಮ ಸಂಭವಿಸದಂತೆ ಜನ ನಾಯಕರು ನೋಡಿಕೊಳ್ಳುತ್ತಾರೆ, ಮಿಲಿಟರಿ ಆಡಳಿತ ಮತ್ತು ಸರ್ವಾಧಿಕಾರ ವ್ಯವಸ್ಥೆಯೇ ಆಫ್ರಿಕಾದ ದೇಶಗಳ ಕ್ಷಾಮ ಸ್ಥಿತಿಗೆ ಕಾರಣವೆನ್ನುವುದು ಅಮರ್ತ್ಯಸೇನ್‌ರ ಅಭಿಪ್ರಾಯ.

೨. **ಬಡತನ:** ಬರಗಾಲ ಬಗೆಗಿನ ಅಧ್ಯಯನಗಳು ಬಡತನದ ಬಗ್ಗೆ ಸೇನ್‌ರಿಗೆ ಹೊಸ ದೃಷ್ಟಿಕೋನ ನೀಡಿದವು, ಒಟ್ಟು ಅರ್ಥವ್ಯವಸ್ಥೆಯ ಕಾರ್ಯನಿರ್ವಹಣೆಯಿಂದ ಹಸಿವು, ಬಡತನ ಮತ್ತು ಪೌಷ್ಟಿಕಾಂಶರಾಹಿತ್ಯತೆ ಉಂಟಾಗುತ್ತದೆ. ಕೇವಲ ಆಹಾರ ಧಾನ್ಯಗಳ ಕೊರತೆಯಿಂದಲ್ಲ ಎನ್ನುವುದು ಅಮರ್ತ್ಯಸೇನ್‌ರ ವಾದ.

ಬಡತನಕ್ಕೆ ಮೂರು ಮುಖ್ಯ ಕಾರಣಗಳನ್ನು ಅವರು ಕಂಡು ಕೊಂಡಿದ್ದಾರೆ

ಎ. ಹಕ್ಕುಗಳ ಅಭಾವ

ಬಿ. ಯೋಗ್ಯತೆ ಮತ್ತು ಅರ್ಹತೆಗಳ ಅಭಾವ

ಸಿ. ಸಾಮರ್ಥ್ಯಗಳ ಅಭಾವವೇ ಬಡತನಕ್ಕೆ ಮೂಲ ಕಾರಣ.

ಆದುದರಿಂದ ಕ್ಷಾಮ ಅನ್ನುವುದು ಕೇವಲ ಆಹಾರ ಧಾನ್ಯಗಳ ಉತ್ಪಾದನೆಗೆ ಸಂಬಂಧಿಸಿದ ವಿಷಯವಲ್ಲ ಎನ್ನುವುದು ಅವರ ಖಚಿತ ನಿಲುವು.

ಹಕ್ಕು, ಯೋಗ್ಯತೆ, ಮತ್ತು ಸಾಮಾರ್ಥ್ಯಗಳ ಕೊರತೆಗೆ ಕಾರಣಗಳನ್ನು ತಿಳಿಸುತ್ತಾ ಈ ಕೆಳಗಿನ ಅಂಶಗಳನ್ನು ವ್ಯಕ್ತಪಡಿಸುತ್ತಾರೆ.

೧. ಮೂಲ ಶಿಕ್ಷಣ ಇಲ್ಲದಿರುವುದು.

೨. ಲೈಂಗಿಕ ಅಸಮಾನತೆ.

೩. ಅಪೌಷ್ಟಿಕತೆ ಮತ್ತು ಅನಾರೋಗ್ಯ.

೪. ಪ್ರತಿಕೂಲ ಪರಿಸ್ಥಿತಿಯಲ್ಲಿ ಉಪವಾಸ ನಿವಾರಣಾ ಸಾಮರ್ಥ್ಯರಾಹಿತ್ಯ- ಇವು ಹಕ್ಕು, ಯೋಗ್ಯತೆ, ಸಾಮರ್ಥ್ಯಗಳ ಕೊರತೆಗೆ ಕಾರಣ. ಇವುಗಳಿಂದಾಗಿ ಬಡತನ ಮತ್ತು ಕಲ್ಯಾಣರಾಹಿತ್ಯ ಸ್ಥಿತಿ ಉಂಟಾಗುತ್ತದೆ.

**೩. ಕಲ್ಯಾಣ:** ಎ.ಸಿ. ಪಿಗೋನಿಂದ ಮೊದಲ್ಗೊಂಡು ಅನೇಕ ಅರ್ಥಶಾಸ್ತ್ರಜ್ಞರು ಅರ್ಥಿಕ ಕಲ್ಯಾಣದ ಬಗ್ಗೆ ಮಾತನಾಡಿದ್ದಾರೆ. ಆದರೆ ಸೇನ್ ಆರ್ಥಿಕ ಕಲ್ಯಾಣ ಸಾಧನೆಗೆ ಆದಾಯದ ವಿತರಣೆ ಒಂದೇ ಸಾಕಾಗುವುದಿಲ್ಲ ಎಂದಿದ್ದಾರೆ.

ಕಲ್ಯಾಣ ಎಂದರೆ ಗರಿಷ್ಠ ಸುಖ ಎಂದರ್ಥ. ಗರಿಷ್ಠ ಸುಖ ಗಳಿಕೆಗೆ ಕೆಲವು ಮೂಲಭೂತ ಆಸ್ತಿಗಳು ಬೇಕು, ಮೂಲಭೂತ ಆಸ್ತಿಗಳು ಅಂದರೆ ಭೂಮಿ, ಹೊಲ- ತೋಟ, ಸಂಪತ್ತು ಅಲ್ಲ, ಸೇನ್ ಹೇಳುವ ನಾಲ್ಕು ಮೂಲಭೂತ ಆಸ್ತಿಗಳೆಂದರೆ: ೧) ಮೂಲ ಶಿಕ್ಷಣ ೨) ಲಿಂಗ ಸಮಾನತೆ ೩) ಕನಿಷ್ಠ ಆರೋಗ್ಯ ೪) ಪ್ರತಿಕೂಲ ಪರಿಸ್ಥಿತಿಯಲ್ಲೂ ಉಪವಾಸ ನಿವಾರಿಸುವ ಸಾಮರ್ಥ್ಯ. ಹಾಗಾಗಿ ಬಡವರು ಎಂದರೆ ಆದಾಯ ಕಡಿಮೆ ಉಳ್ಳವರು ಎಂದು ತಿಳಿದುಕೊಳ್ಳಬಾರದು, ಬಡವರು ಎಂದರೆ ಕಡಿಮೆ ಹಕ್ಕು, ಯೋಗ್ಯತೆ, ಅರ್ಹತೆಯವರು ಮತ್ತು ಸಾಮಾರ್ಥ್ಯಗಳು ಇಲ್ಲದವರು. ಕೇರಳದ ಜನರ ಆದಾಯ ಕಡಿಮೆ, ಆದರೆ ಅವರು ಬಡವರಲ್ಲ, ಏಕೆಂದರೆ ಆರೋಗ್ಯ, ಲಿಂಗ ಸಮಾನತೆ ಮತ್ತು ಶಿಕ್ಷಣದಲ್ಲಿ ಅವರು ನಮ್ಮೆಲ್ಲರಿಗಿಂತ ಮುಂದಿದ್ದಾರೆ. ಜೀವನ ಶ್ರೀಮಂತಿಕೆ ಅಂದರೆ ದೇಶದ ಆದಾಯ ಏರಿಕೆಯಲ್ಲ, ಕುಡಿಯುವ ನೀರು, ನೈರ್ಮಲ್ಯ, ಆರೋಗ್ಯ, ಮೂಲ ಶಿಕ್ಷಣ ಇವು ಜನರ ಹಕ್ಕುಗಳು, ಇವನ್ನು ಜನರಿಗೆ ನೀಡಲಾಗಿಲ್ಲ, ಜನರಿಗೆ ತಮ್ಮ ಹಕ್ಕುಗಳ, ಅರ್ಹತೆಯ, ಯೋಗ್ಯತೆಯ, ಸಾಮರ್ಥ್ಯದ ಅರಿವೇ ಇಲ್ಲ, ಹಾಗಾಗಿ ಭಾರತ ಕಲ್ಯಾಣ ರಾಜ್ಯವಾಗಿಲ್ಲ ಎನ್ನುತ್ತಾರೆ ಸೇನ್.

**೪. ಸಾಮಾಜಿಕ ಆಯ್ಕೆ:** ಬಡತನ ಮತ್ತು ಕಲ್ಯಾಣಗಳನ್ನು ವಿವರಿಸುವಾಗ ಸೇನ್ 'ಸಾಮಾಜಿಕ ಆಯ್ಕೆ' ಎಂಬ ಪರಿಕಲ್ಪನೆಯನ್ನು ಬಳಸಿದ್ದಾರೆ. ಒಬ್ಬ ವ್ಯಕ್ತಿಯ ಮೌಲ್ಯಗಳನ್ನು ಸಾಮಾಜಿಕ ಮೌಲ್ಯಗಳನ್ನಾಗಿ ಭಾವಿಸಬಹುದೇ? ಸಮಾಜದ ಮೌಲ್ಯಗಳನ್ನು ಒಬ್ಬ ವ್ಯಕ್ತಿಯ ಮೇಲೆ ಹೇರಬಹುದೇ ? ಈ ಪ್ರಶ್ನೆಗಳಿಗೆ ಉತ್ತರ ಕಂಡು ಕೊಳ್ಳುವಾಗ ಸಾಮಾಜಿಕ ಆಯ್ಕೆ ಎಂಬ ಪರಿಕಲ್ಪನೆ ಮಹತ್ವವನ್ನು ಪಡೆದಿದೆ.

ಸಾಮಾಜಿಕ ಮೌಲ್ಯಗಳೇ ಸಾಮಾಜಿಕ ಆಯ್ಕೆಗಳು, ಯಾವುದನ್ನು ಸಮಾಜ ಮೌಲ್ಯ ಎಂದು ಒಪ್ಪಿಕೊಳ್ಳುತ್ತದೋ ಅದನ್ನು ವ್ಯಕ್ತಿ ಕೂಡಾ ಒಪ್ಪಿಕೊಳ್ಳಬೇಕಾಗಿಲ್ಲ. "ಬಹುಮತದ ತೀರ್ಮಾನ" ಎನ್ನುವುದು ಆಚರಣಯೋಗ್ಯ ವಿಚಾರವಲ್ಲ, ಆದುದರಿಂದ ವ್ಯಷ್ಟಿ ಮತ್ತು ಸಮಷ್ಟಿಯ ಸಂಘರ್ಷವನ್ನು ನೀತಿಶಾಸ್ತ್ರದ ಆಧಾರದ ಮೇಲೆ ಪರಿಹರಿಸಬೇಕಾಗಿದೆ. ಬಹುಮತದ ಆಳ್ವಿಕೆ ಎನ್ನುವುದನ್ನು ಯಾವಾಗಲೂ ಸಂಶಯದಿಂದಲೇ ನೋಡಬೇಕಾಗುತ್ತದೆ ಎನ್ನುವುದು ಸೇನ್‌ರ ವಾದ. ಈ ವಾದವು ಮೌಲ್ಯದ ಮೂಲ ವ್ಯಾಖ್ಯಾನವನ್ನೇ ಬದಲಾಯಿಸಿ ಬಿಟ್ಟಿದೆ, ಸಮಾಜವು

ಯಾವುದನ್ನು ಮೌಲ್ಯ ಎಂದು ಕರೆಯುತ್ತದೆಯೋ ಅದು ವ್ಯಷ್ಟಿಯಾಗಿ ಮೌಲ್ಯವಾಗಿರಬೇಕಾಗಿಲ್ಲ, ಸ್ತ್ರೀ ಶಿಕ್ಷಣ ನಿಷೇದ ಒಂದು ಕಾಲದಲ್ಲಿ ಸಾಮಾಜಿಕ ಮೌಲ್ಯವಾಗಿತ್ತು ಎಂಬ ಅಂಶವನ್ನು ಇಲ್ಲಿ ನೆನಪಿಸಿಕೊಂಡರೆ ಸೇನ್‌ರ ವಾದದ ತಿರುಳು ಅರ್ಥವಾಗುತ್ತದೆ.

೫. **ಬಡತನ ಮತ್ತು ಕಲ್ಯಾಣ ಮಾಪನ**: ಬಡತನದ ಮತ್ತು ಕಲ್ಯಾಣದ ಮಾಪನಕ್ಕೆ ನಿಖರವಾದ ಮಾಪಕವೊಂದನ್ನು ಒದಗಿಸಿದುದು ಅಮರ್ತ್ಯ ಸೇನ್‌ರ ಹಿರಿಮೆ. ಸಾಮಾನ್ಯವಾಗಿ ಬಡತನವನ್ನು ಬಡತನದ ರೇಖೆಯ ಆಧಾರದಿಂದ ಮಾಪನ ಮಾಡುತ್ತಾರೆ. ಬಡತನದ ರೇಖೆಯು ಜೀವನ ಸಾಗಿಸಲು ಬೇಕಾಗುವ ಆದಾಯದಿಂದ ನಿರ್ಣಯವಾಗುತ್ತದೆ, ಕಲ್ಯಾಣವನ್ನು ಮಾಪನ ಮಾಡಲು ತಲಾದಾಯವನ್ನು ಬಳಸುತ್ತಿದ್ದುದು ರೂಢಿ.

ಆದರೆ ಅಮರ್ತ್ಯಸೇನ್‌ರ ಈ ಮಾಪಕವನ್ನೇ ಅಲ್ಲಗಳೆದರು, ಅವರು ಬಡತನ ಮತ್ತು ಕಲ್ಯಾಣ ಮಾಪನಕ್ಕೆ ಆರೋಗ್ಯ, ಶಿಕ್ಷಣ ಮುಂತಾದ ಮಾನದಂಡಗಳನ್ನು ಬಳಸಿದರು, ಅಮರ್ತ್ಯ ಸೇನರ ಚಿಂತನೆಯ ದಾಟಿಯನ್ನು ಅನುಸರಿಸಿ ಇಂದು ವಿಶ್ವಸಂಸ್ಥೆಯು ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರಚಿಸಿದೆ. ಇದು ಅಮರ್ತ್ಯಸೇನ್‌ರ ಚಿಂತನೆಯ ನಿಖರತೆಗೆ ಸಾಕ್ಷಿಯಾಗಿದೆ.

೬. **ಉದಾರವಾದದ ಬಗ್ಗೆ**: ಅರ್ಥಶಾಸ್ತ್ರವು ಬೇಡಿಕೆ–ಪೂರೈಕೆಗಳ ಸಮತೋಲನಕ್ಕೆ ಸೀಮಿತವಾದ ಜ್ಞಾನಾಂಗವಲ್ಲ. ಅದು ಸಮಗ್ರ ಚಿಂತನೆಯ ಕ್ಷೇತ್ರ, ಸಮಾಜಶಾಸ್ತ್ರ ನೀತಿಶಾಸ್ತ್ರಗಳನ್ನು ಬಿಟ್ಟು ಅರ್ಥಶಾಸ್ತ್ರವನ್ನು ಪ್ರತ್ಯೇಕವಾಗಿ ಪರಿಗ್ರಹಿಸುವಂತಿಲ್ಲ. ಆರ್ಥಿಕ ಉದಾರೀಕರಣವನ್ನು ಕೂಡಾ ಇದೇ ನಿಟ್ಟಿನಲ್ಲಿ ನೋಡಬೇಕು ಎನ್ನುವುದು ಸೇನ್‌ರವಾದ.

ವಿಶ್ವ ಬ್ಯಾಂಕು ಮತ್ತು ವಿಶ್ವ ವಿತ್ತ ನಿಧಿ ಬೋಧಿಸುತ್ತಿರುವ ಖಾಸಗೀಕರಣ ನಿಯಂತ್ರಣರಾಹಿತ್ಯ ಮಾರುಕಟ್ಟೆ ವ್ಯವಸ್ಥೆಯನ್ನು ಅವರು ಉದಾರೀಕರಣ ಎಂದು ಒಪ್ಪಕೊಂಡವರಲ್ಲ, ಶಿಕ್ಷಣ, ಆರೋಗ್ಯ ಮತ್ತು ಸಾಮಾಜಿಕ ಭದ್ರತಾ ವ್ಯವಸ್ತೆ ಸುಧಾರಿಸದೇ ಉದಾರೀಕರಣದ ಪ್ರಕ್ರಿಯೆ ಆರಂಭವಾದರೆ ಅನಾಹುತ ಖಂಡಿತ ಎನ್ನುವುದು ಅವರ ಖಚಿತ ನಿಲುವು. ಉದಾರವಾದವನ್ನು ಆರ್ಥಿಕ ಕ್ಷೇತ್ರಕ್ಕೆ ಮಾತ್ರ ಅನ್ವಯಿಸದೆ ಅವರು ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಿಗೂ ಅನ್ವಯಿಸಿದ್ದಾರೆ, ಆದುದರಿಂದ ಅವರು ೧೯೯೨ರ ಡಿಸೆಂಬರ್ ೬ ರಂದು ಬಾಬರಿ ಮಸೀದಿ ಉರುಳಿದಾಗ ಅದು ಭಾರತದ ಧರ್ಮ ಸಹಿಷ್ಣತೆ ಮತ್ತು ಸಹಬಾಳ್ವೆಯ ಪರಂಪರೆಗೆ ವಿರುದ್ಧವಾದುದೆಂದು ಕೊರಗಿದ್ದಾರೆ.

ಅಮಾರ್ತ್ಯಸೇನ್‌ರಿಗೆ ನೋಬೆಲ್ ಪಾರಿತೋಷಕ ಬಂದುದಕ್ಕೆ ಭಾರತ ಸಂತೋಷಪಟ್ಟು ಪ್ರಯೋಜನವಿಲ್ಲ, ಜನರ ಹಕ್ಕು, ಯೋಗ್ಯತೆ, ಸಾಮರ್ಥ್ಯಗಳ ಅರಿವು ಮೂಡಿಸಲು ಮೂಲ ಶಿಕ್ಷಣ, ಆರೋಗ್ಯ, ನೈರ್ಮಲ್ಯ, ಪೌಷ್ಟಿಕಾಂಶ ಆಹಾರ

ನೀಡಿಕೆ–ಈ ಕಾರ್ಯಕ್ರಮಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತರಬೇಕಾಗಿದೆ. ಅಮಾರ್ತ್ಯಸೇನ್ ರವರು ಪ್ರತಿಪಾದಿಸಿರುವ ಸಿದ್ಧಾಂತವು ಯಾವ ರೀತಿ ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಅಧ್ಯಯನಕ್ಕೆ ಅನ್ವಯಗೊಳ್ಳುತ್ತದೆ ಎಂಬುದನ್ನು ಮುಂದಿನ ಅಧ್ಯಯನದಲ್ಲಿ ತಿಳಿದುಕೊಳ್ಳಲಾಗುವುದು.

* * *

ಅಡಿಟಿಪ್ಪಣಿಗಳು :


1. Mahalingam T.V "Administration and Social life under Vijaya Nagar" P-185, -Madras 1975.
2. Srivatsava A.L"The Mogal Empire" P-375-Bombay 1974.
3. Minhas B.S "Poverty in India –Then and Now" (Macmillan-1973) P-18.
4. Members of the working group were: Shriyuts Gadgil, Ganguli, Lokanathan, Masani, Ashok Mehta, Sriman Narayan, Pitamber Panth, and V.K.R.V Rao.
5. Rodgers J.B: Approaches to the Analysis of Poverty Population and Employment working papers 71.110 Geneva 1979.
6. V.M Rao and M.Vive kananda "The poor as a social stratum" Economic and political weekly 1982- P-1107-12.
7. Khan A.K, Basic Needs Targets: An illustrative exercise in identification and quantification with references to Bangladesh, Geneva 1977.
8. Muzymdar D.N, Social contours of an Industrial city social survey of Kanpur, 1954-55 Bombay Asia publishing House 1960 P-174.
9. Dr. Vinayaka Murthy A.V 'women Empowerment through Self help group' (Research Paper) Reader Periyar University Tamil Nadu.
10. T.F.Y.P Committee Government of India Planning Commission, Report of Tenth five year plan- p-16. 2002-2007.
11. T.M.Bhaskhar rao and Reach team 'Women Empowerment through SHG' APMES- 2007- p 11.
12. SriRaman Bharathi Das Research Paper on 'Empowerment through Micro Self help group' Management Institute Tiruchanapalli P-25.
13. Women Devlopment organization Research on Self help group in India-APMAS 2006.

14. Shashikala Seetaraman Research on 'Urban Society Development through Self help group in India, Asian Development Bank May-2007.
15. Malkam Hapar 'Self help group Development through Selp help group and Bank linkages' Date:25&26.11.2002, NewDelhi-2002.
16 Karnataka Human Development Report- Empowerment through Self help group Participation-2005.
17. P.Venkata rao Research on "Women Empowerment through Self help group" in Vishakhapattanam Dist, Andhrapradesh p-34.
18. Bharathi Patil 'Athani Taluk Self help group in Women Empowermet. Research Paper p-26.
19. General of Indian Sociological Society, Sociology Bulletin-Month of August 2008.
೨೦. ಡಾ. ಶಾಲಿನಿ ರಜನೀಸ್, ನಡೆ ಮುಂದೆ- ಮಹಿಳಾ ಸಬಲೀಕರಣಕ್ಕೆ ದಾರಿ- ಪ್ರಜಾವಾಣಿ ಕನ್ನಡ ದಿನಪತ್ರಿಕೆ ಸೆಪ್ಟೆಂಬರ್-೨೦೦೯.
೨೧. ಡಾ.ಕೆ.ಎಸ್ ರತ್ನಮ್ಮ ಇವರು ಸ್ತ್ರೀಶಕ್ತಿ ಸ್ವಸಹಾಯ ಸಂಘಗಳ ಒಕ್ಕೂಟ ಏರ್ಪಡಿಸಿದ್ದ ಮಹಿಳಾ ದಿನಾಚರಣೆಯ ಭಾಷಣದ ಕೈಪಿಡಿಯನ್ನು ಸ್ತ್ರೀಲೇಖ ಎಂಬ ಲೇಖನವಾಗಿ ಪ್ರಕಟಗೊಂಡಿದ್ದು-೨೦೦೫.
೨೨. ಎಸ್.ಜಿ. ಹಿರೇಮಠ್, ಭಾರತದಲ್ಲಿ ಗ್ರಾಮೀಣಾಭಿವೃದ್ಧಿ, ಪ್ರದೀಪ್ ಪ್ರಕಾಶನ, ಸಿಂಧಗಿ- ಪ್ರಥಮ ಆವೃತ್ತಿ -2007. ಪುಟಸಂಖ್ಯೆ-46.
೨೩. ಡಾ. ಎ. ಕೆ. ಸಿಂಗ್ ಮತ್ತು ಡಾ. ಕಮಲ್ ಕುಮಾರ್ ಸಿಂಗ್ ನಗರ ಮತ್ತು ಪರಿಸರ ಅಧ್ಯಯನದ ಪ್ರಾದೇಶಿಕ ಕೇಂದ್ರ ಲಕ್ನೊ ವಿಶ್ವವಿದ್ಯಾನಿಲಯ ಲಕ್ನೊ ಇವರು ವಿವಿಧ ರಾಜ್ಯಗಳಲ್ಲಿ ನಡೆಸಿದ ಎಸ್.ಜೆ.ಎಸ್.ಆರ್‌ವೈ ಯೋಜನೆಯ ಅಧ್ಯಯನ ವರದಿಗಳು.)

    Regional Center for Urban & Environment Studies Lucknow University Campus, Lucknow, Sponsored by- Ministry of Housing and Urban Poverty Alleviation, Government of India, NewDelhi.
೨೪. ಏಷಿಯನ್ ಅಭಿವೃದ್ಧಿ ಬ್ಯಾಂಕ್ ತಂಡದ ಎಸ್‌ಜೆಎಸ್‌ಆರ್‌ವೈ ಯೋಜನೆಯ ಅಧ್ಯಯನದ ವರದಿ- ೧೨ ಸೆಪ್ಟೆಂಬರ್ ೨೦೧೧.
೨೫. ಶ್ರೀಮತಿ ಸರಳರಾವ್ ಮತ್ತು ಕುಮಾರಿ ರೈಜಾಷಾ ಅವರ ಎಸ್‌ಜೆಎಸ್‌ಆರ್‌ವೈ ಯೋಜನೆಯ ಅಧ್ಯಯನದ ವರದಿ ೨೪ ಮಾರ್ಚ್ ೨೦೧೨.
೨೬. ಎಸ್.ಬಿ ಜೋಗೂರ, ಸಮಾಜಶಾಸ್ತ್ರದ ಸಾಮಾಜಿಕ ಚಿಂತಕರು, ವಿದ್ಯಾನಿಧಿ ಪ್ರಕಾಶನ, ಗದಗ.

# ಅಧ್ಯಾಯ- ೦೩

# ಸಾಮಾಜಿಕ ಆರ್ಥಿಕ ನಿರ್ಧಾರಕಾಂಶಗಳು

ಪ್ರಸ್ತುತ ಅಧ್ಯಯನದಲ್ಲಿ ಜನರ ಸಾಮಾಜಿಕ ಆರ್ಥಿಕ ಸ್ಥಿತಿಗಳನ್ನು ಕುರಿತು ಅಧ್ಯಯನ ಮಾಡಿ ಹಲವಾರು ಅಂಶಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ನಗರದ ಬಡ ಜನರ ವಯಸ್ಸು, ಜಾತಿ, ಧರ್ಮ, ವಿವಾಹ, ಶಿಕ್ಷಣ, ಮಕ್ಕಳ ಶಿಕ್ಷಣ, ಉದ್ಯೋಗ, ವಾರ್ಷಿಕ ಆದಾಯ, ಕುಟುಂಬ ವರ್ಗ, ಕುಟುಂಬದ ಸ್ಥಿತಿ-ಗತಿ, ಮನೆ ಇರುವ ಪ್ರದೇಶ, ಭಾಷೆ, ಕುಟುಂಬದ ಪ್ರಕಾರ, ಅಂತಸ್ತು, ಕುಟುಂಬದ ನಿರ್ವಹಣೆ ಹೀಗೆ ಹಲವಾರು ಸಂಗತಿಗಳನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಅಧ್ಯಯನಿಸಲಾಗಿದೆ. ಬಡ ಜನರ ಸಾಮಾಜಿಕ ಹಿನ್ನೆಲೆ ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಈ ಮೇಲಿನ ಎಲ್ಲ ಅಂಶಗಳು ಪ್ರಖ್ಯಾತ ಸಮಾಜಶಾಸ್ತ್ರಜ್ಞರಾದ **ಪಿ.ಎ ಸಾರೋಕಿನ್** ಮತ್ತು ಖ್ಯಾತ ಕಲ್ಯಾಣ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರಾದ ನೊಬೆಲ್ ಪುರಷ್ಕೃತ **ಅಮಾರ್ತ್ಯಸೇನ್** ರವರ ಚಿಂತನೆಗಳು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಸಾಧಿಸಲು ಹೇಗೆ ಪ್ರಭಾವಿತವಾಗಿವೆ ಎಂಬುದನ್ನು ಗಮನದಲ್ಲಿಟ್ಟು ಕೊಂಡು ಅಧ್ಯಯನ ಮಾಡಲಾಗಿದೆ.

ಯಾಕೆಂದರೆ ಅನೇಕ ಸಮಾಜಶಾಸ್ತ್ರೀಯ ಅಂಶಗಳು ಯಾವ ರೀತಿ ನಗರದ ಬಡ ಜನರ ವರ್ತನೆಯನ್ನು ಪ್ರಭಾವಿಸುತ್ತವೆ ಎಂಬುದನ್ನು ಅರಿಯಲು ಸಾಮಾಜಿಕ, ಆರ್ಥಿಕ, ಕೌಟುಂಬಿಕ, ಭೌಗೋಳಿಕ ಅಂಶಗಳನ್ನು ಮತ್ತು ಕಾರ್ಯಕ್ರಮಗಳ ವಿವರಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೩.೧ ಸಾಮಾಜಿಕ ಆರ್ಥಿಕ ಅಂಕಿ ಅಂಶಗಳು**

ಮಾಹಿತಿದಾರರ ವಯಸ್ಸು:

ಮನುಷ್ಯನಿಗೆ ವಯಸ್ಸು ಒಂದು ಮಹತ್ವದ ಲಕ್ಷಣವಾಗಿದೆ. ವಯಸ್ಸು ಕೇವಲ ದೈಹಿಕ ಮತ್ತು ಮಾನಸಿಕ ಸಧೃಢತೆಯನ್ನು ಅವಲಂಬಿಸಿರದೆ ಅವನು ಹೊಂದಿರಬಹುದಾದ ಪರಿಣತಿಯನ್ನು ಹಾಗೂ ಜ್ಞಾನವನ್ನು ಮತ್ತು ಬುದ್ಧಿಮಟ್ಟವನ್ನು ಅವಲಂಬಿಸಿರುವುದು. ಯುನೈಟೆಡ್ ನೇಷನ್ಸ್ ಈ ರೀತಿಯಾಗಿ ವಿವರಿಸಿದೆ **"ಹುಟ್ಟು ಮತ್ತು ಸಾವುಗಳ ನಡುವಿನ ವಿಶ್ರಾಂತಿಯೇ ಜೀವನವಾಗಿದೆ"**. ಜನರ ವಯಸ್ಸು, ಆರೋಗ್ಯದ ಯೋಜನೆಗೆ, ಉದ್ಯೋಗಕ್ಕೆ ಮತ್ತು ಇನ್ನುಳಿದ ಅಭಿವೃದ್ಧಿದಾಯಕ ಕಾರ್ಯಕ್ರಮಗಳಿಗೆ ವಯಸ್ಸು ಅತ್ಯಂತ ಮಹತ್ವದಾಯಕವಾಗಿದೆ.

**ಕೋಷ್ಟಕ –೩.೧**

**ಮಾಹಿತಿದಾರರ ವಯಸ್ಸು:**

| ಕ್ರ. ಸಂ | ವಯಸ್ಸು | ಒಟ್ಟು | ಪ್ರತಿಶತ (%) |
|---|---|---|---|
| ೧ | ೧೮ – ೨೯ | ೨೪ | ೦೮.೦೦ |
| ೨ | ೩೦ – ೪೪ | ೧೨೧ | ೪೦.೩೩ |
| ೩ | ೪೫ – ೫೯ | ೧೪೭ | ೪೯.೦೦ |
| ೪ | ೬೦ ಮೇಲ್ಪಟ್ಟು | ೦೮ | ೨.೬೬ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕದಲ್ಲಿರುವಂತೆ ಮಾಹಿತಿದಾರರಿಗೆ ಅವರ ವಯಸ್ಸನ್ನು ಪ್ರಶ್ನಿಸಲಾಯಿತು. ಅದರ ಪ್ರಕಾರ ಮಾಹಿತಿದಾರರಲ್ಲಿ ೧೮–೨೯ ವಯಸ್ಸಿನವರು ೦೮ ಪ್ರತಿಶತ ಸಂಖ್ಯೆಯನ್ನು ಹೊಂದಿದ್ದಾರೆ. ೩೦–೪೪ ವಯಸ್ಸಿನವರು ೪೦.೩೩ ಪ್ರತಿಶತ ಸಂಖ್ಯೆಯನ್ನು, ೪೫–೫೯ ವಯಸ್ಸಿನವರು ೪೯ ಪ್ರತಿಶತ, ಪ್ರತಿಶತ ೦೮ ಮಾಹಿತಿದಾರರು ೬೦ ವರ್ಷ ಮೇಲ್ಪಟ್ಟವರು ಇದ್ದಾರೆ. ೬೦ ವರ್ಷ ಈ ಗುಂಪಿನಲ್ಲಿಯೇ ಕಡಿಮೆ ಜನರನ್ನು ಕಾಣಬಹುದು. ಇದು ಎಲ್ಲಾ ವಯೋಮಿತಿಗಿಂತ ಕಡಿಮೆ ಸಂಖ್ಯೆಯನ್ನು ಹೊಂದಿದೆ.

**ಕೋಷ್ಟಕ ೩.೨**

**ಮಾಹಿತಿದಾರರ ಶಿಕ್ಷಣದ ವಿವರಣೆ:**

| ಕ್ರ.ಸಂ | ಶಿಕ್ಷಣ | ಒಟ್ಟು | ಪ್ರತಿಶತ (%) |
|---|---|---|---|
| ೧ | ಪ್ರಾಥಮಿಕ | ೯೫ | ೩೧.೬೬ |
| ೨ | ಮಾಧ್ಯಮಿಕ | ೧೦೧ | ೩೩.೬೬ |
| ೩ | ಪ್ರೌಢಶಾಲೆ | ೮೧ | ೨೭.೦೦ |
| ೪ | ಯಾವುದೂ ಇಲ್ಲ | ೨೩ | ೭.೬೬ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ ೩೦೦ ಮಾಹಿತಿದಾರರಲ್ಲಿ ಮಾಧ್ಯಮಿಕ ಶಿಕ್ಷಣ ಹೆಚ್ಚಿಗೆ ಪಡೆದಿದ್ದು, ೩೩.೬೬ ಪ್ರತಿಶತ ಮಾಧ್ಯಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಪ್ರಾಥಮಿಕ ಶಿಕ್ಷಣವನ್ನು ೩೧.೬೬ ಪ್ರತಿಶತ, ೨೭ ಪ್ರತಿಶತ ಪ್ರೌಢ ಶಿಕ್ಷಣವನ್ನು ಹೊಂದಿದ್ದಾರೆ, ಯಾವುದೇ ಶಿಕ್ಷಣವನ್ನು ಪಡೆಯದ ಅನಕ್ಷರಸ್ಥರು ೭.೬೬ ಪ್ರತಿಶತ ಇರುವುದು ಮೇಲಿನ ಅಂಕಿ ಅಂಶಗಳಿಂದ ತಿಳಿದು ಬರುತ್ತದೆ.

**ಮಾಹಿತಿದಾರರ ಜಾತಿ:**

ಜಾತಿಯು ಭಾರತದಲ್ಲಿ ಸಾಮಾಜಿಕಸ್ಥರ ವಿನ್ಯಾಸದ ಒಂದು ಬಗೆಯಾಗಿದೆ. ಭಾರತೀಯ ಸಮಾಜದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವ ಜಾತಿಯನ್ನು ಒಬ್ಬ ವ್ಯಕ್ತಿಯು ಹೊಂದಿರಬಹುದಾದ ಸ್ಥಾನವನ್ನು ಸಂಪತ್ತಿನಿಂದಲೂ, ಅವನ ಜ್ಞಾನದಿಂದಲೂ ಅಲ್ಲ, ಅವನ ಹುಟ್ಟಿನ ಆಧಾರದ ಮೇಲೆ ಅಳೆಯಲಾಗುತ್ತದೆ. ವ್ಯಕ್ತಿ ಜೀವನ ಪರ್ಯಂತ ನಿಶ್ಚಿಂತವಾಗಿರುವುದು ಜಾತಿಗಳಲ್ಲಿ, ಮೇಲು-ಕೀಳು ಎಂಬ ಭಾವನೆ ಜನರ ಮನಸ್ಸಿನಲ್ಲಿ ಆಳವಾಗಿ ಬೇರೂರಿದೆ. **ಸಿ.ಎಚ್.ಕೂಲೆ** (ಪು. ೨೧೧) ಇವರ ಪ್ರಕಾರ "ವರ್ಗವು ಕಟ್ಟುನಿಟ್ಟಾಗಿ ಅನುವಂಶಿಕವಾಗಿ ಪರಿಣಮಿಸಿದಾಗ ಅದನ್ನೇ ಜಾತಿ ಎಂದು ಕರೆಯುವರು". ಮಾಹಿತಿದಾರರು ಯಾವ ಯಾವ ಜಾತಿಗಳಿಗೆ ಸಂಬಂಧಿಸಿದವರೆಂಬುದನ್ನು ಕೋಷ್ಟಕ ಸಂಖ್ಯೆ ೩.೩ ರಲ್ಲಿ ಕಾಣಬಹುದು.

**ಕೋಷ್ಟಕ ೩.೩**

**ಮಾಹಿತಿದಾರರ ಜಾತಿ ಬಗ್ಗೆ ವಿವರ**

| ಕ್ರ.ಸಂ. | ಜಾತಿ | ಒಟ್ಟು | ಪ್ರತಿಶತ (%) |
|---|---|---|---|
| ೧ | ಎಸ್.ಸಿ | ೫೯ | ೧೯.೬೬ |
| ೨ | ಎಸ್.ಟಿ | ೬೭ | ೨೨.೩೩ |
| ೩ | ಓಬಿಸಿ | ೧೭೪ | ೫೮.೦೦ |
| | **ಒಟ್ಟು** | **೩೦೦** | **೧೦೦** |

ಕೋಷ್ಟಕ ೩.೩ ರಲ್ಲಿ ೩೦೦ ಮಾಹಿತಿದಾರರು ಯಾವ ಜಾತಿಗೆ ಸೇರಿದ್ದಾರೆ ಎನ್ನುವುದು ತಿಳಿಯುತ್ತದೆ. ೧೯.೬೬ ಪ್ರತಿಶತ ಮಾಹಿತಿದಾರರು (ಎಸ್‌ಸಿ) ಪರಿಶಿಷ್ಟ ಜಾತಿಗೆ, ೨೨.೩೩ ಪ್ರತಿಶತ ಮಾಹಿತಿದಾರರು ಪರಿಶಿಷ್ಟ ವರ್ಗಕ್ಕೆ, ೫೮ ಮಾಹಿತಿದಾರರು ಓಬಿಸಿಗೆ ಸೇರಿದವರಾಗಿದ್ದಾರೆ. ಮೇಲಿನ ಕ್ರಮ ಸಂಖ್ಯೆ ೦೩ ರಲ್ಲಿ ಓಬಿಸಿ ಜಾತಿಗೆ ಸೇರಿದವರು ಹೆಚ್ಚಿದ್ದು, ಅತಿ ಕಡಿಮೆ ಎಸ್‌ಸಿ ಜಾತಿಗೆ ಸೇರಿದವರಾಗಿದ್ದಾರೆ.

**ಮಾಹಿತಿದಾರರ ಧರ್ಮ:**

ಧರ್ಮವು ಮಾನವನ ಸಹಜವಾದ ಸ್ವಭಾವವಾಗಿದೆ. ಮಾನವನೊಬ್ಬನು ಧಾರ್ಮಿಕ ಜೀವಿಯಾಗಿದ್ದಾನೆ. ಧರ್ಮವು ಮಾನವನ ಅತಿಮಾನುಷ ಶಕ್ತಿಗಳಲ್ಲಿಟ್ಟಿರುವ ನಂಬಿಕೆ, ಶ್ರದ್ಧೆಯೇ ಆಗಿದೆ. ತನಗೆ ತಿಳಿಯದ ವಿಚಾರಗಳಿಗೆ

ಪ್ರಬಲವಾದ ಶಕ್ತಿಯಿದೆ ಎಂದು ಇದನ್ನೇ ಧರ್ಮವೆಂದು ತಿಳಿಯಲಾಗುವುದು. ಮಾನವನಲ್ಲಿ ಧರ್ಮವು ಒಮ್ಮೆ ಭಯದಿಂದಲೂ, ಒಮ್ಮೆ ಕುತೂಹಲದಿಂದಲೂ ವ್ಯಕ್ತವಾಗುವುದು.

**ಕೋಷ್ಟಕ ೩.೪**

**ಮಾಹಿತಿದಾರರ ಧರ್ಮದ ವಿವರಣೆ**

| ಕ್ರ.ಸಂ | ಧರ್ಮ | ಒಟ್ಟು | ಪ್ರತಿಶತ (%) |
|---|---|---|---|
| ೧ | ಹಿಂದೂ ಧರ್ಮ | ೨೫೨ | ೮೪.೦೦ |
| ೨ | ಮುಸ್ಲಿಂ | ೦೩೪ | ೧೧.೩೩ |
| ೩ | ಕ್ರಿಶ್ಚಿಯನ್ | ೧೪ | ೦೪.೬೬ |
| | **ಒಟ್ಟು** | **೩೦೦** | **೧೦೦** |

ಮೇಲಿನ ೩.೪ ಪಟ್ಟಿಯ ಮಾಹಿತಿದಾರರಲ್ಲಿ ೮೪ ಪ್ರತಿಶತ ಮಾಹಿತಿದಾರರು ಹಿಂದೂ ಧರ್ಮದವರಾಗಿದ್ದು ಗರಿಷ್ಠ ಪ್ರಮಾಣದಲ್ಲಿದ್ದಾರೆ. ೧೧.೩೩ ಪ್ರತಿಶತ ಮಾಹಿತಿದಾರರು ಮುಸ್ಲಿಂ ಧರ್ಮದವರಾಗಿದ್ದಾರೆ, ೦೪.೬೬ ಪ್ರತಿಶತ ಮಾಹಿತಿದಾರರು ಕ್ರಿಶ್ಚಿಯನ್ ಧರ್ಮದವರಾಗಿದ್ದಾರೆ ಎಂಬುದು ಈ ವಿವರಣೆಯಿಂದ ತಿಳಿದು ಬರುತ್ತದೆ.

**ಮಾತೃ ಭಾಷೆ:**

ಮಾಹಿತಿ ಸಂಗ್ರಹಣೆಯಲ್ಲಿ ಭಾಷೆಯು ಸಹ ಪ್ರಮುಖವಾದ ಒಂದು ಅಂಶವಾಗಿದೆ. ಯಾವುದೇ ಒಬ್ಬ ವ್ಯಕ್ತಿಯು ತಾನು ಮಾತನಾಡುವ ಮಾತೃಭಾಷೆಯು ಬೇರೆ ಬೇರೆಯಾದರೂ ಸಹ ಏಕತೆಯಲ್ಲಿ, ಭಾವೈಕ್ಯತೆಯಲ್ಲಿ ಸಂವಿಧಾನಕ್ಕೆ ಬದ್ಧವಾಗಿ ನಡೆದುಕೊಳ್ಳುತ್ತಿದ್ದಾನೆ. ಮಾಹಿತಿದಾರರ ಭಾಷೆ ತಿಳಿಯುವುದು ಸಹ ಮುಖ್ಯವಾಗಿದ್ದು, ಈ ವಿಷಯವಾಗಿ ಕೋಷ್ಟಕ ೩.೫ ನ್ನು ನೋಡಿದಾಗ ತಿಳಿದು ಬರುತ್ತದೆ. **ಆಧಾರ: ಭಾರತದ ಸಂವಿಧಾನದ ಪುಸ್ತಕ.**

**ಕೋಷ್ಟಕ ೩.೫**

**ಮಾಹಿತಿದಾರರ ಮಾತೃ ಭಾಷೆ**

| ಕ್ರ ಸಂ. | ಭಾಷೆ | ಒಟ್ಟು | ಪ್ರತಿಶತ (%) |
|---|---|---|---|
| ೧ | ಕನ್ನಡ | ೨೦೯ | ೬೯.೬೬ |
| ೨ | ಮರಾಠಿ | ೧೬ | ೫.೩೩ |
| ೩ | ಉರ್ದು | ೩೭ | ೧೨.೩೩ |
| ೪ | ತೆಲುಗು | ೨೬ | ೮.೬೬ |
| ೫ | ತಮಿಳು | ೧೨ | ೪.೦೦ |
| | **ಒಟ್ಟು** | ೩೦೦ | ೧೦೦ |

ಮೇಲಿನ ಕೋಷ್ಟಕವನ್ನು ನೋಡಿದಾಗ ಅತಿ ಹೆಚ್ಚು ಮಾತೃಭಾಷೆ ಕನ್ನಡವನ್ನು ಮಾತನಾಡುವವರು ಪ್ರತಿಶತ ೬೯.೬೬ ಇರುವುದು ಕಂಡುಬಂದಿದೆ. ಅತಿ ಕಡಿಮೆ ಮಾತೃಭಾಷೆ ತಮಿಳು ಮಾತನಾಡುವವರು ಪ್ರತಿಶತ ೦೪ ಇರುವುದು ಕಂಡು ಬಂದಿದೆ. ೧೨.೩೩ ಪ್ರತಿಶತ ಉರ್ದು ಭಾಷೆಯನ್ನು ೮.೬೬ ಪ್ರತಿಶತರು ತೆಲಗು ಭಾಷೆಯನ್ನು ೫.೩೩ ಪ್ರತಿಶತ ಫಲಾನುಭವಿಗಳು ಮರಾಠಿ ಮಾತೃಭಾಷೆಯನ್ನಾಡುವವರಿರುವುದು ಕಂಡು ಬಂದಿದೆ.

**ಮಾಹಿತಿದಾರರ ವಿವಾಹದ ಮಾಹಿತಿ:**

ಕುಟುಂಬದಲ್ಲಿ ಕಂಡುಬರುವ ಎಲ್ಲಾ ಸಂಬಂಧಗಳನ್ನು ನಿರ್ದೇಶಿಸುವುದೇ ಮದುವೆಯಾಗಿದೆ, ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ ಅವರ ಸುತ್ತಲೂ ಸಾಮಾಜಿಕವಾದ, ಧಾರ್ಮಿಕವಾದ ಬಲೆಯನ್ನು, ಸ್ವಾರಸ್ಯವನ್ನು ಒದಗಿಸಿ ಕುಟುಂಬವನ್ನು ಸಾಮಾಜಿಕ ಸಂಧರ್ಭಕ್ಕೆ ಸಂಯೋಜಿಸಿ ಅದರ ವೈಶಿಷ್ಟ್ಯವನ್ನು ಉಳಿಸಿಕೊಡುವುದು ಮದುವೆಯಾಗಿದೆ. ಈ ದೃಷ್ಟಿಯಿಂದ ಮದುವೆಯನ್ನು ಕುಟುಂಬದ ಪೂರ್ವಸಿದ್ಧತೆ ಎನ್ನಬಹುದು. ಕುಟುಂಬ ಮತ್ತು ವಿವಾಹ ಯಾವುದೇ ಸಮಾಜದ ಮೂಲಭೂತ ಅವಶ್ಯ ಮತ್ತು ಅನಿವಾರ್ಯ ಸಂಸ್ಥೆಗಳು. ಇವು ಒಂದೇ ನಾಣ್ಯದ ಎರಡು ಮುಖಗಳಂತೆ ಪರಸ್ಪರ ಪೂರಕ. ಸ್ತ್ರೀ ಪುರುಷರು ಆ ಎರಡೂ ಸಂಸ್ಥೆಗಳ ಆಧಾರದ ಘಟಕಗಳು. ಕುಟುಂಬ ವ್ಯವಸ್ಥೆಗೆ ವಿವಾಹವೇ ಹೆಬ್ಬಾಗಿಲು, ವಿವಾಹ ಸಂಸ್ಥೆಗೆ ಕುಟುಂಬ ಪದ್ದತಿಯೇ ಅಡಿಗಲ್ಲು.

**ಕೋಷ್ಟಕ ೩.೬**

**ಮಾಹಿತಿದಾರರ ವಿವಾಹದ ಮಾಹಿತಿ**

| **ಕ್ರ.ಸಂ** | **ವಿವಾಹ** | **ಒಟ್ಟು** | **ಪ್ರತಿಶತ (%)** |
|---|---|---|---|
| ೧ | ವಿವಾಹಿತ | ೩೭ | ೧೨.೩೩ |
| ೨ | ಅವಿವಾಹಿತ | ೨೬ | ೮.೬೬ |
| ೩ | ವಿವಾಹಿತೆ | ೧೮೪ | ೬೧.೩೩ |
| ೪ | ಅವಿವಾಹಿತೆ | ೩೫ | ೧೧.೬೬ |
| ೫ | ವಿಧವೆ | ೧೮ | ೦೬.೦೦ |
| ೬ | ವಿಧುರ | ೦೦ | ೦೦೦ |
| | **ಒಟ್ಟು** | ೩೦೦ | ೧೦೦ |

ಮೇಲಿನ ಪಟ್ಟಿಯಲ್ಲಿ ೧೨.೩೩ ಪ್ರತಿಶತ ಮಾಹಿತಿದಾರರು ವಿವಾಹಿತ, ೮.೬೬ ಪ್ರತಿಶತ ಮಾಹಿತಿದಾರರು ಅವಿವಾಹಿತ, ೬೧.೩೩ ಪ್ರತಿಶತ ಮಾಹಿತಿದಾರರು ವಿವಾಹಿತೆ, ೧೧.೬೬ ಪ್ರತಿಶತ ಮಾಹಿತಿದಾರರು ಅವಿವಾಹಿತೆ. ೦೬.೦೦ ಪ್ರತಿಶತ ಮಾಹಿತಿದಾರರು ವಿಧವೆಯರಾಗಿದ್ದಾರೆ.

**ಕುಟುಂಬದ ಪ್ರಕಾರ :**

ಇತ್ತೀಚೆಗೆ ನಗರ ಪ್ರದೇಶದಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡು ಬರುತ್ತಿವೆ. ಆಧುನಿಕ ಕಾಲದಲ್ಲಿ ಅವಿಭಕ್ತ ಕುಟುಂಬಗಳು ಕಡಿಮೆಯಾಗಿ ವಿಭಕ್ತ ಕುಟುಂಬಗಳಾಗುತ್ತಿರುವುದನ್ನು ಕೆಳಗಿನ ಕೋಷ್ಟಕದಲ್ಲಿ ನಾವು ನೋಡಬಹುದಾಗಿದೆ,

**ಕೋಷ್ಟಕ ೩.೭**

**ಮಾಹಿತಿದಾರರ ಕುಟುಂಬದ ಪ್ರಕಾರದ ಬಗೆ**

| ಕ್ರ ಸಂ | ಕುಟುಂಬದ ಬಗೆ | ಒಟ್ಟು | ಪ್ರತಿಶತ (%) |
|---|---|---|---|
| ೧. | ವಿಭಕ್ತ ಕುಟುಂಬ | ೨೭೭ | ೯೨.೩೩% |
| ೨. | ಅವಿಭಕ್ತ ಕುಟುಂಬ | ೨೩ | ೭.೬೬% |
| | **ಒಟ್ಟು** | ೩೦೦ | ೧೦೦% |

ಮೇಲಿನ ಪಟ್ಟಿಯಲ್ಲಿ ಅತಿ ಹೆಚ್ಚಿನ ಜನರು ವಿಭಕ್ತ ಕುಟುಂಬದಲ್ಲಿ ೯೨.೩೩ ಪ್ರತಿಶತ ಮಾಹಿತಿದಾರರು ವಾಸಿಸುತ್ತಿರುವುದು ಕಂಡು ಬರುತ್ತದೆ. ೭.೬೬ ಪ್ರತಿಶತ ಜನರು ಅವಿಭಕ್ತ ಕುಟುಂಬದಲ್ಲಿ ವಾಸಿಸುತ್ತಿರುವರು. ಇದು ಸಮಾಜದ ಆಧುನೀಕರಣ ಕೈಗಾರೀಕರಣದ ಪ್ರಭಾವವಾಗಿದೆ.

**ಕುಟುಂಬದ ಗಾತ್ರ :**

ಕುಟುಂಬದ ರಚನೆ ಮತ್ತು ಅದರಲ್ಲಿ ವಾಸಿಸುವ ಜನರ ಸಂಖ್ಯೆಯ ಆಧಾರದ ಮೇಲೆ ಕುಟುಂಬಗಳನ್ನು ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬ ಎಂದು ಎರಡು ವಿಧಗಳಾಗಿ ವಿಂಗಡಿಸಬಹುದು, ಎಸ್.ಜೆ.ಎಸ್.ಆರ್.ವೈ ಯೋಜನೆಯ ಫಲಾನುಭವಿಗಳ ಕುಟುಂಬದ ಗಾತ್ರವನ್ನು ತಿಳಿದು ಕೊಳ್ಳುವುದು ಸಹ ಅತ್ಯವಶ್ಯಕವಾಗಿದ್ದು , ಕೋಷ್ಟಕ-೩.೮ ರಲ್ಲಿ ನೋಡಬಹುದು :

**ಕೋಷ್ಟಕ ೩.೮**

**ಮಾಹಿತಿದಾರರ ಕುಟುಂಬದ ಗಾತ್ರ**

| ಗಾತ್ರ | ಫಲಾನುಭವಿಗಳು | ಶೇಕಡ ವಾರು |
|---|---|---|
| ಇಬ್ಬರು ಸದಸ್ಯರು | ೧೯ | ೬.೩೩ |
| ಮೂವರು ಸದಸ್ಯರು | ೩೮ | ೧೨.೬೬ |
| ನಾಲ್ಕು ಸದಸ್ಯರು | ೧೧೩ | ೩೭.೬೬ |
| ಐದು ಸದಸ್ಯರು | ೧೧೯ | ೩೯.೬೬ |
| ಆರು ಸದಸ್ಯರು | ೦೮ | ೨.೬೬ |
| ಏಳು ಸದಸ್ಯರು | ೦೩ | ೦.೦೧% |
| **ಒಟ್ಟು** | ೩೦೦ | ೧೦೦% |

ಮೇಲಿನ ಕೋಷ್ಠಕವನ್ನು ಅವಲೋಕಿಸಿದಾಗ ಫಲಾನುಭವಿಗಳ ಕುಟುಂಬದ ಗಾತ್ರವು ಅತಿ ಹೆಚ್ಚು ೩೯.೬೬ ಪ್ರತಿಶತ ಐದು ಸದಸ್ಯರ ಗಾತ್ರವನ್ನು, ೩೭.೬೬ ಪ್ರತಿಶತ ಕುಟುಂಬದಲ್ಲಿ ನಾಲ್ಕು ಸದಸ್ಯರನ್ನು, ಅತಿ ಕಡಿಮೆ ೦.೦೧ ಪ್ರತಿಶತರು ಏಳು ಸದಸ್ಯರನ್ನು ಹೊಂದಿದ ಕುಟುಂಬಗಳಿದ್ದು, ಇದರಿಂದ ನಗರದಲ್ಲಿ ಕುಟುಂಬದ ಗಾತ್ರವು ಸಹ ಕಡಿಮೆಯಾಗುತ್ತಿರುವುದು ಕಂಡು ಬರುತ್ತದೆ. ಅದನ್ನು ಈ ಅಂಕಿ ಅಂಶಗಳು ಪುಷ್ಠೀಕರಿಸುತ್ತವೆ.

**ಕುಟುಂಬದ ಮುಖ್ಯಸ್ಥರ ಬಗ್ಗೆ:**

ಭಾರತೀಯ ಸಮಾಜದಲ್ಲಿ ಕುಟುಂಬಕ್ಕೆ ತನ್ನದೇ ಆದ ಮಹತ್ವದ ಪಾತ್ರವಿದೆ. ಪ್ರತಿಯೊಂದು ಕುಟುಂಬಕ್ಕೂ ಹೆಣ್ಣಿರಲಿ ಅಥವಾ ಗಂಡಿರಲಿ ಮುಖ್ಯಸ್ಥರೊಬ್ಬರು ಇರುತ್ತಾರೆ ಇವರಿಂದ ಮಾತ್ರ ಕುಟುಂಬದ ಮೇಲ್ವಿಚಾರಣೆ ನಡೆಯುತ್ತಿರುತ್ತದೆ. ಸಾಮಾಜಿಕ ಸಂಶೋಧನೆಯ ಮಾಹಿತಿ ಸಂಗ್ರಹಣೆಯಲ್ಲಿ ಕಲೆಹಾಕಲಾದ ವಿವರಗಳನ್ನು ಈ ಕೆಳಗಿನ ಕೋಷ್ಟಕ ೩.೯ ದಲ್ಲಿ ತೋರಿಸಲಾಗಿದೆ.

**ಕೋಷ್ಟಕ ೩.೯**

**ಕುಟುಂಬದ ಮುಖ್ಯಸ್ಥರು**

| ಕ್ರಸಂ | ಮುಖ್ಯಸ್ಥರು | ಒಟ್ಟು | ಪ್ರತಿಶತ (%) |
|---|---|---|---|
| ೧ | ಪುರುಷ | ೨೨೧ | ೭೩.೬೬ |
| ೨ | ಮಹಿಳೆ | ೦೭೯ | ೨೬.೩೩ |
| | **ಒಟ್ಟು** | **೩೦೦** | **೧೦೦** |

ಭಾರತೀಯ ಸಮಾಜದಲ್ಲಿ ಮಾನವನ ಸಾಮಾಜೀಕರಣಕ್ಕೆ ಕುಟುಂಬವು ಅತೀ ಮಹತ್ವದ ಪಾತ್ರವನ್ನು ವಹಿಸುತ್ತದೆ. ಪ್ರತಿಯೊಂದು ಕುಟುಂಬದಲ್ಲಿ ಮುಖ್ಯಸ್ಥರೊಬ್ಬರು (ಯಜಮಾನ) ಇರುತ್ತಾರೆ, ಮುಖ್ಯಸ್ಥರಲ್ಲಿ ಮಹಿಳೆಯೂ ಇರಬಹುದು ಅಥವಾ ಪುರುಷರು ಕೂಡಾ ಇರಬಹುದು, ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ೭೩.೬೬ ಪ್ರತಿಶತ ಪುರುಷರು, ೨೬.೩೩ ಪ್ರತಿಶತ ಮಹಿಳೆಯರು ಕುಟುಂಬದ ಮುಖ್ಯಸ್ಥರಾಗಿ ಕೆಲಸ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ.

**ವಾಸದ ವಿವರ:**

ಪ್ರತಿಯೊಂದು ಜೀವಿಗೂ ವಾಸಿಸುವುದಕ್ಕೆ ತನ್ನದೇ ಆದ ಗುರುತರವಾದ ಒಂದು ಸ್ಥಳವೆಂಬುವುದು ಇರುವುದನ್ನು ನಾವು ಕಾಣುತ್ತೇವೆ, ಭೂ ಮಂಡಲದಲ್ಲಿ ವಾಸಿಸುವ ಮಾನವ, ಪಕ್ಷಿ, ಪ್ರಾಣಿ ಹಾಗೂ ಇತರೆ ಉಭಯವಾಸಿಗಳು ಸಹ ಒಂದಿಲ್ಲೊಂದು ರೀತಿಯಲ್ಲಿ ತನ್ನದೇ ಆದ ಸ್ಥಳವನ್ನು ವಾಸಿಸುವುದಕ್ಕೆ ನಿಗದಿ ಪಡಿಸಿಕೊಂಡು ವಾಸಿಸುವುದನ್ನು ಕಾಣುತ್ತೇವೆ, ಅದರಂತೆ ಮಾನವರು ಇತರೆ ಎಲ್ಲಾ

ಜೀವಿಗಳಿಗೂ ಮಿಗಿಲಾಗಿ ತನ್ನದೇ ಆದ ಶಾಶ್ವತವಾದ ನೆಲೆಯನ್ನು (ಮನೆಯನ್ನು) ಕಟ್ಟಿಕೊಂಡು ಸಮಾಜದಲ್ಲಿ ಬದುಕುತ್ತಿದ್ದಾರೆ. ಇಂದು ಆಧುನೀಕರಣ ಬೆಳೆದಂತೆ ಮಾನವ ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಬಂದು ನಗರದ ಸಂಸ್ಕೃತಿಗೆ ಹೊಂದಿಕೊಂಡು ಒಂದು ನೆಲೆಯನ್ನು ಮಾಡಿಕೊಂಡು ಜೀವಿಸುತ್ತಿದ್ದಾನೆ.

**ಕೋಷ್ಠಕ–೩.೧೦**

**ಮಾಹಿತಿದಾರರ ವಾಸದ ವಿವರ**

| **ಕ್ರಸಂ** | **ವಾಸದ ವಿವರ** | **ಒಟ್ಟು** | **ಪ್ರತಿಶತ (%)** |
|---|---|---|---|
| ೧ | ಗುಡಿಸಲು | – | – |
| ೨ | ಹಂಚಿನ ಮನೆ | ೨೦೨ | ೬೭.೩೩ |
| ೩ | ಮಣ್ಣಿನ ಮನೆ | – | – |
| ೪ | ಆರ್‌ಸಿಸಿ ಮನೆ | ೫೬ | ೧೮.೬೬ |
| ೫ | ಶೀಟಿನ ಮನೆ | ೪೨ | ೧೪.೦೦ |
| | **ಒಟ್ಟು** | **೩೦೦** | **೧೦೦** |

ಮೇಲಿನ ಪಟ್ಟಿಯಲ್ಲಿ ಮಾಹಿತಿದಾರರ ವಾಸದ ವಿವರವನ್ನು ಅವಲೋಕಿಸಿದಾಗ ೬೭.೩೩% ಜನರು ಹಂಚಿನ ಮನೆಯಲ್ಲಿ ವಾಸಿಸುವುದು, ಪ್ರತಿಶತ ೧೮.೬೬ ಜನರು ಆರ್‌ಸಿಸಿ ಮನೆಯಲ್ಲಿ ಮತ್ತು ೧೪.೦೦% ಪ್ರತಿಶತ ಜನರು ಶೀಟಿನ ಮನೆಯಲ್ಲಿ ವಾಸಿಸುತ್ತಿರುವುದು ಕಂಡು ಬರುತ್ತದೆ.

**ಕುಟುಂಬದ ಸ್ಥಿತಿಗತಿಯ ವಿವರಣೆ:**

ವ್ಯಕ್ತಿಗಳು ಯಾವ ರೀತಿಯಾಗಿ ಮನೆಯಲ್ಲಿ ವಾಸಿಸುತ್ತಿರುವರು ಎಂಬುದರ ಆಧಾರದ ಮೇಲೆ ಅವರ ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಬಹುದು. ವ್ಯಕ್ತಿಯ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ಆಶ್ರಯಕ್ಕೆ ಮನೆಯು ಅವಶ್ಯಕವಾಗಿದೆ. ಆಧುನಿಕ ಕಾಲದಲ್ಲಿ ಮನೆಯ ನಿರ್ಮಾಣವು ಅತಿ ದುಬಾರಿಯಾಗಿದೆ.

**ಕೋಷ್ಠಕ ೩.೧೧**

**ಮಾಹಿತಿದಾರರ ಕುಟುಂಬದ ಸ್ಥಿತಿಗತಿ**

| **ಕ್ರಸಂ** | **ಕುಟುಂಬದ ಸ್ಥಿತಿಗತಿ** | **ಒಟ್ಟು** | **ಪ್ರತಿಶತ (%)** |
|---|---|---|---|
| ೧ | ಸ್ವಂತ ಮನೆ | ೨೫೬ | ೮೫.೩೩ |
| ೨ | ಬಾಡಿಗೆ ಮನೆ | ೪೪ | ೧೪.೬೬ |
| | ಒಟ್ಟು | ೩೦೦ | ೧೦೦ |

ಕೋಷ್ಟಕ ೩.೧೧ ರಲ್ಲಿ ಒಟ್ಟು ೩೦೦ ಮಾಹಿತಿದಾರರಲ್ಲಿ ವಾಸಿಸುವ ಮನೆಯ ಸ್ಥಿತಿಗತಿಯನ್ನು ಪರಿಶೀಲಿಸಿದಾಗ ೮೫.೩೩ ಪ್ರತಿಶತ ಜನರು ಸ್ವಂತ ಮನೆಯಲ್ಲಿ, ೧೪.೬೬ ಪ್ರತಿಶತ ಜನರು ಬಾಡಿಗೆ ಮನೆಯಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ.

**ಮಾಹಿತಿದಾರರ ಮನೆಯ ಚದರ ಅಡಿ:**

ಸರ್ಕಾರವು ನಗರ ಪ್ರದೇಶದಲ್ಲಿ ವಾಸಿಸುವ ಜನರ ಜೀವನ ಮಟ್ಟವನ್ನು ಅಂದರೆ ಬಡತನ ರೇಖೆಗಿಂತ ಕೆಳಗಿನ ಮತ್ತು ಬಡತನ ರೇಖೆಗಿಂತ ಮೇಲಿನ ಕುಟುಂಬಗಳನ್ನು ಗುರುತಿಸಲು ಆದಾಯದ ನಂತರ ಆಯಾ ಪ್ರದೇಶದಲ್ಲಿ ವಾಸಿಸುವ ಕುಟುಂಬದ ಮನೆಯ ವಿಸ್ತೀರ್ಣವನ್ನು ನಿಗದಿಪಡಿಸಿರುವುದು ಕಂಡು ಬರುತ್ತದೆ. ಆರು ನೂರು ಚದರ ಅಡಿ ಪ್ರದೇಶದಲ್ಲಿ ಮನೆಯಿದ್ದರೆ ಮತ್ತು ನಿಗದಿಪಡಿಸಿರುವ ವಾರ್ಷಿಕ ಆದಾಯದೊಳಗಿದ್ದರೆ ಬಿಪಿಎಲ್ ಕುಟುಂಬವೆಂದು, ಆರು ನೂರು ಚದುರ ಅಡಿ ಪ್ರದೇಶಕ್ಕಿಂತ ಹೆಚ್ಚಿನ ವಿಸ್ತೀರ್ಣದ ಮನೆಯನ್ನು ಹೊಂದಿದ್ದು, ಸರ್ಕಾರವು ನಿಗದಿಪಡಿಸಿರುವ ಆದಾಯ ಪ್ರಮಾಣಕ್ಕಿಂತ ಹೆಚ್ಚಿದ್ದರೆ ಆ ಕುಟುಂಬವನ್ನು ಏಪಿಎಲ್ ಎಂದು ನಿಗದಿಪಡಿಸಿದೆ.

**ಕೋಷ್ಟಕ –೩.೧೨**

**ವಾಸಸ್ಥಳದ ವಿಸ್ತೀರ್ಣ**

| ಕ್ರಸಂ | ವಿಸ್ತೀರ್ಣ ಚದುರ ಅಡಿಗಳಲ್ಲಿ | ಒಟ್ಟು | ಪ್ರತಿಶತ (%) |
|---|---|---|---|
| ೧ | ೬೦೦ | ೩೦೦ | ೧೦೦ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕ ೩.೧೨ ರ ಪ್ರಕಾರ ೩೦೦ ಮಾಹಿತಿದಾರರಲ್ಲಿ ವಾಸಸ್ಥಳದ ವಿಸ್ತೀರ್ಣ ೩೦೦ ಪ್ರತಿಶತ ಮಾಹಿತಿದಾರರು ೬೦೦ ಚದರ ಅಡಿಗಿಂತ ಕಡಿಮೆ ವಿಸ್ತೀರ್ಣದ ಮನೆಯಲ್ಲಿ ವಾಸಿಸುವರಿದ್ದಾರೆ, ಅದೇ ರೀತಿ ಪ್ರತಿಯೊಂದು ಮನೆಯವರು ಸಹ ವಿದ್ಯುಚ್ಛಕ್ತಿ ಸಂಪರ್ಕವನ್ನು ಹೊಂದಿರುವುದನ್ನು ಕಾಣುತ್ತೇವೆ.

**ಪಡಿತರ ಚೀಟಿಯನ್ನು ಹೊಂದಿರುವವರ ವಿವರ:**

ಒಟ್ಟು ೩೦೦ ಮಾಹಿತಿದಾರರಲ್ಲಿ ಪಡಿತರ ಚೀಟಿಯನ್ನು ಹೊಂದಿರುವವರ ಸಂಖ್ಯೆಯನ್ನು ಸಂಗ್ರಹಿಸಿದಾಗ ಕಂಡು ಬಂದ ಅಂಕಿ ಅಂಶಗಳ ಪ್ರಕಾರ ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಬಡತನ ರೇಖೆಗಿಂತ ಕೆಳಗೆ ವಾಸಿಸುವ ಜನರು ಪಡಿತರ ಚೀಟಿಯನ್ನು ಹೊಂದಿರುವುದನ್ನು ಕಾಣಬಹುದು.

**ಕುಡಿಯುವ ನೀರಿನ ಸೌಕರ್ಯ :**

ಮಾನವನಿಗೆ ಗಾಳಿ, ಬೆಳಕು, ವಸತಿ, ಬಟ್ಟೆ ಆಹಾರ, ಎಷ್ಟು ಮುಖ್ಯವೋ ಅಷ್ಟೇ ನೀರು ಅತ್ಯಂತ ಪ್ರಮುಖವಾದುದು, ಇಂದು ಮಾನವ ಶುದ್ಧ ನೀರನ್ನು ಕುಡಿಯಲು ಹರಸಾಹಸ ಮಾಡುತ್ತಿರುವುದನ್ನು ನಾವು ನೋಡುತ್ತೇವೆ. ಕುಡಿಯುವ ನೀರು ವ್ಯಕ್ತಿಯ ಆರೋಗ್ಯ ಮಟ್ಟವನ್ನು ನಿರ್ಧರಿಸುತ್ತದೆ. ಇವತ್ತು ಎಲ್ಲ ನಗರಗಳಲ್ಲಿ ನೀರಿಗಾಗಿ ಜನ ಪರದಾಡುತ್ತಿರುವುದನ್ನು ಕಾಣುತ್ತೇವೆ.

**ಕೋಷ್ಟಕ –೩.೧೩**

**ಕುಡಿಯುವ ನೀರಿನ ವಿವರ**

| ಕ್ರಸಂ | ನೀರಿನ ಸೌಕರ್ಯ | ಒಟ್ಟು | ಪ್ರತಿಶತ (%) | ಮೀಟರ್ ಇದೆ | ಪ್ರತಿಶತ (%) | ಮೀಟರ್ ಇಲ್ಲಾ | ಪ್ರತಿಶತ (%) |
|---|---|---|---|---|---|---|---|
| ೧ | ಬಾವಿ | ೦ | ೦ | ೦ | ೦ | ೦ | ೦ |
| ೨ | ಕೊಳವೆ ಬಾವಿ | ೩೧ | ೧೦.೩೩ | ೦ | ೦ | ೦ | ೦ |
| ೩ | ವೈಯಕ್ತಿಕ ನಳ | ೧೨೮ | ೪೨.೬೬ | ೪೯ | ೩೮.೨೮% | ೭೯ | ೬೧.೭೧% |
| ೪ | ಸಾರ್ವಜನಿಕನಳ | ೧೧೬ | ೩೮.೬೬ | ೦ | ೦ | ೦ | ೦ |
| ೫ | ನಿರಂತರ ನೀರು | ೨೫ | ೮.೩೩ | ೨೫ | ೧೦೦ | ೦ | ೦ |
| | **ಒಟ್ಟು** | **೩೦೦** | **೧೦೦%** | | | | |

ಮೇಲಿನ ಪಟ್ಟಿಯ ಪ್ರಕಾರ ೧೦.೩೩ ಪ್ರತಿಶತ ಮಾಹಿತಿದಾರರು ಕೊಳವೆ ಬಾವಿ ನೀರನ್ನು, ೪೨.೬೬ ಪ್ರತಿಶತ ಮಾಹಿತಿದಾರರು ವೈಯಕ್ತಿಕ ನಳ ಸಂಪರ್ಕವನ್ನು ಪಡೆದಿದ್ದು, ಇದರಲ್ಲಿ ೩೮.೨೮ ಪ್ರತಿಶತ ಜನರು ಮೀಟರ್ ಹೊಂದಿದವರಾಗಿದ್ದಾರೆ, ೩೮.೬೬ ಪ್ರತಿಶತ ಜನರು ಸಾರ್ವಜನಿಕ ನಳದಿಂದ ಉಪಯೋಗಿಸುತ್ತಿರುವುದು ಕಂಡು ಬಂದಿದೆ, ೮.೩೩ ಪ್ರತಿಶತ ಜನರು ವಿಶ್ವ ಬ್ಯಾಂಕ್ ಯೋಜನೆ ಅಡಿ ಜಾರಿಯಾಗಿರುವ ನಿರಂತರ ನೀರು ಯೋಜನೆ ಅಡಿ ನೀರನ್ನು ಪಡೆಯುತ್ತಿದ್ದು ತುಂಬಾ ಸಂತೋಷದಿಂದ ಇದ್ದಾರೆ. ಹುಬ್ಬಳ್ಳಿ–ಧಾರವಾಡ ನಗರದಲ್ಲಿ ಈ ನಿರಂತರ ನೀರು ಯೋಜನೆ ಅಡಿಯಲ್ಲಿ ಸಂಪರ್ಕ ಪಡೆದ ಎಲ್ಲಾ ಜನರು ಸಂತೋಷದಿಂದಿದ್ದಾರೆ. ನಿರಂತರ ನೀರು ಯೋಜನೆಯನ್ನು ಜಾರಿಗೊಳಿಸಿರುವ ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಗೆ ಕೇಂದ್ರ ಸರ್ಕಾರವು ರಾಷ್ಟ್ರೀಯ ನಗರ ನೀರು ಪುರಸ್ಕಾರವನ್ನು

ನೀಡಿದೆ.[೨] (ಮಾಹಿತಿ : ಕೆಯುಐಡಿಎಫ್‌ಸಿ ಇಲಾಖೆ. ಹುಬ್ಬಳ್ಳಿ. ವರ್ಷ–೨೦೧೦). ವಿಜಯ ಕರ್ನಾಟಕ ಪತ್ರಿಕೆ ದಿನಾಂಕ:೧೫.೮.೨೦೦೯.

**ಶೌಚಾಲಯ:**

ಭಾರತ ಸರ್ಕಾರವು ನೈರ್ಮಲ್ಯೀಕರಣಕ್ಕೆ ಅದರಲ್ಲೂ ನಗರ ಪ್ರದೇಶದದಲ್ಲಿ ಅತಿ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತಾ ಬಂದಿದೆ, ನೈರ್ಮಲ್ಯ ಮುಕ್ತ ಭಾರತಕ್ಕಾಗಿ ಮಾಹಿತಿ, ಶಿಕ್ಷಣ, ಸಂವಹನದ ಮೂಲಕ ಜನರಿಗೆ ತಿಳುವಳಿಕೆ ನೀಡಲು ಕೋಟ್ಯಂತರ ರೂಪಾಯಿ ಹಣವನ್ನು ಖರ್ಚು ಮಾಡುತ್ತಿದೆ.

**ಕೋಷ್ಟಕ–೩.೧೪**

**ಶೌಚಾಲಯದ ಮಾಹಿತಿ**

| ಕ್ರಸಂ | ಶೌಚಾಲಯ | ಒಟ್ಟು | ಪ್ರತಿಶತ | ಒಳಚರಂಡಿ ಸಂಪರ್ಕ | ಸೆಪ್ಟಿಕ್ ಟ್ಯಾಂಕ್ | ಪ್ರತಿಶತ (%) |
|---|---|---|---|---|---|---|
| ೧ | ವೈಯಕ್ತಿಕ | ೨೪೪ | ೮೧.೩೩ | ೪೧(೧೬.೮೦) | ೨೦೩ | ೮೩.೧೯ |
| ೨ | ಸಾರ್ವಜನಿಕ | ೨೭ | ೯.೦೦ | – | – | – |
| ೩ | ಬಯಲು | ೨೯ | ೯.೬೬ | – | – | – |
| | **ಒಟ್ಟು** | ೩೦೦ | ೧೦೦ | – | – | – |

ಮೇಲಿನ ಪಟ್ಟಿಯ ಪ್ರಕಾರ ೮೧.೩೩ ಮಾಹಿತಿದಾರರು ವೈಯಕ್ತಿಕ ಶೌಚಾಲಯವನ್ನು, ೯.೦೦ ಪ್ರತಿಶತ ಜನರು ಸಾರ್ವಜನಿಕ ಶೌಚಾಲಯವನ್ನು ಉಪಯೋಗಿಸುತ್ತಿರುವುದು, ೯.೨೨ ಪ್ರತಿಶತ ಜನರು ಬಯಲು ಶೌಚಾಲಯವನ್ನು ಉಪಯೋಗಿಸುತ್ತಿರುವುದು ಕಂಡು ಬರುತ್ತದೆ. ವೈಯಕ್ತಿಕ ಶೌಚಾಲಯವನ್ನು ಹೊಂದಿರುವ ಪ್ರತಿಶತ ೮೧.೩೩ ರಲ್ಲಿ ೧೬.೮೦ ಪ್ರತಿಶತ ಜನರು ಒಳಚರಂಡಿ ಸಂಪರ್ಕವನ್ನು ೮೩.೧೯ ಪ್ರತಿಶತ ಜನರು ಸೆಪ್ಟಿಕ್ ಟ್ಯಾಂಕ್ ಹೊಂದಿರುವುದು ಕಂಡು ಬರುತ್ತದೆ. (ಮಾಹಿತಿ: ಕೆಯುಐಡಿಎಫ್‌ಸಿ ಇಲಾಖೆ, ಹುಬ್ಬಳ್ಳಿ, ವರ್ಷ–೨೦೧೦).

**ಪ್ರಾಣಿಗಳ ವಿವರ:**

ಸಮಾಜದಲ್ಲಿ ಸಮತೋಲನ ಕಾಪಾಡಲು ಸಾಮಾನ್ಯವಾಗಿ ಮಾನವನಷ್ಟೇ ಪ್ರಾಣಿಗಳು ಸಹ ಅತಿ ಮುಖ್ಯವಾಗಿವೆ. ಅದರಲ್ಲೂ ಮಾನವ ಸಾಕು ಪ್ರಾಣಿಗಳು ಮಾನವನ ಆರ್ಥಿಕ ಅಭಿವೃದ್ಧಿಗೂ ಸಹಕಾರಿಯಾಗಿರುವುದನ್ನು ನೋಡಬಹುದು. ಹಾಗೆಯೇ ಮಾಹಿತಿದಾರರು ಹೊಂದಿರುವ ಪ್ರಾಣಿಗಳ ಬಗ್ಗೆ ತಿಳಿಯುವುದು ಅವಶ್ಯಕವಾಗಿದೆ. ಆಧುನಿಕ ಸಮಾಜದಲ್ಲಿ ಪ್ರಾಣಿಗಳ ರಕ್ಷಣೆಗೂ ಹಲವಾರು ನೀತಿ ನಿಯಮಗಳು ಕಟ್ಟುಪಾಡುಗಳಿರುವುದನ್ನು ಕಾಣುತ್ತೇವೆ. ಹಾಗೆಯೇ ಪ್ರಾಣಿಗಳ

ರಕ್ಷಣೆಗಾಗಿ ಪ್ರಾಣಿ ದಯಾ ಸಂಘಗಳು ತಲೆಯತ್ತಿ ನಿಂತು ಪ್ರಾಣಿಗಳ ಹಕ್ಕುಗಳ ರಕ್ಷಣೆ ಮಾಡುತ್ತಿವೆ.

**ಕೋಷ್ಟಕ–೩.೧೫**

**ಪ್ರಾಣಿಗಳ ಪಟ್ಟಿ**

| ಕ್ರಸಂ | ವಿವರ | ಒಟ್ಟು | ಪ್ರತಿಶತ (%) |
|---|---|---|---|
| ೧ | ಹಸು | ೨೩ | ೭.೬೬ |
| ೨ | ಎಮ್ಮೆ | ೧೧ | ೩.೬೬ |
| ೩ | ಕುರಿ | ೦೧೭ | ೫.೬೬ |
| ೪ | ಮೇಕೆ | ೧೧ | ೩.೬೬ |
| ೫ | ಹಂದಿ | ೦೭ | ೨.೩೩ |
| ೬ | ಕೋಳಿ /ಹುಂಜ | ೧೩ | ೪.೩೩ |
| ೭ | ಕತ್ತೆ | ೦೦ | ೦೦೦ |
| ೮ | ಯಾವುದೂ ಇಲ್ಲ | ೨೧೮ | ೭೨.೬೬ |
| | **ಒಟ್ಟು** | **೩೦೦** | **೧೦೦%** |

ಈ ಮೇಲಿನ ಪಟ್ಟಿಯನ್ನು ನೋಡಿದಾಗ ೭೨.೬೬ ಪ್ರತಿಶತ ಜನರು ನಗರ ಪ್ರದೇಶದಲ್ಲಿ ಯಾವುದೇ ಪ್ರಾಣಿಗಳನ್ನು ಹೊಂದಿಲ್ಲದಿರುವುದು ಕಂಡುಬಂದಿದೆ, ೭.೬೬ ಪ್ರತಿಶತ ಜನರು ಹಸುವನ್ನು, ೩.೬೬ ಪ್ರತಿಶತ ಜನರು ಎಮ್ಮೆಯನ್ನು, ೫.೬೬ ರಷ್ಟು ಜನರು ಕುರಿಗಳನ್ನು, ೩.೬೬ ರಷ್ಟು ಜನರು ಮೇಕೆಯನ್ನು, ೨.೩೩ ರಷ್ಟು ಜನರು ಹಂದಿಯನ್ನು, ೪.೩೩ ಪ್ರತಿಶತ ಜನರು ಕೋಳಿ/ಹುಂಜಗಳನ್ನು ಸಾಕಾಣಿಕೆ ಮಾಡುತ್ತಿರುವುದು ಕಂಡು ಬಂದಿದೆ.

**ಯೋಜನೆಗೆ ಫಲಾನುಭವಿಗಳಾಗುವ / ಸೇರುವ ಮೊದಲು ಮಾಹಿತಿದಾರರ ವೃತ್ತಿ :–**

ಮಾಹಿತಿದಾರರ ಉದ್ಯೋಗಕ್ಕೆ ಸಂಬಂಧಿಸಿದಂತೆ ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರುವ ಮೊದಲು ಯಾವ ವೃತ್ತಿಯನ್ನು ಮಾಡುತ್ತಿದ್ದರು ಎಂಬುವುದನ್ನು ತಿಳಿದು ಕೊಳ್ಳುವ ಸಲುವಾಗಿ ಪ್ರಶ್ನೆಯನ್ನು ಕೇಳಲಾಯಿತು. ಅವರಿಂದ ಬಂದ ಮಾಹಿತಿಯನ್ನು ಈ ಕೆಳಗಿನ ಕೋಷ್ಟಕ ೩.೧೬ರಲ್ಲಿ ನೀಡಲಾಗಿದೆ.

**ಕೋಷ್ಟಕ– ೩.೧೬**

**ಫಲಾನುಭವಿಗಳಾಗುವ ಮೊದಲು ಮಾಹಿತಿದಾರರ ವೃತ್ತಿ**

| ಕ್ರ.ಸಂ | ಉದ್ಯೋಗದಹೆಸರು | ಒಟ್ಟು | ಪ್ರತಿಶತ (%) |
|---|---|---|---|
| ೧. | ಹೌಸ್ ವೈಫ್ | ೧೫೧ | ೫೦.೩೩ |
| ೨. | ಕೂಲಿ | ೧೧೪ | ೩೮.೦೦ |
| ೩. | ಸಣ್ಣ ವ್ಯಾಪಾರ | ೨೬ | ೮.೬೬ |
| ೪. | ಯಾವುದೂ ಇಲ್ಲ | ೦೯ | ೩.೦೦ |
| ೫. | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ತಿಳಿದು ಬರುವುದೇನೆಂದರೆ ಪ್ರತಿಶತ ೫೦.೩೩ ಜನರು ಹೌಸ್‌ವೈಫ್ ಆಗಿರುವುದು, ಪ್ರತಿಶತ ೩೮.೦೦ ಜನರು ಕೂಲಿ ಕೆಲಸವನ್ನು ಮಾಡುತ್ತಿದ್ದುದು, ೮.೬೬ ಪ್ರತಿಶತ ಜನರು ಸಣ್ಣ ವಾಪಾರಗಳನ್ನು ನಡೆಸುತ್ತಿದ್ದುದು, ಪ್ರತಿಶತ ೩.೦೦ ರಷ್ಟು ಜನರು ಯಾವುದೇ ಕೆಲಸಗಳನ್ನು ನಿರ್ವಹಿಸದೇ ಇದ್ದುದು ಕೋಷ್ಟಕವನ್ನು ಅವಲೋಕಿಸಿದಾಗ ಕಂಡು ಬಂದಿದೆ. ಮುಂದೆ ಈ ಯೋಜನೆಯು ಜಾರಿಯಾದ ನಂತರ ಎಷ್ಟು ಜನರು ಇದರ ಪ್ರಯೋಜನ ಹಾಗೂ ವಿವಿಧ ಉದ್ಯೋಗಗಳನ್ನು ಕೈಗೊಂಡಿದ್ದಾರೆ ಎಂಬುದನ್ನು ಮುಂದೆ ಕೈಗೊಳ್ಳುವ ಅಧ್ಯಯನದಿಂದ ತಿಳಿಯಲಾಗುವುದು.

**ಯೋಜನೆಯ ಫಲಾನುಭವಿಯಾಗುವ ಮೊದಲು ಸಾಲವನ್ನು ಪಡಯುತ್ತಿದ್ದ ಬಗೆ:**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆ ಅಡಿಯಲ್ಲಿ ಫಲಾನುಭವಿಯಾಗುವುದಕ್ಕಿಂತ ಹಿಂದೆ ಜನರು ಸಾಲ ಪಡೆಯುತ್ತಿದ್ದ ವಿವರಗಳನ್ನು ತಿಳಿಯುವುದರಿಂದ ಪ್ರಸ್ತುತ ಜಾರಿಯಲ್ಲಿರುವ ಯೋಜನೆಯಿಂದ ಜನರಿಗೆ ಆಗುತ್ತಿರುವ ಅನುಕೂಲ ಎರಡನ್ನು ತಾಳೆ ಮಾಡುವ ದೃಷ್ಟಿಯಿಂದ ಪ್ರಶ್ನೆಯನ್ನು ಕೇಳಲಾಗಿ ಮಾಹಿತಿಯನ್ನು ಕೋಷ್ಟಕ ೩.೧೭ ರಲ್ಲಿ ಸಂಗ್ರಹಿಸಲಾಗಿದೆ.

ಕೋಷ್ಟಕ–೩.೧೭

ಸಾಲವನ್ನು ಪಡೆಯುತ್ತಿದ್ದ ಬಗೆ:

| ಕ್ರ.ಸಂ | ಸಾಲದ ಬಗೆ | ಒಟ್ಟು | ಪ್ರತಿಶತ (%) |
|---|---|---|---|
| ೧. | ಬ್ಯಾಂಕ್ | ೦೦ | ೦೦ |
| ೨. | ಲೇವಾದೇವಿಗಾರರು | ೭೪ | ೨೪.೬೬ |
| ೩. | ಸ್ನೇಹಿತರು | ೪೩ | ೧೪.೩೩ |
| ೪. | ಸಾಲ ಮಾಡಿಲ್ಲ | ೧೨೬ | ೪೨.೦೦ |
| ೫. | ಸ್ತ್ರಿ ಶಕ್ತಿ ಸಂಘ | ೪ | ೧.೩೩ |
| ೬. | ಚೀಟಿ ವ್ಯವಹಾರ | ೩೪ | ೧೧.೩೩ |
| ೭. | ಸಂಬಂಧಿಕರು | ೧೯ | ೬.೩೩ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಎಸ್.ಜೆ.ಎಸ್.ಆರ್.ವೈ ಯೋಜನೆಗೆ ಸೇರುವುದಕ್ಕೆ ಮುಂಚೆ ಜನರು ವಿವಿಧ ಮೂಲಗಳಿಂದ ಸಾಲವನ್ನು ಪಡೆಯುತ್ತಿದ್ದುದು ಮೇಲಿನ ಅಂಕಿ ಅಂಶಗಳಿಂದ ತಿಳಿದು ಬಂದಿದೆ. ಪ್ರತಿಶತ ೪೨ ರಷ್ಟು ಜನರು ಯಾವುದೇ ಸಾಲವನ್ನು ಮಾಡದಿರುವುದು ಅಂಕಿ ಅಂಶಗಳಿಂದ ತಿಳಿದು ಬಂದಿದೆ.

**೩.೨. ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯಲ್ಲಿ ರಚಿಸಲಾದ ಸ್ವಸಹಾಯ ಸಂಘಗಳ ಗುಂಪಿಗೆ ಸಂಬಂಧಿಸಿದ ವಿವರಗಳು:**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಅಡಿಯಲ್ಲಿ ನಗರ ಪ್ರದೇಶದಲ್ಲಿ ಅನೇಕ ಸ್ವಸಹಾಯ ಸಂಘಗಳನ್ನು ರಚಿಸಲಾಗಿದೆ. ಪ್ರತಿ ಸಂಘದಲ್ಲಿ ಇರುವ ಸರಾಸರಿ ಸದಸ್ಯರನ್ನು ತಿಳಿಯುವ ಸಲುವಾಗಿ ವಿವರಗಳನ್ನು ಕಲೆಹಾಕಲಾಯಿತು. ಮಾಹಿತಿದಾರರು ನೀಡಿರುವ ಮಾಹಿತಿಯನ್ನು ಕೋಷ್ಟಕ ೩.೧೮ ರಲ್ಲಿ ಸಂಗ್ರಹಿಸಲಾಗಿದೆ.

### ಕೋಷ್ಟಕ-೩.೧೮

### ಸಂಘದಲ್ಲಿ ಇರುವ ಸರಾಸರಿ ಸದಸ್ಯರು:

| ಕ್ರಮ ಸಂಖ್ಯೆ | ಸದಸ್ಯರು | ಸಂಖ್ಯೆ | ಪ್ರತಿಶತ (%) |
|---|---|---|---|
| ೧ | ೧೦-೧೨ | ೭೯ | ೩೩.೬೧ |
| ೨ | ೧೩-೧೪ | ೯೪ | ೪೦.೦ |
| ೩ | ೧೫-೧೬ | ೫೨ | ೨೨.೧೨ |
| ೪ | ೧೭-೧೮ | ೦೭ | ೨.೯೭ |
| ೫ | ೧೯-೨೦ | ೦೩ | ೧.೨೭ |
| | **ಒಟ್ಟು** | **೨೩೫** | **೧೦೦** |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಪ್ರತಿ ಸಂಘದಲ್ಲಿ ೧೦ ರಿಂದ ೧೨ ಸದಸ್ಯರನ್ನು ಹೊಂದಿರುವವರು ಶೇಕಡ ೩೩.೬೧, ೧೩ ರಿಂದ ೧೪ ಸದಸ್ಯರಿರುವವರು ಶೇಕಡ ೪೦ ರಷ್ಟು, ೧೫ ರಿಂದ ೧೬ ಸದಸ್ಯರಿರುವವರು ಶೇಕಡ ೨೨.೧೨, ೧೭ ರಿಂದ ೧೮ ಸದಸ್ಯರಿರುವವರು ಶೇಕಡ ೨.೯೭, ೧೯ ರಿಂದ ೨೦ ಸದಸ್ಯರಿರುವವರು ಶೇಕಡ ೧.೨೭ ರಷ್ಟು ಇರುವುದು ಕಂಡು ಬರುತ್ತದೆ. ಸಂಘದಲ್ಲಿ ಅತಿ ಹೆಚ್ಚಾಗಿ ೧೩ ರಿಂದ ೧೪ ಸದಸ್ಯರಿರುವವರು, ಅತಿ ಕಡಿಮೆ ೧೯ ರಿಂದ ೨೦ ಸದಸ್ಯ ಬಲವಿರುವವರನ್ನು ಕಾಣುತ್ತೇವೆ.

ಯಾವುದೇ ಒಂದು ಸಂಘ ಸಂಸ್ಥೆಯನ್ನು ಕಟ್ಟಿ ಕೊಳ್ಳಬೇಕಾದರೆ ಒಂದು ನಿರ್ದಿಷ್ಟ ಉದ್ದೇಶವಿರುತ್ತದೆ ಹಾಗಾಗಿ ಅವರ ಗುರಿಯು ಸಹ ಒಂದೇ ಇರುತ್ತದೆ, ಎಸ್‌ಜೆಎಸ್‌ಆರ್‌ವೈ ಗುಂಪು ರಚಿಸಿ ಕೊಳ್ಳಲು ಕಾರಣದ ಬಗ್ಗೆ ಮಾಹಿತಿಯನ್ನು ಕಲೆ ಹಾಕಲಾಗಿ ಕೋಷ್ಟಕ ೩.೧೯ ರಲ್ಲಿ ತೋರಿಸಲಾಗಿದೆ.

### ಕೋಷ್ಟಕ ೩.೧೯

### ಎಸ್‌ಜೆಎಸ್‌ಆರ್‌ವೈ ಗುಂಪು ರಚಿಸಿ ಕೊಳ್ಳಲು ಕಾರಣ:

| ಕ್ರಮ ಸಂಖ್ಯೆ | ಕಾರಣ | ಸಂಖ್ಯೆ | ಪ್ರತಿಶತ (%) |
|---|---|---|---|
| ೧ | ಹಣದ ಉಳಿತಾಯ | ೦೩೩ | ೧೪.೦೪ |
| ೨ | ಸಾಲದಯೋಜನೆ | ೦೩೯ | ೧೬.೫೯ |
| ೩ | ಸ್ವಯಂಉದ್ಯೋಗ ಕೈಗೊಳ್ಳಲು | ೧೬೩ | ೬೯.೩೬ |
| ೪ | ಇತರೆ | ೦೦ | ೦೦ |
| | ಒಟ್ಟು | ೨೩೫ | ೧೦೦ |

ಮೇಲಿನ ಕೋಷ್ಟಕ ೩.೧೯ ರಲ್ಲಿ ಪ್ರತಿಶತ ೬೯.೩೬ ಜನರು ಮಾತ್ರ ಸ್ವಯಂ ಉದ್ಯೋಗ ಕೈಗೊಳ್ಳುವುದಕ್ಕಾಗಿ ಎಂದರೆ, ಪ್ರತಿಶತ ೧೬.೫೯ ಜನರು ಸಾಲದ ಯೋಜನೆಗೆ ಎಂದಿದ್ದಾರೆ, ಪ್ರತಿಶತ ೧೪.೦೪ ಜನರು ಹಣದ ಉಳಿತಾಯ ಮಾಡಿ ಕೊಳ್ಳಲು ಎಂಬ ವಿಷಯವನ್ನು ತಿಳಿಸಿರುತ್ತಾರೆ, ಇತರೆ ಉದ್ದೇಶದ ಬಗ್ಗೆ ಯಾರೂ ಹೇಳಿಲ್ಲದಿರುವುದು ಕಂಡು ಬಂದಿದೆ.

ನಗರದಲ್ಲಿ ಸ್ವಸಹಾಯ ಗುಂಪುಗಳನ್ನು ಮಾಡಿಕೊಳ್ಳಲು ಪ್ರೋತ್ಸಾಹಿಸಿದವರ ಬಗ್ಗೆ ಮಾಹಿತಿದಾರರಿಂದ ಮಾಹಿತಿಯನ್ನು ಕಲೆಹಾಕಲಾಯಿತು. ಅವರಿಂದ ಬಂದ ಅಂಕಿ ಅಂಶಗಳನ್ನು ಸಂಗ್ರಹಿಸಲಾಗಿದೆ. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಸ್ವಸಹಾಯ ಗುಂಪುಗಳನ್ನು ರಚಿಸಿ ಕೊಳ್ಳಲು ಸರ್ಕಾರದಿಂದ ನೇಮಿಸಲ್ಪಟ್ಟ ಪ್ರತಿನಿಧಿಯಿಂದ ಎಂಬ ಅಭಿಪ್ರಾಯವನ್ನು ವ್ಯಕ್ತ ಪಡಿಸಿರುತ್ತಾರೆ.

ಗುಂಪುಗಳನ್ನು ರಚಿಸಿ ಕೊಂಡ ನಂತರ ಮಹಿಳಾ ಮಾಹಿತಿದಾರರು ಪಡೆದು ಕೊಂಡ ಪ್ರಯೋಜನಗಳ ಬಗ್ಗೆ ತಿಳಿಯಲು ಮಾಹಿತಿಯನ್ನು ಕಲೆಹಾಕಲಾಯಿತು, ಬಂದಿರುವ ಉತ್ತರಗಳನ್ನು ಸಂಗ್ರಹಿಸಲಾಗಿದೆ. ಸಾಲ ಪಡೆಯಲು, ಸರ್ಕಾರದ ಯೋಜನೆ ಅರಿಯಲು, ವೃತ್ತಿ ತರಬೇತಿ ಪಡೆದು ಹೊಸ ವೃತ್ತಿ ಆರಂಭಿಸಲು ಹಾಗೂ ಉಳಿತಾಯ ಮಾಡಲು ಎಂದು ಪ್ರತಿಶತ ೧೦೦ ರಷ್ಟು ಎಲ್ಲಾ ಮಹಿಳಾ ಮಾಹಿತಿದಾರರು ಸಂಘದ ರಚನೆಯಿಂದ ಪಡೆದ ಪ್ರಯೋಜನಗಳ ಬಗ್ಗೆ ತಿಳಿಸಿರುವುದು ಕಂಡು ಬರುತ್ತದೆ.

ಸ್ವಸಹಾಯ ಸಂಘದ ಸಭೆ ನಡೆಸುವುದು ತೀರ್ಮಾನ ತೆಗೆದುಕೊಂಡು ಅದನ್ನು ಜಾರಿಗೊಳಿಸುವುದು ಅಷ್ಟೇ ಮಹತ್ವದ ಜವಾಬ್ದಾರಿಯಾಗಿರುತ್ತದೆ ಹಾಗಾಗಿ ಈ ವಿಷಯದ ಕುರಿತಾಗಿ ಎಷ್ಟು ದಿನಗಳಿಗೊಮ್ಮೆ ಸಭೆ ನಡೆಸುತ್ತಾರೆ ಎಂಬ ಬಗ್ಗೆ ಮಾಹಿತಿದಾರರಿಂದ ಮಾಹಿತಿಯನ್ನು ತಿಳಿಯಲು ಪ್ರಯತ್ನಿಸಲಾಯಿತು. ಜನರು ಹದಿನೈದು ದಿನಗಳಿಗೊಮ್ಮೆ ಹಾಗೂ ತಿಂಗಳಿಗೊಮ್ಮೆ ಸಭೆ ನಡೆಸುವುದಾಗಿ ತಿಳಿಸಿರುತ್ತಾರೆ. ಅಂದರೆ ಪ್ರತಿಶತ ೮೯.೭೮ ಮಾಹಿತಿದಾರರು ತಿಂಗಳಿಗೊಮ್ಮೆ

ಸಂಘದ ಸಭೆ ನಡೆಸಲಾಗುವುದೆಂದು ತಿಳಿಸಿದ್ದಾರೆ, ಪ್ರತಿಶತ ೧೦.೨೧ ರಷ್ಟು ಮಾಹಿತಿದಾರರು ಹದಿನೈದು ದಿನಗಳಿಗೊಮ್ಮೆ ಸಭೆ ನಡೆಸುವುದರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಸಂಘದ ಶಿಸ್ತು ಪಾಲನೆಗೆ ಹಾಜರಾತಿ ಎಂಬುದನ್ನು ಕಡ್ಡಾಯ ಮಾಡಲಾಗಿದೆ ಸಂಘದಲ್ಲಿ ಯಾವುದೇ ಒಂದು ತೀರ್ಮಾನ ಕೈಗೊಳ್ಳಬೇಕಾದರೆ ಬಹುಮತ ಮುಖ್ಯವಾಗಿರುತ್ತದೆ. ಹಾಗಾಗಿ ಪ್ರತಿಯೊಬ್ಬ ಸಂಘದ ಸದಸ್ಯರು ಸಂಘದ ಸಭೆಯಲ್ಲಿ ಪಾಲ್ಗೊಳ್ಳುವುದು ನಿಯಮಾವಳಿಯ ಪ್ರಕಾರ ಅತಿ ಮುಖ್ಯವಾಗಿರುತ್ತದೆ, ಸಂಘದಲ್ಲಿ ಸದಸ್ಯರ ಹಾಜರಾತಿಯನ್ನು ತಿಳಿದುಕೊಳ್ಳುವುದಕ್ಕಾಗಿ ಮಾಹಿತಿದಾರರಿಂದ ಮಾಹಿತಿ ಪಡೆದುಕೊಳ್ಳಲಾಯಿತು. ಪ್ರತಿಶತ ೮೦.೮೫ ರಷ್ಟು ಮಾಹಿತಿದಾರರು ಸಂಘದ ಸಭೆಗೆ ಪ್ರತಿಯೊಬ್ಬರೂ ಹಾಜರಾಗುತ್ತಾರೆ ಎಂದು ತಿಳಿಸಿದ್ದಾರೆ. ಪ್ರತಿಶತ ೧೯.೧೪ ಮಾಹಿತಿದಾರರು ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಗೈರು ಹಾಜರಾಗುತ್ತೇವೆ, ಈ ಬಗ್ಗೆ ಸಂಘದ ಪ್ರತಿನಿಧಿಗಳಿಗೆ ತಿಳಿಸಿ ಹೋಗುತ್ತೇವೆ ಅಥವಾ ಹತ್ತಿರದ ಮನೆಯ ಸಂಘದ ಸದಸ್ಯರಿಗೆ ತಿಳಿಸಿ ಹೋಗಿರುತ್ತೇವೆ ಎಂದು ಮಾಹಿತಿ ನೀಡಿದ್ದಾರೆ.

ಉತ್ತಮವಾಗಿ ನಡೆಯುವ ಪ್ರತಿಯೊಂದು ಸ್ವಸಹಾಯ ಸಂಘಗಳಿಗೂ ಸರ್ಕಾರ ಸುತ್ತು ನಿಧಿ (Revolving Fund) ಯನ್ನು ನೀಡುವ ಮೂಲಕ ಸಂಘವನ್ನು ಪ್ರೋತ್ಸಾಹಿಸಿ ಬ್ಯಾಂಕ್ ಲಿಂಕೇಜ್ ಮಾಡಿಸಿ ಸಾಲ ಸೌಲಭ್ಯವನ್ನು ಕೊಡಿಸುವುದು ಈ ಯೋಜನೆಯ ಮೂಲ ಉದ್ದೇಶಗಳಲ್ಲಿ ಒಂದಾಗಿದ್ದರಿಂದ, ಸುತ್ತು ನಿಧಿಯನ್ನು ಪಡೆದಿರುವ ಬಗ್ಗೆ ಮಾಹಿತಿದಾರರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಸುತ್ತು ನಿಧಿ ಎಂದರೆ ಸರ್ಕಾರವು ಒಂದು ವರ್ಷ ತುಂಬಿದ ಸ್ವಸಹಾಯ ಸಂಘಗಳಿಗೆ ಆ ಸಂಘವು ತನ್ನ ಸದಸ್ಯರಿಗೆ ಆದಾಯೋತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳುವುದಕ್ಕಾಗಿ ಸುತ್ತು ನಿಧಿಯನ್ನಾಗಿ ಹಣಕಾಸಿನ ನೆರವನ್ನು ನೀಡುತ್ತದೆ. ಈ ಹಣವು ಸಂಘದಲ್ಲಿ ಸಾಲದ ರೂಪದಲ್ಲಿ ಆದಾಯೋತ್ಪನ್ನ ಚಟುವಟಿಕೆ ಮಾಡಲು ಸಹಾಯವನ್ನು ನೀಡುತ್ತದೆ. ಪ್ರತಿಶತ ೫೪.೪೬ ರಷ್ಟು ಮಾಹಿತಿದಾರರು ಸುತ್ತು ನಿಧಿಯ ಉದ್ದೇಶವನ್ನು ತಿಳಿದವರಾಗಿದ್ದು, ಸುತ್ತು ನಿಧಿಯನ್ನು ಬಳಕೆ ಮಾಡಿಕೊಂಡವರಾಗಿದ್ದಾರೆ, ಪ್ರತಿಶತ ೪೫.೫೩ ರಷ್ಟು ಮಾಹಿತಿದಾರರಿಗೆ ಸುತ್ತು ನಿಧಿಯ ಬಗ್ಗೆ ತಿಳಿದಿದ್ದು ಸುತ್ತು ನಿಧಿಯನ್ನು ಪಡೆದಿರುವುದಿಲ್ಲ. ಸುತ್ತು ನಿಧಿ ರೂ ೨೦,೦೦೦ ಅಥವಾ ಆ ಸಂಘದಲ್ಲಿರುವ ಪ್ರತಿ ವ್ಯಕ್ತಿಯ ಆಧಾರದಲ್ಲಿ ರೂ ೧,೦೦೦ ನಿಗದಿಯಾಗಿರುತ್ತದೆ. ಇದರ ವಿಷಯವಾಗಿ ಎಲ್ಲರೂ ತಿಳುವಳಿಕೆ ಹೊಂದಿದವರಾಗಿದ್ದಾರೆ.

ಸರ್ಕಾರವು ಎಲ್ಲಾ ಸ್ವಸಹಾಯ ಸಂಘಗಳಿಗೆ ಸುತ್ತು ನಿಧಿಯನ್ನು ಒದಗಿಸಲು ಸಾಧ್ಯವಿಲ್ಲದ್ದನ್ನು ಮನಗಂಡು ಅಂತಹ ಸಂಘಗಳಿಗೆ ಬ್ಯಾಂಕ್ ಲಿಂಕೇಜ್

ಮಾಡಿಸಲು ಅವಕಾಶವನ್ನು ಕಲ್ಪಿಸಿದೆ. ಪ್ರತಿಯೊಂದು ಗುಂಪುಗಳು ಸಾಲ ಸೌಲಭ್ಯವನ್ನು ಪಡೆಯಲು ಬ್ಯಾಂಕ್‌ನೊಂದಿಗೆ ಸಂಪರ್ಕ ಪಡೆಯುವುದು ಅವಶ್ಯಕವಾಗಿದ್ದು, ಮಾಹಿತಿದಾರರಿಗೆ ಈ ವಿಷಯದ ಬಗ್ಗೆ ತಿಳಿವಳಿಕೆ ಹಾಗೂ ಉಳಿತಾಯ ಖಾತೆ ಹೊಂದಿರುವುದರ ಬಗ್ಗೆ ಪ್ರಶ್ನಿಸಲಾಗಿ ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಬ್ಯಾಂಕ್ ಲಿಂಕೇಜ್ ಮಾಡಿರುವ ಬಗ್ಗೆ ಬ್ಯಾಂಕ್ ಲಿಂಕೇಜ್ ಹೊಂದಿ ಸಾಲ ಸೌಲಭ್ಯ ಪಡೆಯುತ್ತಿರುವುದರ ವಿಷಯವಾಗಿ ತಿಳಿಸಿದ್ದಾರೆ. ಇದರಿಂದ ಎಲ್ಲಾ ಸಂಘದ ಸದಸ್ಯರಿಗೆ ಬ್ಯಾಂಕ್ ಖಾತೆಯ ಬಗ್ಗೆ ಹಾಗೂ ಬ್ಯಾಂಕ್ ನೀಡುವ ಸಾಲ ಸೌಲಭ್ಯದ ಬಗ್ಗೆ ತಿಳುವಳಿಕೆ ಇರುವುದು ಕಂಡು ಬಂದಿದೆ.

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ಜನರು ಸ್ವ ಉದ್ಯೋಗ ಕೈಗೊಳ್ಳುವ ದೃಷ್ಠಿಯಿಂದಲೇ ಜಾರಿಯಾದ ಯೋಜನೆ ಯಾಗಿರುವುದರಿಂದ ಸರ್ಕಾರದ ಸಹಾಯಧನದ ಜೊತೆಗೆ ತಾನು ತಯಾರಿಸಿದ ಉದ್ಯೋಗದ ಕ್ರಿಯಾ ಯೋಜನೆಯ ಆಧಾರದ ಮೇಲೆ ಬ್ಯಾಂಕ್‌ನಿಂದಲೂ ಸಾಲ ಸೌಲಭ್ಯವನ್ನು ಪಡೆದುಕೊಳ್ಳುತ್ತಾನೆ, ವ್ಯಕ್ತಿ ತಾನು ತೀರ್ಮಾನಿಸುವ ಉತ್ಪಾದಿತ ವಸ್ತುವಿನ ಆಧಾರದ ಮೇಲೆಯೇ ನಿಂತಿರುತ್ತದೆ. ಈ ಯೋಜನೆಯ ಅಡಿಯಲ್ಲಿ ಸ್ವ ಸಹಾಯ ಸಂಘಗಳ ಸದಸ್ಯರು ಕೈಗೊಂಡಿರುವ ಸ್ವಯಂ ಉದ್ಯೋಗಗಳ ವಿವರವನ್ನು ತಿಳಿದು ಕೊಳ್ಳುವ ಹಿನ್ನಲೆಯಲ್ಲಿ ಮಾಹಿತಿಯನ್ನು ಕೋಷ್ಟಕ ೩.೨೦ ರಲ್ಲಿ ಕಲೆ ಹಾಕಲಾಗಿದೆ.

ಸ್ವಸಹಾಯ ಸಂಘಗಳ ಮೂಲಕ ಬ್ಯಾಂಕ್‌ನಿಂದ ಅಥವಾ ಸ್ವ ಸಹಾಯ ಗುಂಪಿನಿಂದ ಸಾಲ ಪಡೆದು ಕೈಗೊಂಡಿರುವ ಸ್ವಯಂ ಉದ್ಯೋಗಗಳು.

**ಕೋಷ್ಟಕ –೩.೨೦**

**ಸ್ವ ಸಹಾಯ ಗುಂಪಿನಿಂದ ಸಾಲ ಪಡೆದು ಕೈಗೊಂಡಿರುವ ಸ್ವಯಂ ಉದ್ಯೋಗಗಳು**

| ಕ್ರ.ಸಂ. | ಉದ್ಯೋಗಗಳು | ಸಂಖ್ಯೆ | ಪ್ರತಿಶತ (%) |
|---|---|---|---|
| ೦೧ | ಕಿರಾಣಿ ಅಂಗಡಿ | ೧೯ | ೮.೦೮ |
| ೦೨ | ಹಪ್ಪಳ ಶಂಡಿಗೆ ತಯಾರಿಕೆ | ೨೭ | ೧೧.೪೮ |
| ೦೩ | ಕಾಯಿ ಪಲ್ಲೆ ವ್ಯಾಪಾರ | ೩೬ | ೧೫.೩೧ |
| ೦೪ | ಟೈಲರಿಂಗ್ | ೦೯ | ೩.೮೨ |
| ೦೫ | ಹಸು ಸಾಕಾಣಿಕೆ | ೨೧ | ೮.೯೩ |
| ೦೬ | ಬ್ಯೂಟಿ ಪಾರ್ಲರ್ | ೦೪ | ೧.೭೦ |
| ೦೭ | ರೊಟ್ಟಿ ತಯಾರಿಕೆ | ೨೧ | ೮.೯೩ |
| ೦೮ | ಶ್ಯಾವಿಗೆ ತಯಾರಿಕೆ | ೨೪ | ೧೦.೨೧ |
| ೦೯ | ಬಟ್ಟೆ ವ್ಯಾಪಾರ | ೨೨ | ೯.೩೬ |
| ೧೦ | ಬಳೆ ವ್ಯಾಪಾರ | ೧೫ | ೬.೩೮ |
| ೧೧ | ಹೊಲಿಗೆ ತರಬೇತಿ ಕೇಂದ್ರ | ೦೪ | ೧.೭೦ |
| ೧೨ | ಯಾವುದೂಇಲ್ಲ | ೩೩ | ೧೪.೦೪ |
| | ಒಟ್ಟು | ೨೩೫ | ೧೦೦ |

ಮೇಲಿನ ಕೋಷ್ಟಕದ ಮಾಹಿತಿಯನ್ನು ಅವಲೋಕಿಸಿದಾಗ ಪ್ರತಿಶತ ೮.೦೮ ರಷ್ಟು ಜನರು ಕಿರಾಣಿ ಅಂಗಡಿ ವ್ಯಾಪಾರವನ್ನು, ಪ್ರತಿಶತ ೧೧.೪೮ ರಷ್ಟು ಜನರು ಹಪ್ಪಳ ಶಂಡಿಗೆ ಮಾಡುವುದನ್ನು, ಪ್ರತಿಶತ ೧೫.೩೧ ರಷ್ಟು ಜನರು ಕಾಯಿಫಲ್ಯ ವ್ಯಾಪಾರವನ್ನು, ಪ್ರತಿಶತ ೩.೮೨ ರಷ್ಟು ಜನರು ಟೈಲರಿಂಗ್ ವೃತ್ತಿಯನ್ನು, ಪ್ರತಿಶತ ೮.೯೩ ರಷ್ಟು ಜನರು ಹಸು ಸಾಕಾಣಿಕೆ ಮತ್ತು ರೊಟ್ಟಿ ತಯಾರಿಕೆಯನ್ನು, ಪ್ರತಿಶತ ೧೦.೨೧ ರಷ್ಟು ಜನರು ಶ್ಯಾವಿಗೆ ಮಾಡುವ ವೃತ್ತಿಯನ್ನು, ಪ್ರತಿಶತ ೯.೩೬ ರಷ್ಟು ಜನರು ಬಟ್ಟೆ ವ್ಯಾಪಾರವನ್ನು, ಪ್ರತಿಶತ ೬.೩೮ ರಷ್ಟು ಜನರು ಬಳೆ ವ್ಯಾಪಾರದ ಉದ್ಯೋಗವನ್ನು, ಪ್ರತಿಶತ ೧.೭೦ ರಷ್ಟು ಜನರು ಹೊಲಿಗೆ ತರಬೇತಿ ಮತ್ತು ಬ್ಯೂಟಿ ಪಾರ್ಲರ್ ನಡೆಸುವ ಕೇಂದ್ರಗಳನ್ನು ನಡೆಸುತ್ತಿರುವುದು ಮಾಹಿತಿದಾರರು ನೀಡಿರುವ ಅಂಕಿ ಅಂಶಗಳಿಂದ ಕಂಡು ಬಂದಿದೆ. ಇನ್ನುಳಿದ ಪ್ರತಿಶತ ೧೪.೦೪ ರಷ್ಟು ಮಾಹಿತಿದಾರರು ಯಾವುದೇ ಉದ್ಯೋಗವನ್ನು ಕೈಗೊಳ್ಳದೇ ಇರುವುದು ನೀಡಿರುವ ಉತ್ತರದಿಂದ ಕಂಡು ಬಂದಿದೆ.

### ೩.೩. ಸ್ವಯಂ ಉದ್ಯೋಗ ಕಾರ್ಯಕ್ರಮ (USEP) ಸಣ್ಣ ಉದ್ದಿಮೆ ಸ್ಥಾಪನೆ (Micro Enterprises):

ಮನುಷ್ಯನಿಗೆ ತನ್ನ ಜೀವನಾಧಾರಕ್ಕೆ ಒಂದು ಉದ್ಯೋಗವನ್ನು ಮಾಡಲೇಬೇಕಾಗುತ್ತದೆ. ಅದು ಸಣ್ಣದಿರಬಹುದು, ದೊಡ್ಡದಿರಬಹುದು, ಕೆಲಸವನ್ನು ಪಡೆಯಲು ಆಪೇಕ್ಷಿಸುತ್ತಾನೆ. ಅದರಲ್ಲೂ ನಗರ ಪ್ರದೇಶದಲ್ಲಿ ಉದ್ಯೋಗ ಹುಡುಕುವುದು ಹಾಗೂ ಉದ್ಯೋಗಕ್ಕೆ ಸೇರುವುದು ಎಂದರೆ ಕಷ್ಟಕರವಾದುದಾಗಿದೆ. ಈ ರೀತಿಯಲ್ಲಿ ಬಡ ಜನರು ಪರಿತಪಿಸುವುದನ್ನು ಪರಿಗಣಿಸಿಯೇ ಸರ್ಕಾರವು ಬಡ ಜನರಿಗೆ ಸ್ವತಃ ತಾವೇ ಉದ್ಯೋಗವನ್ನು ಕೈಗೊಳ್ಳುವಂತೆಯೇ ಯೋಜನೆಯನ್ನು ರೂಪಿಸಲು ಪ್ರಯತ್ನಿಸಿ, ನಗರಗಳಲ್ಲಿ ತಕ್ಕ ಉದ್ಯೋಗವಿರದ ಹಾಗೂ ನಿರುದ್ಯೋಗಿ ಗಳಿಗೆ ನಗರಗಳಲ್ಲಿ ಹೆಚ್ಚು ಬೇಡಿಕೆಯಲ್ಲಿ ಇರುವಂತಹ ಚಿಕ್ಕ ಉದ್ಯಮಗಳಾದ ಸರ್ವೀಸಿಂಗ್, ಸಾರ್ವಜನಿಕ ಸೇವೆ, ಸಣ್ಣ ಅಂಗಡಿ, ವ್ಯಾಪಾರ, ಆಟೋರಿಕ್ಷಾ ಸೇವೆ ಹಾಗೂ ಕೈಗಾರಿಕೆಗಳನ್ನು ಸ್ಥಾಪಿಸಲು ಎಸ್.ಜೆ.ಎಸ್.ಆರ್.ವೈ ಕಾರ್ಯಕ್ರಮದ ಅಡಿಯಲ್ಲಿ ಪ್ರೋತ್ಸಾಹಿಸುತ್ತಾ ಬರುತ್ತಿದೆ. ಈ ಕಾರ್ಯಕ್ರಮದಲ್ಲಿ ಸ್ಥಳೀಯ ನಿಪುಣತೆಯನ್ನು, ಕರಕುಶಲತೆಯನ್ನು ಹಾಗೂ ಪರಿಣತಿಯನ್ನು ಪ್ರೋತ್ಸಾಹಿಸಲಾಗುತ್ತಿದೆ. ಉದ್ಯಮಗಳ ವೆಚ್ಚ, ಸರಕುಗಳ ಬೇಡಿಕೆ, ಮಾರಾಟಕ್ಕೆ ಅವಕಾಶ, ಆರ್ಥಿಕ ಸಮರ್ಥತೆ ಹಾಗೂ ಇತರ ಅಂಶಗಳನ್ನು ಗಮದಲ್ಲಿಟ್ಟುಕೊಂಡು ಪ್ರತಿಯೊಂದು ನಗರದಲ್ಲಿ ಈ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುತ್ತಿದೆ. ಈ ಯೋಜನೆಯಲ್ಲಿ ಫಲಾನುಭವಿಗಳು (ಪುರುಷ ಹಾಗೂ ಮಹಿಳೆಯರಿದ್ದಾರೆ) ಜಂಟಿಯಾಗಿ ಒಂದು ಉದ್ಯಮವನ್ನು ಮಾಡಬಹುದು. ಈ ಯೋಜನೆಯಡಿಯಲ್ಲಿ ಮೇಲಿನ ನಿಯಮಕ್ಕೆ ಅನುಸರಿಸಿ ಪ್ರತಿ ವ್ಯಕ್ತಿಗೆ ನೀಡಬಹುದಾದ ಸಬ್ಸಿಡಿಯ ಮೊತ್ತವನ್ನು ನೀಡಲಾಗುತ್ತದೆ. ಈ ಕಾರ್ಯಕ್ರಮದ ಅಡಿ ಪ್ರತಿ ಉದ್ಯಮದ ಗರಿಷ್ಠ

ಘಟಕ ವೆಚ್ಚ ೫೦,೦೦೦ ರೂಪಾಯಿಗಳಾಗಿದೆ. ಇದರಲ್ಲಿ ಗರಿಷ್ಠ ಮಿತಿ ೭,೫೦೦ ರೂಪಾಯಿಗಳಿಗೆ ಒಳಪಡಿಸಿ ಘಟಕ ವೆಚ್ಚದ ಶೇಕಡ ೧೫ ರಷ್ಟು ಹಣವನ್ನು ಸಹಾಯಧನವಾಗಿ ನೀಡಲಾಗುತ್ತಿದೆ. ಯೋಜನಾ ವೆಚ್ಚದ ಶೇ.೫ ರಷ್ಟು ಹಣವನ್ನು ಪ್ರತಿಯೊಬ್ಬ ಫಲಾನುಭವಿಯು ಸ್ವಂತ ಮೂಲಗಳಿಂದ ಮಾರ್ಜಿನ್ ಹಣವನ್ನಾಗಿ ಸಲ್ಲಿಸಬೇಕಾಗುತ್ತದೆ.

ಈ ಕಾರ್ಯಕ್ರಮವು ಜನರಿಗೆ ಹೇಗೆ ಅನುಕೂಲವಾಗಿದೆ ಅವರ ಆರ್ಥಿಕ ಜೀವನಮಟ್ಟ ಸುಧಾರಿಸಿದೆಯೇ ಎಂಬುದನ್ನು ತಿಳಿಯಲು ಇದಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯನ್ನು ರಚಿಸಿ ರ್‍ಯಾಂಡಮ್ ಆಧಾರದ ಮೇಲೆ ಒಟ್ಟು ೨೫ ಫಲಾನುಭವಿಗಳನ್ನು ಆಯ್ಕೆ ಮಾಡಿಕೊಂಡು (ಅದರಲ್ಲಿ ೧೦ ಜನ ಪುರುಷರು ಮತ್ತು ೧೫ ಮಹಿಳೆಯರನ್ನು) ಅಧ್ಯಯನ ಕೈಗೊಳ್ಳಲಾಯಿತು. ಪ್ರಶ್ನಾವಳಿಗೆ ಮಾಹಿತಿದಾರರಿಂದ ಬಂದ ಉತ್ತರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

ಸ್ವರ್ಣಜಯಂತಿ ಶಹರಿ ರೋಜ್ಗಾರ್ ಯೋಜನೆಯ ಫಲಾನುಭವಿಗಳಾಗಲು ನಿಮಗೆ ಮಾಹಿತಿ ನೀಡಿದವರು ಯಾರು ಎಂಬ ಪ್ರಶ್ನೆಗೆ ಒಟ್ಟು ೨೫ ಮಾಹಿತಿದಾರರಲ್ಲಿ ಪ್ರತಿಶತ ೭೬ ಮಾಹಿತಿದಾರರು ಎಸ್.ಜೆ.ಎಸ್.ಆರ್.ವೈ. ಅಧಿಕಾರಿಗಳೆಂದು, ೦೬ ಪ್ರತಿಶತ ಮಾಹಿತಿದಾರರು ಆರ್‌ಸಿವಿಗಳೆಂದು ತಿಳಿಸಿರುವುದು ಕಂಡು ಬರುತ್ತದೆ. ಯಾವುದೇ ಯೋಜನೆಯು ಜನರಿಗೆ ತಿಳಿಯಬೇಕಾದರೆ ಮೊದಲು ಅದರ ಬಗ್ಗೆ ಸ್ಪಷ್ಟವಾದ ಮಾಹಿತಿ ನೀಡುವುದು ಅತ್ಯವಶ್ಯಕವಾಗಿರುತ್ತದೆ, ಹಾಗಾಗಿ ಯೋಜನೆಯ ಅಧಿಕಾರಿಗಳು ಜನರಿಗೆ ಸ್ಪಷ್ಟವಾಗಿ ಮಾಹಿತಿ ನೀಡಿರುವುದು ಮೇಲಿನ ಪಟ್ಟಿಯನ್ನು ಅವಲೋಕಿಸಿದಾಗ ಕಂಡು ಬಂದಿದೆ.

ಸಣ್ಣ ಉದ್ದಿಮೆ ಸ್ಥಾಪನೆಗೆ ಮುಂಚೆ ಯಾವುದಾದರೂ ಸ್ವಯಂ ಉದ್ಯೋಗವನ್ನು ಕೈಗೊಂಡಿದ್ದಾರೆಯೇ ಎಂಬುದಾಗಿ ಮಾಹಿತಿ ಕೇಳಿದಾಗ ಫಲಾನುಭವಿಗಳು ಪ್ರತಿಶತ ೮೪ ರಷ್ಟು ಮಾಹಿತಿದಾರರು ಯಾವುದೇ ಸ್ವಂತ ಉದ್ಯೋಗವನ್ನು ಕೈಗೊಳ್ಳದಿರುವುದು ತಿಳಿದು ಬಂದಿದೆ, ಪ್ರತಿಶತ ೧೬ ಮಾಹಿತಿದಾರರು ಸಣ್ಣ ವ್ಯಾಪಾರ ಹೊಂದಿದ್ದು ಆರ್ಥಿಕವಾಗಿ ಅಷ್ಟೇನು ಪ್ರಯೋಜನ ಹೊಂದಿರಲಿಲ್ಲ, ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಫಲಾನುಭವಿಯಾದ ನಂತರ ಹೆಚ್ಚಿನ ರೀತಿಯಲ್ಲಿ ಉದ್ಯೋಗ ಮಾಡಿ ಹಣ ಗಳಿಸಲು ಸಹಕಾರಿಯಾಯಿತು ಎಂದು ತಿಳಿಸಿರುವುದು ಕಂಡು ಬಂದಿದೆ.

ಸ್ವಂತ ಉದ್ಯೋಗ ಕೈಗೊಳ್ಳುವುದು ಸರಳವಾದ ಕೆಲಸವಲ್ಲ, ಪ್ರತಿಯೊಂದು ಮೂಲದಿಂದಲೂ ನಾವು ಬಂಡವಾಳವನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಯಾವುದೇ ಯೋಜನೆಯನ್ನು ಕೈಗೊಳ್ಳುವಾಗ ಪ್ರತಿಯೊಬ್ಬನೂ ಸಹ ತನ್ನಲ್ಲಿರುವ ಬಂಡವಾಳದ ಜೊತೆಗೆ ಬ್ಯಾಂಕ್‌ನಿಂದ ಮತ್ತು ಸರ್ಕಾರದ ಯೋಜನೆಯ ಫಲಾನುಭವಿಯಾದರೆ ಅನುಕೂಲ ಎಂದು ತಿಳಿದು ಹಲವು ಆಯಾಮಗಳಲ್ಲಿ ವಿಚಾರ ಮಾಡುವುದು ಸಾಮಾನ್ಯವಾಗಿದೆ.

**ಉದ್ಯೋಗ ಮಾಡಲು ಇರುವ ಸ್ಥಳ:**

ಉದ್ಯೋಗವನ್ನು ಮಾಡಬೇಕಾದರೆ ಆ ಉದ್ಯೋಗಕ್ಕಾಗಿ ಸ್ಥಳಾವಕಾಶ ಅತಿ ಮುಖ್ಯವಾದದು ಯಾವ ವಿಧವಾದ ಉದ್ಯೋಗವನ್ನು ಕೈಗೊಳ್ಳುತ್ತೇನೆ ಎಂಬುದರ ಆಧಾರದ ಮೇಲೆ ಸ್ಥಳಾವಕಾಶದ ವಿಸ್ತೀರ್ಣವು ಅವಲಂಬಿಸಿರುತ್ತದೆ. ಆ ಸ್ಥಳಾವಕಾಶವು ಜನನಿಬಿಡವಾದ ಸ್ಥಳವಾದರೆ ಎಂಬುದು ಪ್ರತಿಯೊಬ್ಬರೂ ವಿಚಾರ ಮಾಡುವುದಾಗಿದೆ. ನಗರದ ಮಧ್ಯದಲ್ಲಿ ಉದ್ಯೋಗ ಮಾಡಲು ಯತ್ನಿಸಿದರೆ ಅದಕ್ಕೆ ತಗಲುವ ಬಾಡಿಗೆ ಹೆಚ್ಚು ಇರುತ್ತದೆ. ಹಾಗಾಗಿ ಫಲಾನುಭವಿ ತನ್ನ ಆರ್ಥಿಕ ಶಕ್ತಿಗೆ ಅನುಗುಣವಾಗಿ ಲೆಕ್ಕಾಚಾರ ಮಾಡಬೇಕಾಗುತ್ತದೆ. ಕೋಷ್ಟಕ ೩.೨೧–ರಲ್ಲಿ ಈ ಬಗ್ಗೆ ವಿವರ ಪಡೆಯಲಾಗಿದೆ.

**ಕೋಷ್ಟಕ –೩.೨೧**

**ಉದ್ಯೋಗ ಮಾಡುವ ಸ್ಥಳ**

| ಕ್ರ. ಸಂ. | ವಿವರ | ಒಟ್ಟು | ಪ್ರತಿಶತ (%) |
|---|---|---|---|
| ೧ | ವಾಸಿಸುವ ಮನೆಯಲ್ಲಿಯೇ ನಡೆಸುತ್ತಿದ್ದೇನೆ | ೦೨ | ೦೮ |
| ೨ | ಬೇರೆ ಕಟ್ಟಡ ವ್ಯವಸ್ಥೆ ಮಾಡಿಕೊಂಡಿದ್ದೇನೆ | – | – |
| ೩ | ಪೆಟ್ಟಿಗೆ ಇಟ್ಟಿದ್ದೇನೆ | ೦೨ | ೦೮ |
| ೪ | ಚಲಿಸುವ ಗಾಡಿ(ಆಟೋರಿಕ್ಷಾ) | ೧೦ | ೪೦ |
| ೫ | ಅಂಗಡಿ ಹಾಕಿದ್ದೇನೆ | ೦೭ | ೨೮ |
| ೬ | ಪುಟ್‌ಪಾತ್‌ವ್ಯಾಪಾರ | ೦೪ | ೧೬ |
| | **ಒಟ್ಟು** | **೨೫** | **೧೦೦%** |

ಮೇಲಿನ ಕೋಷ್ಟಕದಲ್ಲಿ ೨೮ ಪ್ರತಿಶತ ಮಾಹಿತಿದಾರರು ಅಂಗಡಿ ಇಟ್ಟಿರುವುದು, ಪ್ರತಿಶತ ೪೦ ರಷ್ಟು ಮೂವೆಬಲ್ ವಾಹನಗಳನ್ನು ಹೊಂದಿದವರಾಗಿದ್ದಾರೆ, ೦೮ ಪ್ರತಿಶತ ಫಲಾನುಭವಿಗಳು ವಾಸಿಸುವ ಮನೆಯಲ್ಲಿಯೇ ಉದ್ಯೋಗ ನಡೆಸುತ್ತಿರುವುದು, ೦೮ ಪ್ರತಿಶತ ಮಾಹಿತಿದಾರರು ಪೆಟ್ಟಿಗೆ ಅಂಗಡಿ ಇಟ್ಟಿರುವುದಾಗಿ ತಿಳಿಸಿದ್ದಾರೆ, ಪ್ರತಿಶತ ೧೬ ಮಾಹಿತಿದಾರರು ಪುಟ್‌ಪಾತ್ ಮೇಲೆಯೇ ವ್ಯಾಪಾರ ವ್ಯವಹಾರ ಮಾಡುತ್ತೇವೆ ಎಂದು ತಿಳಿಸಿರುವುದು ಕಂಡು ಬರುತ್ತದೆ.

ಯೋಜನೆಯಲ್ಲಿ ಕೈಗೊಂಡಿರುವ ಉದ್ಯೋಗಕ್ಕೆ ಎಷ್ಟು ಸಾಲ ಪಡೆದಿರುವಿರಿ ಎಂಬ ಪ್ರಶ್ನೆಗೆ ಉದ್ಯೋಗ ಕೈಗೊಂಡಿರುವ ಎಲ್ಲಾ ೨೫ ಮಾಹಿತಿದಾರರು ತಿಳಿಸಿರುವುದು ಕಂಡು ಬಂದಿದೆ. ಸಾಲವನ್ನು ಶೇಕಡಾ ೪ ರಷ್ಟು ಜನರು ಋಣ ಮುಕ್ತ ಮಾಡಿದ್ದು ಇರುತ್ತದೆ, ಇದರಿಂದ ತಿಳಿದು ಕೊಳ್ಳುವ ಅಂಶವೇನೆಂದರೆ ಬಡಜನರು ಸಾಲವನ್ನು ಸದ್ಬಳಕೆ ಮಾಡಿ ಕೊಂಡಿರುವುದು ತಿಳಿದು ಬರುತ್ತದೆ.

ಈ ಯೋಜನೆಯಲ್ಲಿ ಕೈಗೊಂಡಿರುವ ಸ್ವಯಂ ಉದ್ಯೋಗಕ್ಕೆ ಸರ್ಕಾರದಿಂದ ನೀಡಿರುವ ಸಹಾಯಧನದ (ಸಬ್ಸಿಡಿ) ಬಗ್ಗೆ ಕೇಳಲಾಯಿತು. ಅದರಂತೆ ಮಾಹಿತಿದಾರರು ಬ್ಯಾಂಕ್ ಸಾಲ, ಸಹಾಯಧನ ಹಾಗೂ ತಮ್ಮ ಷೇರಿನ ಹಣವನ್ನು ವಿವರಿಸಿದ್ದಾರೆ. ಎಲ್ಲರೂ ಸಹ ಘಟಕ ವೆಚ್ಚದ ಹೆಚ್ಚಳ ಮಾಡುವ ಬಗ್ಗೆ ತಿಳಿಸಿರುತ್ತಾರೆ. ಇದನ್ನು ನೋಡಿದಾಗ ಎಲ್ಲಾ ಫಲಾನುಭವಿಗಳು ಈ ಯೋಜನೆಯ ಸಬ್ಸಿಡಿ ಬಗ್ಗೆ ತಿಳಿದು ಕೊಂಡಿರುವುದು ಕಂಡು ಬರುತ್ತದೆ. ಪ್ರತಿಶತ ೧೦೦ ರಷ್ಟು ಎಲ್ಲಾ ಮಾಹಿತಿದಾರರು ಸಹಾಯಧನದ ಬಗ್ಗೆ ಅರಿವುಳ್ಳವರಾಗಿರುವುದು ಕಂಡು ಬರುತ್ತದೆ. ಎಲ್ಲಾ ಫಲಾನುಭವಿಗಳು ಸಹ ಸಹಾಯಧನವನ್ನು ಹೆಚ್ಚಿಸಲು ತಮ್ಮ ಅನಿಸಿಕೆ ವ್ಯಕ್ತಪಡಿಸಿರುತ್ತಾರೆ.

ಯಾವುದೇ ಸ್ವಯಂ ಉದ್ಯೋಗ ಮಾಡುವಾಗ ಮೊದಲು ಬಂಡವಾಳ ಹೂಡುವವನು ಅಲೋಚಿಸುವುದು ತಾನು ಉತ್ಪಾದಿಸುವ ವಸ್ತುವಿಗೆ ಜನರ ಬೇಡಿಕೆ ಮತ್ತು ಸುವ್ಯವಸ್ಥಿತ ರೀತಿಯ ಮಾರುಕಟ್ಟೆ, ಇಂದು ಆಧುನಿಕತೆ ಹೆಚ್ಚಾದಂತೆ ಎಲ್ಲಾ ವಸ್ತುಗಳ ಉತ್ಪನ್ನವೂ ಸಹ ಮಾರುಕಟ್ಟೆಯಲ್ಲಿ ಪೈಪೋಟಿಗಿಳಿದಿರುವುದು ತಿಳಿದಿರುವ ವಿಚಾರ, ತಾನು ಉತ್ಪಾದಿಸುವ ವಸ್ತುವಿಗೆ ಸೂಕ್ತ ಮಾರುಕಟ್ಟೆ ಮತ್ತು ಬೇಡಿಕೆ ಇದ್ದರೆ ಶ್ರಮವು ಪ್ರತಿಫಲ ನೀಡುತ್ತದೆ ಎಂಬುದು ಪ್ರತಿಯೊಬ್ಬನ ಚಿಂತೆಯಾಗಿರುತ್ತದೆ.

**ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ವಸ್ತು ಅಥವಾ ಸೇವೆಯ ವಿವರ:**

ಪ್ರತಿಯೊಬ್ಬರೂ ಕೂಡಾ ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ಮತ್ತು ಜನರಿಗೆ ದಿನ ನಿತ್ಯದಲ್ಲಿ ಅವಶ್ಯಕತೆಯಿರುವ ಕಡೆಗೆ ಗಮನ ನೀಡಿ ವಸ್ತುವನ್ನು ಉತ್ಪಾದಿಸಬೇಕಾಗುತ್ತದೆ ಅಥವಾ ದಿನದ ಅವಶ್ಯಕತೆಗಳನ್ನು ಪೂರೈಸುವ ಆಟೋ ಸೇವೆಯನ್ನು ನೀಡುವ ಉದ್ಯೋಗವನ್ನು ಮಾಡಬೇಕಾಗುತ್ತದೆ. ಅದನ್ನು ಕೋಷ್ಟಕ ೩.೨೨ ರಲ್ಲಿ ನೀಡಿರುವ ಮಾಹಿತಿಯಿಂದ ನೋಡಬಹುದಾಗಿದೆ.

**ಕೋಷ್ಟಕ-೩.೨೨**

**ಮಾರುಕಟ್ಟೆಯ ವಿವರ**

| ಕ್ರ. ಸಂ. | ಮಾರುಕಟ್ಟೆ | ಒಟ್ಟು | ಪ್ರತಿಶತ (%) |
|---|---|---|---|
| ೧ | ಗುಂಪಿನ ಸದಸ್ಯರು ಮತ್ತು ಖಾಸಗಿಯಾಗಿ ಮಾರಾಟ | ೦೨ | ೮ |
| ೨ | ಖಾಸಗಿಯಾಗಿ ಮಾರಾಟ/ವಸ್ತು ಪ್ರದರ್ಶನದಲ್ಲಿ ಭಾಗವಹಿಸುವುದು | ೧೩ | ೫೨ |
| ೩ | ಎನ್‌ಜಿಓ ಮೂಲಕ ಮಾರಾಟ | – | – |
| ೪ | ಸಂಘ – ಸಂಸ್ಥೆ | – | – |
| ೫ | ಸೇವೆ ನೀಡುವ ಮೂಲಕ (ಆಟೋರಿಕ್ಷಾ) | ೧೦ | ೪೦ |
| | **ಒಟ್ಟು** | **೨೫** | **೧೦೦** |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಸೇವಾವಲಯಕ್ಕೆ ಪ್ರತಿಶತ ೪೦ ಜನರು ತಮ್ಮ ಉದ್ಯೋಗವನ್ನು ಸಮರ್ಪಿಸಿ ಸಾರ್ವಜನಿಕ ಸೇವೆಯನ್ನು ನೀಡುತ್ತಿರುವುದು, ೫೨ ಪ್ರತಿಶತ ಫಲಾನುಭವಿಗಳು ವಸ್ತುಗಳನ್ನು ತಯಾರಿಸಿ ಖಾಸಗಿಯಾಗಿ/ ವಸ್ತು ಪ್ರದರ್ಶನದಲ್ಲಿ ಭಾಗವಹಿಸುವಿಕೆ ಮೂಲಕ ಮಾರಾಟ ಮಾಡುತ್ತಿದ್ದಾರೆ. ೦೮ ಪ್ರತಿಶತ ಫಲಾನುಭವಿಗಳು ಗುಂಪಿನ ಸದಸ್ಯರಿಗೆ ಹಾಗೂ ಖಾಸಗಿಯಾಗಿ ಮಾರಾಟ ಮಾಡುತ್ತಿರುವುದು ಕಂಡು ಬರುತ್ತದೆ.

ಸ್ವಯಂ ಉದ್ಯೋಗವನ್ನು ಕೈಗೊಂಡು ಸಾರ್ವಜನಿಕ ಸೇವಾ ವಲಯಕ್ಕೆ ಸೇವೆಯನ್ನು ನೀಡುವಂತಹ ಉದ್ಯೋಗವನ್ನು ಮಾಡುವುದು ಅಥವಾ ವಸ್ತುಗಳನ್ನು ತಯಾರಿಸಿ ಗ್ರಾಹಕರ ಅಭಿರುಚಿಗೆ ತಕ್ಕ ಹಾಗೆ ಅವುಗಳನ್ನು ಸಂಗ್ರಹಿಸಿ (ಪ್ಯಾಕ್ ಮಾಡಿ) ಮಾರಾಟ ಮಾಡುವುದು ಈ ಎರಡು ತರಹದ ಉದ್ಯೋಗಗಳಲ್ಲಿ ಉತ್ಪನ್ನ ವಸ್ತುಗಳನ್ನು ಮಾರಾಟ ಮಾಡುವವರು ಮೊದಲು ತಾನು ಉತ್ಪಾದಿಸುವ ವಸ್ತುವಿಗೆ ಗ್ರಾಹಕರು ಯಾವ ವರ್ಗದವರು ಎಂಬುದನ್ನು ತಿಳಿಯಬೇಕಾಗುತ್ತದೆ. ಪ್ರತಿಶತ ೧೦೦ ಫಲಾನುಭವಿಗಳಿಗೆ ಅವರು ತಯಾರಿಸುವ ಉತ್ಪನ್ನಗಳಿಗೆ ಬಿಪಿಎಲ್‌ವರ್ಗ, ಮಧ್ಯಮ ವರ್ಗದವರು ಹಾಗೂ ಶ್ರೀಮಂತ ವರ್ಗದವರೆಲ್ಲರೂ ಗ್ರಾಹಕರಾಗಿರುವುದನ್ನು ತಿಳಿದು ಕೊಳ್ಳಲಾಗಿದೆ.

**ಸ್ವಯಂ ಉದ್ಯೋಗ ಕೈಗೊಳ್ಳಲು ಮನೆಯಲ್ಲಿ ಹೆಚ್ಚು ಬೆಂಬಲ ನೀಡಿದವರು:**

ಸ್ವಯಂ ಉದ್ಯೋಗವನ್ನು ಕೈಗೊಳ್ಳಲು ಫಲಾನುಭವಿಯು ಸದಸ್ಯತ್ವವನ್ನು ಹೊಂದಲು ಪ್ರೇರಣೆ ಅಥವಾ ಅನುಮತಿಯನ್ನು/ ಬೆಂಬಲವನ್ನು ಹೆಚ್ಚು

ನೀಡಿದವರು ಯಾರು ಎಂಬುದರ ಕುರಿತು ತಿಳಿದುಕೊಳ್ಳಲು ಪ್ರಶ್ನೆಯನ್ನು ಕೇಳಲಾಗಿ, ಮಾಹಿತಿದಾರರು ನೀಡಿರುವ ಉತ್ತರವನ್ನು ಕೋಷ್ಟಕ-೩.೨೩ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ-೩.೨೩**

**ಸ್ವಯಂ ಉದ್ಯೋಗಕ್ಕೆ ಪ್ರೋತ್ಸಾಹ ನೀಡಿದವರು**

| **ಕ್ರಮ ಸಂಖ್ಯೆ** | **ಬೆಂಬಲ ನೀಡಿದವರು** | **ಒಟ್ಟು** | **ಪ್ರತಿಶತ (%)** |
|---|---|---|---|
| ೦೧ | ಯಜಮಾನ | ೦೪ | ೧೬ |
| ೦೨ | ತಂದೆ-ತಾಯಿ | ೧೪ | ೫೬ |
| ೦೩ | ಅಣ್ಣ-ತಮ್ಮ | ೦೧ | ೪ |
| ೦೪ | ಸ್ನೇಹಿತೆಯರು | ೦೬ | ೨೪ |
| | **ಒಟ್ಟು** | **೨೫** | **೧೦೦** |

ಮೇಲಿನ ಪಟ್ಟಿಯನ್ನು ಅವಲೋಕಿಸಿದಾಗ ಪ್ರತಿಶತ ೧೬ ಮಾಹಿತಿದಾರರು ಮನೆಯ ಯಜಮಾನ ಎಂದು ತಿಳಿಸಿದರೆ, ಪ್ರತಿಶತ ೫೬ ಜನರು ತಂದೆ-ತಾಯಿ ಎಂದು ತಿಳಿಸಿದ್ದಾರೆ. ಪ್ರತಿಶತ ೪ ರಷ್ಟು ಮಾಹಿತಿದಾರರು ಅಣ್ಣ-ತಮ್ಮ ಎಂದಿದ್ದಾರೆ, ೨೪ ಪ್ರತಿಶತ ಮಾಹಿತಿದಾರರು ಸ್ನೇಹಿತರೆಂದು ತಿಳಿಸಿರುವುದು ಕಂಡು ಬಂದಿದೆ.

**ದಿನ ನಿತ್ಯದ ವ್ಯವಹಾರಕ್ಕೆ ಬ್ಯಾಂಕಿನಲ್ಲಿ ಹೊಂದಿರುವ ಖಾತೆ:**

ಸ್ವಯಂ ಉದ್ಯೋಗದಿಂದ ಗಳಿಸಿದ ಆದಾಯದ ಉಳಿತಾಯ ಹಣವನ್ನು ಎಲ್ಲಿ ಇಡುತ್ತಾರೆ ಅಥವಾ ಈ ಹಣವನ್ನು ಹೇಗೆ ಉಪಯೋಗಿಸುತ್ತಾರೆ ಎಂಬ ಬಗ್ಗೆ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಉಳಿತಾಯದ ಹಣ ಇಡುವ ಸ್ಥಳ ಬ್ಯಾಂಕ್ ಎಂದು ತಿಳಿಸಿದ್ದಾರೆ. ದಿನ ನಿತ್ಯದ ಖರ್ಚಿಗೆ ಮನೆಯಲ್ಲಿ ಅಲ್ಪ ಭಾಗ ಇಟ್ಟಿರುತ್ತೇವೆ ಎಂಬ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿರುತ್ತಾರೆ.

**ಆರ್ಥಿಕ ಅಭಿವೃದ್ಧಿ ಸಾಧಿಸಲು ಸ್ವಯಂ ಉದ್ಯೋಗ ಸಹಕಾರಿಯಾಗಿದೆಯೇ:**

ಸರ್ಕಾರದ ಯಾವುದೇ ಒಂದು ಯೋಜನೆ ಫಲಪ್ರದಾಯಕವಾಗಬೇಕಾದರೆ ಆ ಯೋಜನೆಯ ಲಾಭ ಆ ಜನರಿಗೆ ದೊರೆತಾಗ ಮಾತ್ರ. ಹಾಗಾಗಿ ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿ ಜಾರಿಗೆ ತಂದಿರುವ ಯೋಜನೆಗಳಲ್ಲಿ ಒಂದಾದ ಸ್ವಯಂ ಉದ್ಯೋಗವು ಜನರಿಗೆ ಎಷ್ಟರ ಮಟ್ಟಿಗೆ ಆರ್ಥಿಕವಾಗಿ ಅಭಿವೃದ್ಧಿ ಸಾಧಿಸಲು ಸಹಕಾರಿಯಾಗಿದೆ ಎಂಬ ಬಗ್ಗೆ ಉತ್ತರವನ್ನು ಕಂಡು ಕೊಳ್ಳಲು ಪ್ರಯತ್ನಿಸಲಾಯಿತು, ಒಟ್ಟು ೨೫ ಮಾಹಿತಿದಾರರಲ್ಲಿ ಪ್ರತಿಶತ ೮೪ ರಷ್ಟು

ಮಾಹಿತಿದಾರರು ಜೀವನಮಟ್ಟ ಸುಧಾರಿಸಿಕೊಳ್ಳಲು ಅತಿ ಹೆಚ್ಚು ಸಹಕಾರಿಯಾಗಿದೆ ಎಂದಿದ್ದಾರೆ, ಪ್ರತಿಶತ ೧೬ ಮಾಹಿತಿದಾರರು ಸಹಕಾರಿಯಾಗಿದೆ ಎಂದಷ್ಟೇ ಉತ್ತರವನ್ನು ನೀಡಿರುವುದು ತಿಳಿದು ಬರುತ್ತದೆ.

**ಸ್ವಯಂ ಉದ್ಯಮ ನಡೆಸಲು ಮೊದಲಿಗೆ ಎದುರಿಸಿದ ಸಮಸ್ಯೆಗಳು:**

- ಪ್ರಾರಂಭದಲ್ಲಿ ಸ್ವಯಂ ಉದ್ಯೋಗಕ್ಕೆ ಹಣ ಹೊಂದಿಸುವುದು ಬಹಳ ಕಷ್ಟವಾಯಿತು.
- ಯಾವ ಸ್ಥಳದಲ್ಲಿ ಅಂಗಡಿ ಅಥವಾ ವ್ಯಾಪಾರ ಮಾಡಬೇಕೆಂಬುದು ಗೊಂದಲವಾಯಿತು.
- ಯಾವ ಉತ್ಪನ್ನಕ್ಕೆ ಮಾರುಕಟ್ಟೆಯಲ್ಲಿ ಬೇಡಿಕೆಯಿದೆ ಎಂಬ ಬಗ್ಗೆ ಚಿಂತೆಯಾಯಿತು.
- ಈಗಾಗಲೇ ಸಣ್ಣ ವ್ಯಾಪಾರ ಮಾಡುತ್ತಿದ್ದರಿಂದ ದೊಡ್ಡ ವ್ಯಾಪಾರದ ಸ್ಥಳಾವಕಾಶದ ವಿಷಯವಾಗಿ ಗೊಂದಲವಾಯಿತು.
- ಸೂಕ್ತವಾದ ಮೂಲ ಸೌಕರ್ಯದ ಕೊರತೆ ಎದುರಾಯಿತು.
- ಮಾರುಕಟ್ಟೆಯಲ್ಲಿ ಸ್ಪರ್ಧೆಯನ್ನು ಎದುರಿಸಬೇಕಾಯಿತು.
- ಫಲಾನುಭವಿಯ ಶೇಕಡಾ ಹಣವನ್ನು ಬ್ಯಾಂಕಿಗೆ ಹಾಕಿದ ನಂತರ ಹಣ ಬಿಡುಗಡೆ ಮಾಡುವುದರಿಂದ ಪ್ರಾರಂಭದಲ್ಲಿ ಹಣ ಹೊಂದಿಸಿ ಕೊಳ್ಳಲು ತೊಂದರೆಯಾಯಿತು.
- ಮೊದಲಿಗೆ ಗ್ರಾಹಕರು ಉತ್ಪನ್ನ ವಸ್ತುಗಳನ್ನು ಕೊಳ್ಳಲು ಕಡಿಮೆ ಸಂಖ್ಯೆಯಲ್ಲಿ ಬರುತ್ತಿದ್ದರಿಂದ ಪ್ರಾರಂಭದಲ್ಲಿ ಲಾಭದ ಪ್ರಮಾಣವು ಕಡಿಮೆಯಾಯಿತು.
- ಬ್ಯಾಂಕ್ ಸಾಲ ಪಡೆಯುವುದು ಅಲ್ಪ ವಿಳಂಬವಾಯಿತು.
- ಬ್ಯಾಂಕ್‌ಗಳಿಗೆ ನೀಡುವ ದಾಖಲೆಗಳು ಸರಳೀಕರಣವಾಗಿಲ್ಲದಿರುವುದು.
- ವಿಶೇಷ ಸಂದರ್ಭಗಳಲ್ಲಿ ವಸ್ತು ಪ್ರದರ್ಶನದಲ್ಲಿ ಪಾಲ್ಗೊಳ್ಳಲು ಅರ್ಜಿ ಹಾಕಿದಾಗ ಎಲ್ಲರಿಗೂ ಸ್ಥಳಾವಕಾಶ ಸಿಗದಿರುವುದು.

**ಬೇರೆ ಯೋಜನೆಗಳಲ್ಲಿ ದೊರೆಯುವ ಸಹಾಯಧನದ ಬಗ್ಗೆ:**

ಸ್ವಯಂ ಉದ್ಯೋಗ ಕೈಗೊಳ್ಳಲು ಇನ್ನಿತರ ಸರ್ಕಾರದ ವಿವಿಧ ಇಲಾಖೆ/ಯೋಜನೆಗಳ ಅಡಿಯಲ್ಲಿ ನೀಡುತ್ತಿರುವ ಸಹಾಯಧನದ ಬಗ್ಗೆ ತಿಳುವಳಿಕೆ ಇರುವದನ್ನು ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಮಾಹಿತಿದಾರರು ನೀಡಿರುವ ಅಂಕಿ ಅಂಶಗಳನ್ನು ಕೋಷ್ಟಕ-೩.೨೪ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ-೩.೨೪**
**ಸರ್ಕಾರದ ಇತರೆ ಯೋಜನೆಗಳ ಸಹಾಯಧನದ ಬಗ್ಗೆ**

| ಕ್ರಮ ಸಂಖ್ಯೆ | ಸಹಾಯಧನದ ಬಗ್ಗೆ | ಒಟ್ಟು | ಪ್ರತಿಶತ (%) |
|---|---|---|---|
| ೦೧ | ಹೌದು | ೧೬ | ೬೪ |
| ೦೨ | ಸರಿಯಾಗಿ ಗೊತ್ತಿಲ್ಲ | ೦೯ | ೩೬ |
| | ಒಟ್ಟು | ೨೫ | ೧೦೦ |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಪ್ರತಿಶತ ೬೪ ರಷ್ಟು ಮಾಹಿತಿದಾರರು ಸರ್ಕಾರದ ಇನ್ನಿತರೆ ಯೋಜನೆಗಳಲ್ಲಿ ದೊರೆಯುವ ಸಹಾಯಧನದ ಬಗ್ಗೆ ತಿಳುವಳಿಕೆಯನ್ನು ಹೊಂದಿದವರಾಗಿದ್ದಾರೆ. ಪ್ರತಿಶತ ೩೬ ರಷ್ಟು ಸದಸ್ಯರು ಸರಿಯಾಗಿ ನೆನಪಿಲ್ಲ ಎಂಬ ಮಾಹಿತಿಯನ್ನು ನೀಡಿರುವುದು ಕೋಷ್ಟಕದಲ್ಲಿ ಸಂಗ್ರಹಿಸಿರುವ ಮಾಹಿತಿಯಿಂದ ಕಂಡು ಬಂದಿದೆ.

**೩.೪. ನಗರ ಪ್ರದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ: (ಡ್ವಾಕ್ವಾ ಯೋಜನೆ) Development of Women and Children in Urban Area (DWCUA).**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಕಾರ್ಯಕ್ರಮಗಳಲ್ಲಿ ಒಂದಾದ ನಗರ ಪ್ರದೇಶದಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ (DWCUA) ಎಂಬ ಉಪ ಕಾರ್ಯಕ್ರಮದಲ್ಲಿ ಗುಂಪು ಉದ್ಯೋಗವು ಅತಿ ಮಹತ್ವದ ಒಂದು ಉದ್ಯೋಗ ಕಾರ್ಯಕ್ರಮವಾಗಿ ಜಾರಿಯಲ್ಲಿದೆ. ಈ ಕಾರ್ಯಕ್ರಮ ಮಹಿಳೆಯರಿಗಾಗಿಯೇ ಇರುವ ಯೋಜನೆಯಾಗಿರುವುದರಿಂದ ಇದರ ಯಶಸ್ವಿಯ ಬಗ್ಗೆ ಅಧ್ಯಯನ ಕೈಗೊಳ್ಳಲಾಯಿತು. ಮಾಹಿತಿದಾರರಿಂದ ಕಲೆಹಾಕಿದ ಪ್ರಶ್ನೆಗೆ ಉತ್ತರವನ್ನು ಮುಂದೆ ನೋಡಬಹುದಾಗಿದೆ.

**ಗುಂಪಿನ ನಾಯಕಿಯ ಆಯ್ಕೆಯ ಕ್ರಮ:**

ಭಾರತವು ವಿಶ್ವದಲ್ಲೆ ಅತಿದೊಡ್ಡ ಪ್ರಜಾಪ್ರಭುತ್ವವನ್ನು ಹೊಂದಿರುವ ರಾಷ್ಟ್ರವಾಗಿದ್ದು, ಎಲ್ಲ ನಾಯಕ ಮುಖ್ಯಸ್ಥರ ಆಯ್ಕೆಯೂ ಸಹ ಪ್ರಜಾಪ್ರಭುತ್ವ ಮಾದರಿಯಲ್ಲಿ ನಡೆಯುತ್ತಿದೆ. ಯಾವುದೇ ಒಂದು ಗುಂಪು ಅಥವಾ ಸಂಘ ಸಂಸ್ಥೆಗೆ ಮುಖ್ಯಸ್ಥರೊಬ್ಬರಿದ್ದರೆ ಮಾತ್ರ ಹೆಚ್ಚು ಪರಿಣಾಮಕಾರಿಯಾಗಿ ಆ ಒಂದು ಸಂಸ್ಥೆ ಮುನ್ನಡೆಯಲು ಸಾಧ್ಯವಿರುತ್ತದೆ. ಹಾಗಾಗಿ ಈ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು. ಗುಂಪು ಉದ್ಯೋಗದಲ್ಲಿರುವ ಎಲ್ಲಾ ೪೦ ಜನರು ಸಹ ನಾಯಕಿಯ ಆಯ್ಕೆಯ ಕ್ರಮವನ್ನು ಅವಿರೋಧವಾಗಿ ಆಯ್ಕೆ ಮಾಡಲಾಗು (೧೦೦% ರಷ್ಟು) ವುದು ಎಂದು ತಿಳಿಸಿದ್ದಾರೆ. ಈ ಮಾಹಿತಿಯಿಂದ ನಮಗೆ

ಅವಿರೋಧ ಆಯ್ಕೆ ಮೂಲಕ ನಾಯಕಿಯ ಆಯ್ಕೆಯಾಗುವುದರಿಂದ ಪರೋಕ್ಷವಾಗಿ ಒಗ್ಗಟ್ಟು ಗಟ್ಟಿಯಾಗಿರುತ್ತದೆ ಎಂಬುದು ತಿಳಿಯುತ್ತದೆ. ಯಾವುದೇ ಸಂಘ/ಸಂಸ್ಥೆ ಗುಂಪಿಗೆ ಪ್ರತಿನಿಧಿಗಳ ಆರೋಗ್ಯಕರ ಅವಿರೋಧ ಆಯ್ಕೆಯಿಂದ ಹೆಚ್ಚು ಅಭಿವೃದ್ಧಿಯನ್ನು ಸಾಧಿಸಬಹುದೆಂದು ತಿಳಿಸುತ್ತದೆ.

**ನಾಯಕಿಯ ಕಾರ್ಯಗಳು:**

ಈ ಯೋಜನೆಯಲ್ಲಿ ಪ್ರತಿನಿಧಿ ಅಥವಾ ನಾಯಕಿಯ ಕಾರ್ಯಗಳನ್ನು ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ೧೦೦ ರಷ್ಟು ಮಾಹಿತಿದಾರರು ಸಂಘದ ಆಗು ಹೋಗುಗಳನ್ನು ನೋಡಿಕೊಳ್ಳುತ್ತಾರೆ, ಪುಸ್ತಕ ನಿರ್ವಹಣೆ/ಲೆಕ್ಕಪತ್ರ/, ಸಭೆ ಕರೆಯುವುದು, ಬ್ಯಾಂಕ್ ಸಾಲ ತರುವುದು, ಇತ್ಯಾದಿ ನಾಯಕಿಯ ಕಾರ್ಯಗಳ ಬಗ್ಗೆ ತಿಳಿದುಕೊಂಡಿರುವುದು ಕಂಡು ಬಂದಿದೆ.

**ಗುಂಪಿನಲ್ಲಿ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳು:**

ಅಧ್ಯಯನದ ದೃಷ್ಟಿಯಿಂದ ಗುಂಪಿನ ಸದಸ್ಯರು ಗುಂಪಿನಲ್ಲಿ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳ ಬಗ್ಗೆ ಎಷ್ಟು ತಿಳಿದು ಕೊಂಡಿದ್ದಾರೆ ಎಂಬುದನ್ನು ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಗುಂಪಿಗೆ ಸಂಬಂಧಿಸಿದ ಎಲ್ಲಾ ಕೆಲಸಗಳಲ್ಲಿ ಸಮನಾಗಿ ಭಾಗಿಯಾಗುತ್ತೇವೆ ಎಂದು ತಿಳಿಸಿದ್ದಾರೆ, ಗುಂಪಿನಲ್ಲಿ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳು/ಕಾರ್ಯಗಳ ಬಗ್ಗೆ ತಿಳಿದು ಕೊಂಡಿರುವುದು ಕಂಡು ಬಂದಿದೆ.

**ಸಭೆಯಲ್ಲಿ ಯಾವ ಯಾವ ವಿಷಯಗಳನ್ನು ಚರ್ಚಿಸಲಾಗುವುದು:**

ಗುಂಪು ಉದ್ಯೋಗದ ಸಭೆಯಲ್ಲಿ ಯಾವ ಯಾವ ವಿಷಯಗಳನ್ನು ಚರ್ಚಿಸಲಾಗುವುದು ಎಂಬುದನ್ನು ಮಾಹಿತಿದಾರರಿಂದ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಇದರಿಂದ ಅವರು ನೀಡಿರುವ ಮಾಹಿತಿಯನ್ನು ಕೋಷ್ಟಕ ೩.೨೫ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ-೩.೨೫**

**ಗುಂಪಿನಲ್ಲಿ ಚರ್ಚಿಸುವ ವಿಷಯಗಳು**

| ಕ್ರ.ಸಂ | ವಿಷಯಗಳ ಚರ್ಚೆ | ಒಟ್ಟು | ಪ್ರತಿಶತ(%) |
|---|---|---|---|
| ೦೧ | ಪುಸ್ತಕ ನಿರ್ವಹಣೆ/ಲೆಕ್ಕಪತ್ರ/ | ೧೧ | ೨೭.೫ |
| ೦೨ | ಬ್ಯಾಂಕ್‌ಸಾಲ ತರುವುದು/ | ೦೪ | ೧೦ |
| ೦೩ | ಗುಂಪಿನ ಆಯ ವ್ಯಯ | ೦೩ | ೭.೫ |
| ೦೪ | ಮಾರುಕಟ್ಟೆ/ವ್ಯಾಪಾರ | ೦೦ | ೦.೦ |
| ೦೫ | ಮೇಲಿನ ಎಲ್ಲವೂ | ೨೨ | ೫೫ |
| | ಒಟ್ಟು | ೪೦ | ೧೦೦ |

ಮೇಲಿನ ಕೋಷ್ಟಕದಲ್ಲಿ ಪ್ರತಿಶತ ೨೭.೫ ರಷ್ಟು ಮಾಹಿತಿದಾರರು  ಪುಸ್ತಕ ನಿರ್ವಹಣೆ ಹಾಗೂ ಲೆಕ್ಕ ಪತ್ರ ಎಂದು, ಪ್ರತಿಶತ ೧೦ ರಷ್ಟು ಮಾಹಿತಿದಾರರು ಬ್ಯಾಂಕ್ ಸಾಲದ ಕುರಿತು, ಪ್ರತಿಶತ ೭.೫ ರಷ್ಟು ಜನರು ಗುಂಪಿನ ಆಯವ್ಯಯದ ವಿಷಯವಾಗಿ, ಪ್ರತಿಶತ ೫೫ ರಷ್ಟು ಮಾಹಿತಿದಾರರು ಮೇಲಿನ ಎಲ್ಲಾ ವಿಷಯಗಳನ್ನು ಚರ್ಚಿಸಲಾಗುವುದೆಂದು ತಿಳಿಸಿರುತ್ತಾರೆ.

**ಹಾಜರಾತಿ ಪುಸ್ತಕ ಇಡಲಾಗಿದೆಯೇ:**

ಹಾಜರಾತಿ ಎಂಬುದು ಎಲ್ಲ ಗುಂಪಿಗೆ ಮುಖ್ಯವಾದುದು. ಒಂದು ನಿರ್ಧಾರ ಅಥವಾ ತೀರ್ಮಾನವಾಗುವುದು ಹೆಚ್ಚಿನ ಹಾಜರಾತಿಯಿಂದ ಎಂಬುದು ಸತ್ಯವಾದುದಾಗಿದೆ. ಈ ಯೋಜನೆಯಲ್ಲಿ ಮಹಿಳೆಯರು ಮಾಡುವ ಉದ್ಯೋಗ ಗುಂಪು ಉದ್ಯೋಗವಾದ್ದರಿಂದ ಹಾಜರಾತಿ ಪುಸ್ತಕದ ಜೊತೆಗೆ ಹಾಜರಾತಿಯೂ ಸಹ ೧೦೦ ರಷ್ಟಿರುವುದು ತಿಳಿದು ಬಂದಿದೆ. ಗುಂಪು ಉದ್ಯೋಗದಲ್ಲಿ ಪ್ರತಿ ಗುಂಪಿನಲ್ಲಿ ೦೫-ರಿಂದ ೧೦ ಕನಿಷ್ಟ ಸದಸ್ಯರು ಮಾತ್ರ ಇರುವುದರಿಂದ ಹಾಜರಾತಿ ೧೦೦ ರಷ್ಟು ಇರುವುದು ಕಂಡು ಬಂದಿದೆ.

**ಗುಂಪಿನಲ್ಲಿ ಉಳಿತಾಯ ಮಾಡುವ ಹಣ:**

ಮಾಹಿತಿದಾರರಿಂದ ಗುಂಪಿನಲ್ಲಿ ಉಳಿತಾಯ ಮಾಡುತ್ತಿರುವ ಹಣವನ್ನು ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ೫೦ ರಿಂದ ೧೦೦ ರೂ ವರೆಗೆ ಮಾಸಿಕವಾಗಿ ಉಳಿತಾಯ ಮಾಡುವುದಾಗಿ ತಿಳಿಸಿದ್ದಾರೆ.

**ಉಳಿತಾಯ ಮಾಡುವ ಹಣ:**

ಗುಂಪು ಉದ್ಯೋಗದಲ್ಲಿ ಉಳಿತಾಯ ಮಾಡುವ ಹಣವನ್ನು ಎಲ್ಲಿ ಕಟ್ಟುತ್ತಾರೆ ಅಥವಾ ಈ ಹಣವನ್ನು ಹೇಗೆ ಉಪಯೋಗಿಸುತ್ತಾರೆ ಎಂಬ ಬಗ್ಗೆ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೪೦ ರಷ್ಟು ಮಾಹಿತಿದಾರರು ಉಳಿತಾಯದ ಹಣ ಇಡುವುದು ಬ್ಯಾಂಕ್ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿರುತ್ತಾರೆ.

**ಯೋಜನೆಗೆ ಮೊದಲು ಗುಂಪು ಉಳಿತಾಯ:**

ಎಸ್‌ಜೆಎಸ್‌ಆರ್‌ವೈ ಯೋಜನೆ ಜಾರಿಯಾಗುವುದಕ್ಕೆ ಮುಂಚೆ ಗುಂಪು ಉದ್ಯೋಗ ಕೈಗೊಂಡಿರುವುದರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಗುಂಪು ಉದ್ಯೋಗವನ್ನು ಮಾಡಿಲ್ಲದಿರುವುದರ ಬಗ್ಗೆ ತಿಳಿಸಿರುತ್ತಾರೆ, ಇದರಿಂದ ನಮಗೆ ಈ ಯೋಜನೆಗಿಂತ ಮೊದಲು ಮಹಿಳೆಯರು ಗುಂಪು ಉದ್ಯೋಗ ಕೈಗೊಂಡಿಲ್ಲದಿರುವುದರ ವಿವರವನ್ನು ತಿಳಿದು ಕೊಂಡಂತಾಗಿದೆ.

**ಗುಂಪಿನಲ್ಲಿ ಸಾಲ ತೆಗೆದು ಕೊಳ್ಳುವ ಬಗೆ :**

ಗುಂಪು ಉದ್ಯೋಗ ಕೈಗೊಂಡಿರುವ ಸದಸ್ಯರು ಗುಂಪು ಉದ್ಯೋಗದಲ್ಲಿ ಸಾಲ ಮಾಡುವ ಬಗ್ಗೆ ಯಾವ ರೀತಿಯ ತಿಳುವಳಿಕೆಯನ್ನು ಹೊಂದಿದ್ದಾರೆ ಎಂಬುದರ ವಿಷಯವಾಗಿ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಗುಂಪು ಉದ್ಯೋಗದಲ್ಲಿ ಸಾಲ ಪಡೆಯುವ ವಿಧಾನವು ಪ್ರತಿನಿಧಿ ಮೂಲಕ ಪ್ರಾರಂಭವಾಗುತ್ತದೆ ಎಂದು ತಿಳಿಸಿರುವುದು ಕಂಡು ಬಂದಿದೆ.

**ಗುಂಪು ಎದುರಿಸುತ್ತಿರುವ ಸಮಸ್ಯೆಗಳು:**

ಈ ಯೋಜನೆಯ ಅಡಿಯಲ್ಲಿ ಫಲಾನುಭವಿಗಳಾಗಿರುವ ಎಲ್ಲಾ ಮಾಹಿತಿದಾರರು ಉತ್ಪಾದಿತ ವಸ್ತುಗಳ ಮಾರಾಟದಲ್ಲಿ ಅಡೆತಡೆಗಳನ್ನು ಎದುರಿಸುತ್ತಿರುವುದನ್ನು ವ್ಯಕ್ತಪಡಿಸಿರುತ್ತಾರೆ. ಕೆಲವು ಸಂದರ್ಭದಲ್ಲಿ ಜನರಿಗೆ ಸಾಲದ ರೂಪದಲ್ಲಿ ಉತ್ಪಾದಿತ ವಸ್ತುಗಳನ್ನು ಕೆಲವು ಅವಧಿಯವರೆಗೆ ನೀಡಬೇಕಾಗಿ ಬರುತ್ತದೆ ಇದರಿಂದ ಹಣದ ವಹಿವಾಟು ಸಮಸ್ಯೆಯಾಗುತ್ತಿದೆ ಎನ್ನುತ್ತಾರೆ.

**ಗುಂಪು ಉದ್ಯೋಗಕ್ಕೆ ಬ್ಯಾಂಕ್‌ನಿಂದ ಪಡೆದಿರುವ ಸಾಲ ಎಷ್ಟು ಮತ್ತು ಗುಂಪಿನಿಂದ ಹಾಕಿರುವ ಹಣವೆಷ್ಟು:**

ಕೈಗೊಂಡಿರುವ ಉದ್ಯೋಗದ ಘಟಕ ವೆಚ್ಚದ ಮೇಲೆ ಇದು ನಿರ್ಧಾರವಾಗುವುದು, ಯೋಜನೆಯಲ್ಲಿ ಅಧಿಕಾರಿಗಳು/ ಬ್ಯಾಂಕ್‌ನ ಪ್ರತಿನಿಧಿಗಳು ಉದ್ಯೋಗ ಕೈಗೊಳ್ಳುವ ಸ್ಥಳಕ್ಕೆ ಭೇಟಿ ನೀಡಿ ನಂತರ ಹಣ ಬಿಡುಗಡೆ ಮಾಡುವುದರಿಂದ ತದನಂತರದಲ್ಲಿ ಗುಂಪಿನ ಸದಸ್ಯರು ಮಾರ್ಜಿನ್ ಹಣ ನೀಡಬೇಕಾಗುತ್ತದೆ. ಗುಂಪಿನ ಸದಸ್ಯರು ಸರ್ಕಾರದಿಂದ ಯೋಜನಾ ಮೊತ್ತದ ಶೇ ೫೦ ರಷ್ಟು ಹಣವನ್ನು ಸಹಾಯಧನವಾಗಿ ಪಡೆಯುತ್ತಾರೆ.

**ದಿನ ನಿತ್ಯದ ವ್ಯವಹಾರಕ್ಕೆ ಬ್ಯಾಂಕಿನಲ್ಲಿ ಹೊಂದಿರುವ ಖಾತೆ:**

ಗುಂಪಿನಲ್ಲಿ ಮಾಡುವ ಉದ್ಯೋಗಕ್ಕೆ ದಿನ ನಿತ್ಯದ ವ್ಯವಹಾರಕ್ಕೆ ಒಂದು ಖಾತೆಯನ್ನು ಬ್ಯಾಂಕಿನಲ್ಲಿ ಹೊಂದುವುದು ಅವಶ್ಯಕವಾಗಿದ್ದು, ಅದರ ಮೂಲಕವೇ ಬ್ಯಾಂಕ್ ಸಬ್ಸಿಡಿ, ಬ್ಯಾಂಕ್ ಸಾಲ ಪಡೆಯುವುದಾಗಿರುತ್ತದೆ. ಈ ಬಗ್ಗೆ ಮಾಹಿತಿದಾರರು ಎಷ್ಟರ ಮಟ್ಟಿಗೆ ಜ್ಞಾನವನ್ನು ಹೊಂದಿದ್ದಾರೆ ಎಂಬ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಗುಂಪು ಉದ್ಯೋಗದಲ್ಲಿ ಗುಂಪಿನ ಉಳಿತಾಯ ಖಾತೆ ಹಾಗೂ ಬ್ಯಾಂಕ್ ಸಾಲದ ಖಾತೆಯನ್ನು ಹೊಂದಿರುವುದಾಗಿ ತಿಳಿಸಿರುತ್ತಾರೆ. ಇದರಿಂದ ನಿತ್ಯದ ವ್ಯವಹಾರಕ್ಕೆ ಬ್ಯಾಂಕಿನಲ್ಲಿ ಹೊಂದಿರುವ ಖಾತೆಯ ಬಗ್ಗೆ ತಿಳುವಳಿಕೆಯನ್ನು ಹೊಂದಿದವರಾಗಿದ್ದಾರೆ.

**ಉದ್ಯೋಗ ಕೈಗೊಳ್ಳಲು ಇನ್ನಿತರ ಯೋಜನೆಗಳು ನೀಡುತ್ತಿರುವ ಸಹಾಯಧನದ ಬಗ್ಗೆ ತಿಳುವಳಿಕೆ:**

ಪ್ರತಿಶತ ೮೫ ರಷ್ಟು ಮಾಹಿತಿದಾರರು ಇನ್ನಿತರೆ ಯೋಜನೆಗಳಲ್ಲಿ ದೊರೆಯುವ ಸಹಾಯಧನದ ಬಗ್ಗೆ ತಿಳುವಳಿಕೆಯನ್ನು ಹೊಂದಿದವರಾಗಿದ್ದಾರೆ. ಪ್ರತಿಶತ ೧೫ ರಷ್ಟು ಸದಸ್ಯರು ಸರಿಯಾಗಿ ಗೊತ್ತಿಲ್ಲ ಎಂದು ತಿಳಿಸಿರುವುದು ಕಂಡು ಬಂದಿದೆ.

**ಗುಂಪು ಉದ್ಯೋಗದಲ್ಲಿ ಉತ್ಪಾದಿಸುತ್ತಿರುವ ವಸ್ತುಗಳ ವಿವರ:**

- ಚರ್ಮ ಹದ ಮಾಡುವುದು.
- ಹೋಮ್ ಪ್ರಾಡಕ್ಟ್ ಮಾಡುವುದು
- ಬಟ್ಟೆ ವ್ಯಾಪಾರ
- ಶ್ಯಾವಿಗೆ ಮಾಡುವುದು
- ಇಟ್ಟಂಗಿ ಮಾಡುವುದು

**ಗುಂಪು ಉದ್ಯೋಗದಲ್ಲಿ ತೊಡಗಿಸಿ ಕೊಂಡ ನಂತರ ಆದ ಅನುಕೂಲಗಳು:**

ಸಾಮಾನ್ಯವಾಗಿ ಗುಂಪು ಉದ್ಯೋಗದಲ್ಲಿ ಸದಸ್ಯರಾಗಿರುವ ಎಲ್ಲರೂ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಈ ಕೆಳಗಿನಂತೆ ಕ್ರೊಢೀಕರಿಸಲಾಗಿದೆ.

- ಆರ್ಥಿಕವಾಗಿ ಸದೃಢವಾಗಲು ಸಹಾಯಕವಾಯಿತು.
- ಕುಟಂಬದಲ್ಲಿ ಆತ್ಮವಿಶ್ವಾಸ ಹೆಚ್ಚಿತು.
- ಉದ್ಯೋಗದ ಚಿಂತೆ ದೂರವಾಯಿತು.
- ಮಕ್ಕಳ ಶಿಕ್ಷಣಕ್ಕೆ ಅನುಕೂಲವಾಯಿತು.
- ದಿನ ನಿತ್ಯದ ಆಗು ಹೋಗುವ ವ್ಯವಹಾರಗಳಿಗೆ ತುಂಬಾ ಅನುಕೂಲಕರವಾಗಿದೆ.
- ಲೇವಾದೇವಿ ವ್ಯವಹಾರ ಮಾಡುವುದು ತಪ್ಪಿತು.
- ಮಕ್ಕಳ ಮದುವೆ ಮಾಡಲು ಹಣಕಾಸು ಕೂಡಿಡಲು ಸಹಕಾರಿಯಾಯಿತು.
- ನೆಮ್ಮದಿ ದೊರೆತಿದೆ.
- ಗುಂಪಿನ ಚರ್ಚೆಯಲ್ಲಿ ಪರೋಕ್ಷವಾಗಿ ಸಮಾಜದಲ್ಲಿ ನಡೆಯುವ ಸ್ಪರ್ಧೆ ಹಾಗೂ ಇನ್ನಿತರೆ ಚಟುವಟಿಕೆಗಳ ಬಗ್ಗೆ ತಿಳಿದುಕೊಳ್ಳಲು ಸಹಾಯಕವಾಯಿತು.
- ಸಾಮಾಜಿಕ ಸೇವಾ ಮನೋಭಾವ ಗೊತ್ತಾಯಿತು.
- ಒಗ್ಗಟ್ಟಿನಲ್ಲಿ ಬಲವಿದೆ ಎಂಬುದು ತಿಳಿಯಿತು.

- ಕುಟುಂಬದ ಹೊರಗೆ ಬರಲು ಸಾಧ್ಯವಾಯಿತು.
- ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಸ್ಥಳಗಳಿಗೆ ಸ್ವತಂತ್ರವಾಗಿ ಹೋಗಿ ಬರಲು ಸಾಧ್ಯವಾಯಿತು.
- ಮಹಿಳೆಯರಿಗೆ ಸಮಾಜದಲ್ಲಿರುವ ಹಕ್ಕುಗಳ ಬಗ್ಗೆ ತಿಳಿದು ಕೊಳ್ಳಲಾಯಿತು.
- ಮಹಿಳಾ ದೌರ್ಜನ್ಯದ ಬಗ್ಗೆ ಹಾಗೂ ಅನ್ಯಾಯದ ಹೋರಾಟದ ಬಗ್ಗೆ ತಿಳಿದುಕೊಳ್ಳಲು ಅನುಕೂಲವಾಯಿತು.

**ಗುಂಪು ಉದ್ಯೋಗದಲ್ಲಿ ಆರಂಭದಲ್ಲಿ ಸಮಸ್ಯೆಗಳಿಗೆ ಕಂಡು ಕೊಂಡ ಪರಿಹಾರಗಳು:**

ಮೇಲಿನ ಪ್ರಶ್ನೆಗೆ ಮಾಹಿತಿದಾರರು ಸಾಮನ್ಯವಾಗಿ ನೀಡಿರುವ ಉತ್ತರವನ್ನು ಈ ಕೆಳಗಿನಂತೆ ನೀಡಲಾಗಿದೆ.

- ಹಣಕಾಸಿನ ಸಮಸ್ಯೆ ಉದ್ಭವಿಸಿದ್ದರಿಂದ ಬ್ಯಾಂಕ್ ಮೂಲಕ ಸಾಲ ಸೌಲಭ್ಯ ಪಡೆದು ಕೊಳ್ಳಲಾಯಿತು.
- ಪ್ರಾರಂಭದಲ್ಲಿ ಯಾವ ವಸ್ತುವನ್ನು ಉತ್ಪಾದಿಸಬೇಕು ಎಂಬ ಗೊಂದಲ ಉಂಟಾಯಿತು. ಎಸ್‌ಜೆಎಸ್‌ಆರ್‌ವೈನ ಅಧಿಕಾರಿಗಳು ಮತು ಸಿಡಿಎಸ್‌ನ ಪದಾಧಿಕಾರಿಗಳು ನೀಡಿದ ಸಲಹೆಯಂತೆ ವಸ್ತುವನ್ನು ತಯಾರಿಸಲಾಯಿತು.
- ಪ್ರಾರಂಭದಲ್ಲಿ ಹಾಜರಾತಿ ಕಡಿಮೆ ಇದ್ದರಿಂದ ಎಲ್ಲಾ ಸದಸ್ಯರಿಗೆ ಸಭೆಯಲ್ಲಿ ಕಡ್ಡಾಯವಾಗಿ ಹಾಜರಾಗುವಂತೆ ತಿಳಿಸಲಾಯಿತು.
- ಆರಂಭದಲ್ಲಿ ಕೆಲವು ಅಕ್ಕ ಪಕ್ಕದ ಓಣಿಯ ಜನರು ಪ್ರಾರಂಭದಲ್ಲಿ ಗುಂಪು ಉದ್ಯೋಗದ ವಿಷಯವಾಗಿ ಗೊಂದಲದಿಂದಿದ್ದರು ಅದನ್ನು ಅಧಿಕಾರಿಗಳ ಮೂಲಕ ಪರಿಹರಿಸಲಾಯಿತು.
- ಉತ್ಪಾದಿತ ವಸ್ತುಗಳಿಗೆ ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ಇರುವ ಗೊಂದಲವನ್ನು ಎಸ್‌ಜೆಎಸ್‌ಆರ್‌ವೈ ಅಧಿಕಾರಿಗಳ ಸಲಹೆಯಂತೆ ಕ್ರಮ ಕೈಗೊಳ್ಳಲಾಯಿತು.
- ಸ್ಥಳಾವಕಾಶದ ಬಗ್ಗೆ ಆದ ಗೊಂದಲವನ್ನು ಎಲ್ಲಾ ಸದಸ್ಯರೊಂದಿಗೆ ಚರ್ಚಿಸಿ ಅಂತಿಮ ತೀರ್ಮಾನ ಮಾಡಲಾಯಿತು.

**ಗುಂಪಿನಿಂದ ಕೈಗೊಂಡಿರುವ ಉತ್ಪಾದನೆಗೆ ಗುಣಮಟ್ಟದ (ವಿವಿಧ ಕಂಪನಿಗಳಿಂದ) ಸ್ಪರ್ಧೆ:**

ಗುಂಪು ಉದ್ಯೋಗದಲ್ಲಿ ಕೈಗೊಂಡಿರುವ ವಸ್ತುಗಳಿಗೆ ಮಾರುಕಟ್ಟೆ ವ್ಯವಸ್ಥೆ ಮತ್ತು ಅವುಗಳಿಗೆ ವಿವಿಧ ಕಂಪನಿಗಳಿಂದ ಪೈಪೋಟಿ, ಈ ವಿಷಯವಾಗಿ ಮಾಹಿತಿದಾರರಿಂದ ಮಾಹಿತಿಯನ್ನು ತಿಳಿದುಕೊಳ್ಳಲಾಯಿತು. ೧೬ ರಷ್ಟು ಮಾಹಿತಿದಾರರು ಗುಂಪಿನಿಂದ ಕೈಗೊಂಡಿರುವ ಉತ್ಪಾದನೆಗೆ ಗುಣಮಟ್ಟದ (ವಿವಿಧ

ಕಂಪನಿಗಳಿಂದ) ಸ್ಪರ್ಧೆಯನ್ನು ಎದುರಿಸುತ್ತಿರುವ ಬಗ್ಗೆ ತಿಳಿಸಿದ್ದಾರೆ. ೨೪ ಜನರು ಹಾಗೇನು ಇಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ಮೇಲಿನ ಅಂಕಿ ಅಂಶಗಳಿಂದ ತಿಳಿಯಬಹುದು.

**ಗುಂಪಿನ ಸದಸ್ಯರಲ್ಲಿ ಉದ್ಯೋಗಕ್ಕೆ ಸಂಬಂಧಿಸಿದಂತ ಭಿನ್ನಾಭಿಪ್ರಾಯಗಳು:**

ಗುಂಪಿನಲ್ಲಿ ಮಾಡುವ ಉದ್ಯೋಗ ಎಂದರೆ ವಿಭಿನ್ನವಾದ ವಿಷಯಗಳು ಅಭಿಪ್ರಾಯಗಳು ಬರಬಹುದು ಇನ್ನಿತರ ಸಮಸ್ಯೆಗಳು ಇರಬಹುದು ಎಂದು ತಿಳಿದು ಈ ಬಗ್ಗೆ ಮಾಹಿತಿದಾರರಿಂದ ಮಾಹಿತಿ ಸಂಗ್ರಹಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಗುಂಪಿನಲ್ಲಿ ಭಿನ್ನಾಭಿಪ್ರಾಯವಿಲ್ಲ ಎಂದು ತಿಳಿಸಿದ್ದಾರೆ.

**ಗುಂಪು ಉದ್ಯೋಗದ ಬಗ್ಗೆ ತಿಳಿಸಿ ಕೊಟ್ಟವರು:**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಫಲಾನುಭವಿಗಳಾಗಲು ನಿಮಗೆ ಮಾಹಿತಿ ನೀಡಿದವರು ಯಾರು ಎಂಬ ಪ್ರಶ್ನೆಗೆ ಫಲಾನುಭವಿಗಳು ಎಸ್.ಜೆ.ಎಸ್.ಆರ್.ವೈ ಅಧಿಕಾರಿಗಳು, ನಗರ ಪಾಲಿಕೆ/ನಗರ ಸಭೆ ಸದಸ್ಯರು, ಆರ್‌ಸಿವಿ, ಎನ್.ಹೆಚ್.ಸಿ. ಎಂಬ ಉತ್ತರವನ್ನು ಪ್ರತಿಶತ ೧೦೦ ರಷ್ಟು ಮಾಹಿತಿದಾರರು ತಿಳಿಸಿದ್ದಾರೆ. ಯಾವುದೇ ಯೋಜನೆಯು ಜನರಿಗೆ ತಿಳಿಯ ಬೇಕಾದರೆ ಮೊದಲು ಅದರ ಬಗ್ಗೆ ಸ್ಪಷ್ಟವಾದ ಮಾಹಿತಿ ನೀಡುವುದು ಅತ್ಯವಶ್ಯಕ ಹಾಗಾಗಿ ಯೋಜನೆಯ ಅಧಿಕಾರಿಗಳು ಜನರಿಗೆ ಸ್ಪಷ್ಟವಾಗಿ ಮಾಹಿತಿ ನೀಡಿರುವುದು ಮೇಲಿನ ಪಟ್ಟಿಯನ್ನು ಅವಲೋಕಿಸಿದಾಗ ಕಂಡು ಬಂದಿದೆ.

**ಗುಂಪು ಯೋಜನೆಗೆ ಸೇರುವುದಕ್ಕೆ ಮೊದಲು ಯಾವುದಾದರೂ ಉದ್ಯೋಗ ಕೈಗೊಂಡಿದ್ದೀರಾ:**

ಎಸ್‌ಜೆಎಸ್‌ಆರ್‌ವೈ ಯೋಜನೆ ಜಾರಿಯಾಗುವುದಕ್ಕೆ ಮುಂಚೆ ಗುಂಪು ಉದ್ಯೋಗ ಕೈಗೊಂಡಿರುವುದರ ಬಗ್ಗೆ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೭೭.೫ ರಷ್ಟು ಮಾಹಿತಿದಾರರು ಅತಿ ಸಣ್ಣ ವ್ಯಾಪಾರವನ್ನು ಹೊಂದಿರುವುದರ ಕುರಿತಾಗಿ ತಮ್ಮ ಅಭಿಪ್ರಾಯ ತಿಳಿಸಿರುವುದು ಕಂಡು ಬಂದಿದೆ. ಪ್ರತಿಶತ ೨೨.೫ ರಷ್ಟು ಮಾಹಿತಿದಾರರು ಯಾವುದೇ ಉದ್ಯೋಗವನ್ನು ಕೈಗೊಳ್ಳದಿರುವುದು ತಿಳಿದು ಬಂದಿದೆ.

ಉದ್ಯೋಗವನ್ನು ಮಾಡಬೇಕಾದರೆ ಆ ಉದ್ಯೋಗಕ್ಕಾಗಿ ಸ್ಥಳಾವಕಾಶ ಅತಿ ಮುಖ್ಯವಾದದು, ಯಾವ ವಿಧವಾದ ಉದ್ಯೋಗವನ್ನು ಕೈಗೊಳ್ಳುತ್ತೇನೆ ಎಂಬುದರ ಆಧಾರದ ಮೇಲೆ ಸ್ಥಳಾವಕಾಶದ ವಿಸ್ತೀರ್ಣವು ಅವಲಂಬಿಸಿರುತ್ತದೆ. ಆ ಸ್ಥಳಾವಕಾಶವು ಜನನಿಬಿಡವಾದ ಸ್ಥಳವಾದರೆ ಅನುಕೂಲ ಎಂಬುದು ಪ್ರತಿಯೊಬ್ಬನು ವಿಚಾರ ಮಾಡುವುದಾಗಿದೆ. ನಗರದ ಮಧ್ಯದಲ್ಲಿ ಉದ್ಯೋಗ ಮಾಡಲು ಯತ್ನಿಸಿದರೆ ಅದಕ್ಕೆ ತಗಲುವ ಬಾಡಿಗೆ ಬಾಹುಳ್ಯತೆ (ಹೆಚ್ಚಾಗಿರುತ್ತದೆ) ಇರುತ್ತದೆ. ಆಗಾಗಿ

ಫಲಾನುಭವಿ ತನ್ನ ಆರ್ಥಿಕ ಶಕ್ತಿಗೆ ಅನುಗುಣವಾಗಿ ಸ್ಥಳಾವಕಾಶ ಮಾಡಬೇಕಾಗುತ್ತದೆ.

**ಗುಂಪು ಉದ್ಯೋಗಕ್ಕೆ ಸರ್ಕಾರದಿಂದ ನೀಡಿರುವ ಸಹಾಯಧನದ ಬಗ್ಗೆ:**

ಈ ಯೋಜನೆಯಲ್ಲಿ ಕೈಗೊಂಡಿರುವ ಗುಂಪು ಉದ್ಯೋಗಕ್ಕೆ ಸರ್ಕಾರದಿಂದ ನೀಡಿರುವ ಸಹಾಯಧನದ ಬಗ್ಗೆ (ಸಬ್ಸಿಡಿ) ಕೇಳಲಾಯಿತು. ಅದರಂತೆ ಮಾಹಿತಿದಾರರು ಬ್ಯಾಂಕ್ ಸಾಲ, ಸಹಾಯಧನ ಹಾಗೂ ತಮ್ಮ ಷೇರಿನ ಹಣವನ್ನು ವಿವರಿಸಿದ್ದಾರೆ. ಎಲ್ಲರೂ ಸಹ ಘಟಕ ವೆಚ್ಚದ ಹೆಚ್ಚಳದ ಬಗ್ಗೆ ತಿಳಿಸಿರುತ್ತಾರೆ. ಇದನ್ನು ನೋಡಿದಾಗ ಗುಂಪಿನ ಎಲ್ಲಾ ಫಲಾನುಭವಿಗಳು ಈ ಯೋಜನೆಯ ಸಬ್ಸಿಡಿ ಬಗ್ಗೆ ತಿಳಿದು ಕೊಂಡಿರುವುದು ಕಂಡು ಬಂದಿದೆ. ಪ್ರತಿಶತ ೧೦೦ ರಷ್ಟು ಫಲಾನುಭವಿಗಳು ಸಹಾಯಧನವನ್ನು ಹೆಚ್ಚಿಸಲು ತಿಳಿಸಿರುತ್ತಾರೆ.

**ಈ ಯೋಜನೆಯಲ್ಲಿ ಗುಂಪು ಉದ್ಯೋಗಕ್ಕಿರುವ ಘಟಕ ವೆಚ್ಚದ ಬಗ್ಗೆ ತಿಳಿದಿದೆಯೇ:**

ಪ್ರತಿಯೊಂದು ಬ್ಯಾಂಕ್ ಹಾಗೂ ಸರ್ಕಾರಗಳು ವ್ಯಕ್ತಿಗೆ ಸಾಲ ಸೌಲಭ್ಯವನ್ನು ನೀಡಬೇಕಾದರೆ ಘಟಕ ವೆಚ್ಚವನ್ನು ಇಂತಿಷ್ಟು ಹಣವೆಂದು ನಿಗದಿ ಮಾಡಿರುತ್ತದೆ, ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಫಲಾನುಭವಿಗಳು ಈ ಬಗ್ಗೆ ಎಷ್ಟರ ಮಟ್ಟಿಗೆ ಜ್ಞಾನವನ್ನು ಹೊಂದಿದ್ದಾರೆ ಎಂಬುದರ ಬಗ್ಗೆ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಪ್ರತಿಶತ ೧೦೦ ರಷ್ಟು ಮಾಹಿತಿದಾರರು ಘಟಕದ ವೆಚ್ಚ ರೂ ೧.೨೫.೦೦೦/- ಗಳೆಂದು ತಿಳಿಸಿದ್ದಾರೆ. ಇದರಿಂದ ಎಲ್ಲಾ ಸದಸ್ಯರೂ ಮಾಹಿತಿ ತಿಳಿದುಕೊಂಡಿರುವುದು ಕಂಡು ಬರುತ್ತದೆ.

**ಗುಂಪು ಉದ್ಯೋಗದಲ್ಲಿ ಫಲಾನುಭವಿಗಳು ನೀಡಬೇಕಿರುವ ಹಣ:**

ಫಲಾನುಭವಿಗಳು ಬ್ಯಾಂಕ್ ಮುಖಾಂತರ ಸಾಲ ಸೌಲಭ್ಯವನ್ನು ಪಡೆದು ಕೊಳ್ಳಬೇಕಾದರೆ ಯಾವುದೇ ವ್ಯಕ್ತಿಯು ಶೇಕಡಾವಾರು ಹಣವನ್ನು ತನ್ನ ಪಾಲಾಗಿ ನೀಡಬೇಕಾಗಿರುತ್ತದೆ. ಅದರಂತೆ ಎಲ್ಲಾ ೪೦ (೧೦೦%) ಮಾಹಿತಿದಾರರು ಈ ಮಾಹಿತಿಯನ್ನು ತಿಳಿದುಕೊಂಡಿರುವುದನ್ನು ಕಾಣುತ್ತೇವೆ.

**ಗುಂಪು ಉದ್ಯೋಗಕ್ಕೆ ಮಾರುಕಟ್ಟೆ ವ್ಯವಸ್ಥೆ:**

ಯಾವುದೇ ಗುಂಪು ಉದ್ಯೋಗ ಮಾಡುವಾಗ ಮೊದಲು ಬಂಡವಾಳದಾರರು ಅಲೋಚಿಸುವುದು ತಾನು ಉತ್ಪಾದಿಸುವ ವಸ್ತುವಿಗೆ ಜನರ ಬೇಡಿಕೆ ಮತ್ತು ಸುವ್ಯವಸ್ಥಿತ ರೀತಿಯ ಮಾರುಕಟ್ಟೆ. ಇಂದು ಆಧುನಿಕತೆ ಹೆಚ್ಚಾದಂತೆ ಎಲ್ಲಾ ವಸ್ತುಗಳ ಉತ್ಪನ್ನವೂ ಸಹ ಮಾರುಕಟ್ಟೆಯಲ್ಲಿ ಪೈಪೋಟಿಗಿಳಿದಿರುವುದು ತಿಳಿದಿರುವ ವಿಚಾರ, ಉತ್ಪಾದಿಸುವ ವಸ್ತುವಿಗೆ ಸೂಕ್ತ ಮಾರುಕಟ್ಟೆ ಮತ್ತು ಬೇಡಿಕೆ ಇದ್ದರೆ ಮಾತ್ರ ಶ್ರಮವು ಪ್ರತಿಫಲ ನೀಡುತ್ತದೆ.

ಪ್ರತಿ ಗುಂಪು ಕೂಡಾ ಮಾರುಕಟ್ಟೆಯಲ್ಲಿ ಬೇಡಿಕೆ ಇರುವ ಮತ್ತು ಜನರಿಗೆ ದಿನ ನಿತ್ಯದಲ್ಲಿ ಅವಶ್ಯಕತೆಯಿರುವ ಕಡೆಗೆ ಗಮನ ನೀಡಿ ಯಾವುದೇ ವಸ್ತುವನ್ನು

ಉತ್ಪಾದಿಸಬೇಕಾಗುತ್ತದೆ. ಈ ವಿಷಯವಾಗಿ ಮಾಹಿತಿದಾರರಿಂದ ಮಾಹಿತಿ ಪಡೆಯಲಾಯಿತು. ೧೦೦ ರಷ್ಟು ಮಾಹಿತಿದಾರರು ಗುಂಪಿನಲ್ಲಿ ಉತ್ಪಾದನಾ ಸರಕನ್ನು ನಿರ್ಧರಿಸಿ ತಯಾರಿಕೆಯಲ್ಲಿ ಪಾಲ್ಗೊಳ್ಳಲಾಗುವುದೆಂದು ಹೇಳಿದ್ದಾರೆ.

**ಉತ್ಪಾದನೆ ಮಾಡುತ್ತಿರುವ ವಸ್ತುಗಳಿಗೆ ಗ್ರಾಹಕರು:**

ಗುಂಪು ಉದ್ಯೋಗವನ್ನು ಕೈಗೊಂಡು ವಸ್ತುಗಳನ್ನು ತಯಾರಿಸಿ ಗ್ರಾಹಕರ ಅಭಿರುಚಿಗೆ ತಕ್ಕ ಹಾಗೆ ಅವುಗಳನ್ನು ಸಂಗ್ರಹಿಸಿ (ಪ್ಯಾಕ್ ಮಾಡಿ) ಮಾರಾಟ ಮಾಡುವುದು, ಈ ತರಹದ ಉದ್ಯೋಗಗಳಲ್ಲಿ ಉತ್ಪನ್ನ ವಸ್ತುಗಳನ್ನು ಮಾರಾಟ ಮಾಡುವವರು ಮೊದಲು ತಾನು ಉತ್ಪಾದಿಸುವ ವಸ್ತುವಿಗೆ ಗ್ರಾಹಕರು ಯಾವ ವರ್ಗದವರು ಎಂಬುದನ್ನು ಅರಿಯುವುದು ಮುಖ್ಯವಾಗಿರುತ್ತದೆ. ೧೦೦ ಪ್ರತಿಶತ ಫಲಾನುಭವಿಗಳಿಗೆ ಅವರು ತಯಾರಿಸುವ ಉತ್ಪನ್ನಗಳಿಗೆ ಬಿಪಿಎಲ್, ಮಧ್ಯಮ ವರ್ಗದವರು, ಶ್ರೀಮಂತರು ಇತ್ಯಾದಿ ಎಲ್ಲರೂ ಗ್ರಾಹಕರಾಗಿರುವುದನ್ನು ತಿಳಿದು ಕೊಳ್ಳಲಾಗಿದೆ.

**ಗುಂಪು ಉದ್ಯೋಗದಲ್ಲಿ ಪಡೆದ ಸಾಲವನ್ನು ಋಣ ಮುಕ್ತ ಮಾಡಿರುವುದರ ಬಗ್ಗೆ:**

ಗುಂಪು ಉದ್ಯೋಗದಲ್ಲಿ ಪಡೆದ ಸಾಲವನ್ನು ಋಣ ಮುಕ್ತ ಮಾಡಿರುವುದರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಯಿತು, ೪೦ ಫಲಾನುಭವಿಗಳು ವಿಭಿನ್ನ ಉತ್ತರಗಳನ್ನು ನೀಡಿದ್ದು ಕಂಡು ಬಂದಿದೆ. ಪ್ರತಿಶತ ೫೫ ರಷ್ಟು ಜನರು ಗೊತ್ತಿಲ್ಲ ಗುಂಪಿನ ಲೀಡರ್‌ನನ್ನು ಕೇಳಬೇಕು ಎಂದು ತಿಳಿಸಿದರೆ, ಶೇ ೪೫ ರಷ್ಟು ಜನರು ಪುಸ್ತಕದಲ್ಲಿ ಲೆಕ್ಕ ನೋಡಬೇಕೆಂದು ತಿಳಿಸಿರುವುದರಿಂದ ಗುಂಪಿನ ಲೀಡರ್‌ನನ್ನು ಕೇಳಿ ಮಾಹಿತಿ ಪಡೆದು ಕೊಳ್ಳಲಾಯಿತು. ಸಾಲದ ಕಂತು ಅಂತಿಮ ಹಂತದಲ್ಲಿರುವುದರ ಬಗ್ಗೆ ತಿಳಿಸಿರುತ್ತಾರೆ.

**ಗುಂಪು ಉದ್ಯೋಗ ಕೈಗೊಳ್ಳಲು ನಿಮ್ಮ ಮನೆಯಲ್ಲಿ ಹೆಚ್ಚು ಬೆಂಬಲ ನೀಡಿದವರು:**

ಗುಂಪು ಉದ್ಯೋಗವನ್ನು ಕೈಗೊಳ್ಳಲು ಪ್ರೇರಣೆ ಅಥವಾ ಅನುಮತಿಯನ್ನು/ ಬೆಂಬಲವನ್ನು ಹೆಚ್ಚು ನೀಡಿದವರು ಯಾರು ಎಂಬುದರ ಕುರಿತು ತಿಳಿದುಕೊಳ್ಳಲು ಪ್ರಶ್ನೆಯನ್ನು ಕೇಳಲಾಗಿ ಮಾಹಿತಿದಾರರು ನೀಡಿರುವ ಉತ್ತರವನ್ನು ಕೋಷ್ಟಕ ೩.೨೬ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ-೩.೨೬**

**ಗುಂಪು ಉದ್ಯೋಗ ಕೈಗೊಳ್ಳಲು ನಿಮ್ಮ ಮನೆಯಲ್ಲಿ ಹೆಚ್ಚು ಬೆಂಬಲ ನೀಡಿದವರು:**

| ಕ್ರಮ ಸಂಖ್ಯೆ | ಬೆಂಬಲ | ಒಟ್ಟು | ಪ್ರತಿಶತ(%) |
|---|---|---|---|
| ೦೧ | ಯಜಮಾನ | ೧೪ | ೩೫ |
| ೦೨ | ತಂದೆ-ತಾಯಿ | ೧೨ | ೩೦ |
| ೦೩ | ಅಣ್ಣ-ತಮ್ಮ | ೩ | ೭.೫ |
| ೦೪ | ಸ್ನೇಹಿತೆಯರು | ೧೧ | ೨೭.೫ |
| | ಒಟ್ಟು | ೪೦ | ೧೦೦ |

ಮೇಲಿನ ಪಟ್ಟಿಯಲ್ಲಿ ಗುಂಪು ಉದ್ಯೋಗವನ್ನು ಕೈಗೊಳ್ಳಲು ಮನೆಯಲ್ಲಿ ಪ್ರೋತ್ಸಾಹ ನೀಡಿದವರ ಮಾಹಿತಿಯನ್ನು ತಿಳಿಯಲು ಪ್ರಯತ್ನಿಸಲಾಯಿತು, ಪ್ರತಿಶತ ೩೫ ಮಾಹಿತಿದಾರರು ಮನೆಯ ಯಜಮಾನ ಎಂದು ತಿಳಿಸಿದರೆ, ಪ್ರತಿಶತ ೩೦ ಜನರು ತಂದೆ–ತಾಯಿ ಎಂದು, ಪ್ರತಿಶತ ೭.೫ ರಷ್ಟು ಮಾಹಿತಿದಾರರು ಅಣ್ಣ–ತಮ್ಮ ಎಂದು, ೨೭.೫ ಪ್ರತಿಶತ ಮಾಹಿತಿದಾರರು ಸ್ನೇಹಿತರೆಂದು ತಿಳಿಸಿರುವುದು ಕಂಡುಬಂದಿದೆ.

**ಮಕ್ಕಳ ಶಿಕ್ಷಣಕ್ಕೆ ಅನುಕೂಲಕರವಾಗಿರುವುದರ ಬಗ್ಗೆ:**

ಆರ್ಥಿಕವಾಗಿ ಹೆಚ್ಚು ಸಬಲರಾದಂತೆ ಮಕ್ಕಳಿಗೆ ಶಿಕ್ಷಣ ಕೊಡಿಸಲು ತಂದೆ ತಾಯಿಗಳು ಮುಂದೆ ಬರುವುದು ಸಹಜ. ಬಡತನದಲ್ಲಿದ್ದಾಗ, ಆರ್ಥಿಕವಾಗಿ ಅಶಕ್ತರಿದ್ದಾಗ ಮಕ್ಕಳಿಗೆ ಶಿಕ್ಷಣ ನೀಡಲು ತಂದೆ ತಾಯಂದಿರು ಮುಂದೆ ಬರುವುದಿಲ್ಲ, ಮಗನು ದುಡಿದು ತಂದರೆ ತುತ್ತಿನ ಚೀಲ ತುಂಬಿಸಬಹುದು ಎಂಬ ಆಲೋಚನೆಯಲ್ಲಿರುತ್ತಾನೆ. ಗುಂಪು ಚಟುವಟಿಕೆ ಉದ್ಯೋಗ ಮಾಡಿ ಮಕ್ಕಳ ಶಿಕ್ಷಣಕ್ಕೆ ಅನುಕೂಲವಾಗಿರುವುದರ ವಿಷಯವಾಗಿ ಮಾಹಿತಿದಾರರಿಂದ ಉತ್ತರ ಪಡೆದು ಕೊಳ್ಳಲಾಯಿತು. ೧೦೦ ಪ್ರತಿಶತ ಫಲಾನುಭವಿಗಳು ಈ ಉದ್ಯೋಗ ಕೈಗೊಂಡ ಮೇಲೆ ಮಕ್ಕಳ ಶಿಕ್ಷಣಕ್ಕೆ ಅನುಕೂಲಕರವಾಗಿದೆ ಎಂದು ತಿಳಿಸಿದ್ದಾರೆ.

**ಆರ್ಥಿಕ ಅಭಿವೃದ್ಧಿ ಸಾಧಿಸಲು ಗುಂಪು ಉದ್ಯೋಗ ಸಹಕಾರಿಯಾಗಿದೆಯೇ:**

ಸರ್ಕಾರದ ಯಾವುದೇ ಒಂದು ಯೋಜನೆ ಫಲಪ್ರದಾಯಕವಾಗಬೇಕಾದರೆ ಆ ಯೋಜನೆಯ ಲಾಭ ಆ ಜನರಿಗೆ ಸಿಕ್ಕಿದಾಗ ಮಾತ್ರ ಹಾಗಾಗಿ ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿ ಜಾರಿಗೆ ತಂದಿರುವ ಉಪ ಯೋಜನೆಗಳಲ್ಲಿ ಒಂದಾದ ಮಹಿಳಾ ಗುಂಪು ಉದ್ಯೋಗವು ಜನರಿಗೆ ಎಷ್ಟರ ಮಟ್ಟಿಗೆ ಆರ್ಥಿಕವಾಗಿ ಅಭಿವೃದ್ಧಿ ಸಾಧಿಸಲು ಸಹಕಾರಿಯಾಗಿದೆ ಎಂಬ ಬಗ್ಗೆ ಉತ್ತರವನ್ನು ಕಂಡು ಕೊಳ್ಳಲು ಪ್ರಯತ್ನಿಸಲಾಯಿತು. ಒಟ್ಟು ೪೦ ಮಾಹಿತಿದಾರರಲ್ಲಿ ಗುಂಪು ಉದ್ಯೋಗ ಅತಿ ಹೆಚ್ಚು ಸಹಕಾರಿಯಾಗಿದೆ ಎಂದು ಪ್ರತಿಶತ ೩೨.೫ ಜನರು ತಿಳಿಸಿರುವುದು, ಪ್ರತಿಶತ ೬೭.೫ ಮಾಹಿತಿದಾರರು ಸಹಕಾರಿಯಾಗಿದೆ ಎಂಬಷ್ಟೇ ಉತ್ತರವನ್ನು ನೀಡಿರುವುದನ್ನು ಕಂಡು ಕೊಳ್ಳಲಾಗಿದೆ.

**೩.೫. ಸಮುದಾಯದ ಅಭಿವೃದ್ದಿ ಸಂಘ:– (Community Development Society):**

ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿಯಲ್ಲಿ ಸಮುದಾಯ ಅಭಿವೃದ್ದಿ ಸಂಘವು ತಾಲ್ಲೂಕು ಮಟ್ಟದಲ್ಲಿ ಮತ್ತು ಸ್ಥಳೀಯ ಸಂಸ್ಥೆಯ ಮಟ್ಟದಲ್ಲಿ ರಚನೆಯಾಗಿರುವ ಒಂದು ವಿದ್ಯುಕ್ತ ಸಂಘಟನೆಯಾಗಿದ್ದು, ಸಮಾನ ಗುರಿ ಮತ್ತು ಉದ್ದೇಶಗಳನ್ನು ಹೊಂದಿರುವ ಸಂಘಟನೆಯಾಗಿದೆ. ಸಮುದಾಯ ಅಭಿವೃದ್ದಿ ಸಂಘದ ಸದಸ್ಯತ್ವವನ್ನು ಅದರ ವ್ಯಾಪ್ತಿಯಲ್ಲಿ ಬರುವ ಸಂಬಂಧಿಸಿದ ಪ್ರತಿಯೊಂದು ಕುಟುಂಬದ ಒಬ್ಬ ಮಹಿಳೆ ಈ ಸೊಸೈಟಿಯ ಸದಸ್ಯರಾಗಿರುತ್ತಾರೆ, ಈ ಸಂಘದ

ಅಡಿಯಲ್ಲಿ ಎನ್.ಎಚ್.ಸಿ ಗಳಿಂದ ಚುನಾಯಿತ/ಆಯ್ಕೆಯಾದ ಪ್ರತಿನಿಧಿಗಳು ಸಿಡಿಎಸ್‌ನ ಕಾರ್ಯಕಾರಿ ಸದಸ್ಯರಾಗಿರುತ್ತಾರೆ, ಮತದಾನ ಹಕ್ಕಿನೊಂದಿಗೆ ಇಲ್ಲವೇ ಸಮಾಜ ಸಂಘಟಿಕರು (ಸಿಓಗಳು) ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳು ಆಯಾ ವಲಯವಾರು ಇಲಾಖೆಗಳ ಪ್ರತಿನಿಧಿಗಳು, ಆ ಪ್ರದೇಶದ ಚುನಾಯಿತ ಜನಪ್ರತಿನಿಧಿಗಳು, ಪ್ರಸಿದ್ಧ ವ್ಯಕ್ತಿಗಳು ಮತ್ತು ಇತರ ವಿಷಯ ಪರಿಣಿತರನ್ನು ಈ ಸಿಡಿಎಸ್‌ನ ಗೌರವ ಸದಸ್ಯರಾಗಿರಬಹುದಾಗಿದೆ. ಮತದಾನ ಯಾವುದೇ ಪ್ರಕ್ರಿಯೆ ಇಲ್ಲದೇ ನೇರವಾಗಿ ಸದಸ್ಯರನ್ನಾಗಿ ಮಾಡಿಕೊಳ್ಳಬಹುದು.

ಸಮುದಾಯ ಅಭಿವೃದ್ಧಿ ಸಂಘದ ಸದಸ್ಯತ್ವವನ್ನು ಹೊಂದಿರುವುದರ ಬಗ್ಗೆ ಧೃಢಪಡಿಸುವ ಸಲುವಾಗಿ ಈ ಮಾಹಿತಿಯನ್ನು ಕೇಳಲಾಗಿ ಪ್ರತಿಶತ ೧೦೦ ರಷ್ಟು ಫಲಾನುಭವಿಗಳು ಪ್ರತಿಯೊಂದು ಕುಟುಂಬದ ಒಬ್ಬ ಸದಸ್ಯರು ಸಮುದಾಯ ಅಭಿವೃದ್ಧಿ ಸಂಘದ ಸದಸ್ಯತ್ವವನ್ನು ಹೊಂದಿರುವುದು ತಿಳಿದು ಬಂದಿದೆ.

**ಸಮುದಾಯ ಅಭಿವೃದ್ದಿ ಸಂಘದಿಂದ ಆಗಿರುವ ಅನುಕೂಲತೆಗಳ ಬಗ್ಗೆ ಕೇಳಲಾಯಿತು,**

ಈ ಕೆಳಗಿನಂತೆ ಫಲಾನುಭವಿಗಳು ತಮ್ಮದೇ ಆದ ಅಭಿಪ್ರಾಯವನ್ನು ತಿಳಿಸಿರುವುದನ್ನು ಪಟ್ಟಿ ಮಾಡಲಾಗಿದೆ.

- ಸಮುದಾಯ ಅಭಿವೃದ್ಧಿ ಸಂಘದ ಸಭೆ/ಕಾರ್ಯಕ್ರಮಗಳಿಂದ ಸ್ವಯಂ ಉದ್ಯೋಗವನ್ನು ಮಾಡಲು ತಿಳುವಳಿಕೆ ದೊರೆತಿದೆ.
- ತರಬೇತಿ ನೀಡಲು ಸೂಕ್ತ ವ್ಯವಸ್ಥೆಗಳನ್ನು ಮಾಡಲು ಸಲಹೆಗಳನ್ನು ನೀಡುತ್ತದೆ/ ಕಾರ್ಯಕ್ರಮಗಳನ್ನು ಏರ್ಪಡಿಸುತ್ತದೆ.
- ಬ್ಯಾಂಕ್‌ನಿಂದ ಸಾಲಪಡೆಯಲು ಫಲಾನುಭವಿಗಳ ಆಯ್ಕೆಯಲ್ಲಿ ಪಾತ್ರ ವಹಿಸುತ್ತದೆ/ ಸಹಾಯ ನೀಡುತ್ತದೆ.
- ಕಾಲಕಾಲಕ್ಕೆ ಸಾಲ ಕಟ್ಟುವಿಕೆ ಬಗ್ಗೆ ಹಾಗೂ ಉಳಿತಾಯದ ಬಗ್ಗೆ ತಿಳುವಳಿಕೆ/ ತೀರ್ಮಾನ ನೀಡುತ್ತದೆ.
- ರಾಷ್ಟ್ರೀಯ ಹಬ್ಬಗಳು ಮತ್ತು ಸಮುದಾಯ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಂಡಾಗ ತಿಳಿಸುವುದರಿಂದ ಅದರಲ್ಲಿ ಭಾಗವಹಿಸುವಿಕೆಯಿಂದ ಸೂಕ್ತ ತಿಳುವಳಿಕೆ ಜ್ಞಾನ ಸಿಕ್ಕಿದೆ.
- ಸ್ವಸಹಾಯ ಸಂಘ ರಚಿಸಿಕೊಳ್ಳಲು ತಿಳುವಳಿಕೆ ನೀಡಿದ್ದರಿಂದ ಈಗ ಅನುಕೂಲವಾಗಿದೆ.
- ಸ್ವಸಹಾಯ ಸಂಘಕ್ಕೆ ಪುಸ್ತಕ ತರಬೇತಿ ಕಾರ್ಯಕ್ರಮ ಏರ್ಪಡಿಸುವುದರಿಂದ ಪುಸ್ತಕ ಬರೆಯುವುದನ್ನು ಕಲಿತು ಕೊಳ್ಳಲಾಯಿತು.
- ಚೆನ್ನಾಗಿ ನಡೆಯುವ ಸ್ವಸಹಾಯ ಸಂಘಗಳು ಊರುಗಳಿಗೆ ಭೇಟಿ ಮಾಡಿಸಿ ಅವರೊಂದಿಗೆ ಅನುಭವ ಹಂಚಿಕೊಳ್ಳಲು ಸಂಯೋಜಿಸುವುದರಿಂದ

ಸಂಘದ ಎಲ್ಲಾ ಸದಸ್ಯರೂ ಬೇರೆಯವರನ್ನು ನೋಡಿ ನಾವು ಸಹ ಒಗ್ಗಟ್ಟಿನಿಂದ ನಡೆಯಬೇಕೆಂದೆನಿಸಿ ಸಂಘವನ್ನು ಬಲಿಷ್ಠವಾಗಿ ರೂಪಿಸಿಕೊಳ್ಳಲು ಅನುಕೂಲ ಕಲ್ಪಿಸುತ್ತದೆ.

- ಸಂಘದಲ್ಲಿ ಏನಾದರೂ ಗೊಂದಲ ಅಥವಾ ಅನುಮಾನವಿದ್ದಲ್ಲಿ ಸ್ಥಳೀಯ ಸಂಸ್ಥೆಯ ಅಧಿಕಾರಿ/ ಸಿಬ್ಬಂದಿಗಳಿಗೆ ಸಲಹೆ ಸೂಚನೆ ನೀಡಿ ಬಗೆಹರಿಸಲು ಪ್ರಯತ್ನಿಸುತ್ತದೆ.
- ಆರೋಗ್ಯ ತಿಳುವಳಿಕೆ ಕಾರ್ಯಕ್ರಮದಿಂದ ನಮಗೆ ಮಾಹಿತಿ ನೀಡಿರುವುದು ಅನುಕೂಲವಾಗಿದೆ.
- ಗುಂಪು ಉದ್ಯೋಗಕ್ಕೆ ಸಾಲ ಪಡೆದುಕೊಳ್ಳಲು ಅನುಕೂಲ ಮಾಡಿಕೊಟ್ಟಿದೆ.

**ಸಮುದಾಯ ಅಭಿವೃದ್ಧಿ ಸಂಘದಿಂದ ಸಮುದಾಯಕ್ಕಾಗಿರುವ ಅನುಕೂಲತೆಗಳು.**

ಸಮುದಾಯ ಸಂಘವು ಸಮುದಾಯದ ಜನರನ್ನು ಆರ್ಥಿಕವಾಗಿ ಸಧೃಡಗೊಳಿಸುವುದಕ್ಕಾಗಿ ಹುಟ್ಟಿಕೊಂಡ ಒಂದು ಅಧಿಕಾರಯುಕ್ತವಾದ ಸಂಘಟನೆಯಾಗಿದ್ದು, ಈ ಸಂಘಟನೆಯಿಂದ ಸಮಾಜಕ್ಕಾಗಿರುವ ಉಪಯೋಗದ ಬಗ್ಗೆ ತಿಳಿದು ಕೊಳ್ಳಲು ಪ್ರಯತ್ನಿಸಲಾಯಿತು. ಇದರ ಕಾರ್ಯಗಳನ್ನು ಸಾಮಾಜಿಕ ಸೇವಾ ಕಾರ್ಯಕ್ರಮಗಳ ಅಡಿಯಲ್ಲಿ ವಿವರಿಸಲಾಗಿದೆ.

**೩.೬. ಸಾಮಾಜಿಕ ಸೇವಾ ಕಾರ್ಯಕ್ರಮ :**

ಸಮುದಾಯ ಅಭಿವೃದ್ಧಿ ಸೇವಾ ಕಾರ್ಯಕ್ರಮ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯಡಿ ಒಂದು ಮಹತ್ವದ ಕಾರ್ಯಕ್ರಮವಾಗಿದೆ. ಯೋಜನೆಯ ವಿವಿಧ ಕಾರ್ಯಕ್ರಮಗಳ ಯಶಸ್ವಿಗೆ ಸಮುದಾಯ ರಚನೆಯನ್ನು ಮಾಡಿಕೊಳ್ಳಲಾಗಿದೆ. ಇದರಲ್ಲಿ ಸಮುದಾಯ ಅಭಿವೃದ್ಧಿ ಸಂಘ, ನೆರೆಹೊರೆ ಸಮಿತಿ ಹಾಗೂ ನೆರೆಹೊರೆ ಗುಂಪುಗಳು ವಿವಿಧ ಸರ್ಕಾರಿ ಇಲಾಖೆಗಳು, ಸರ್ಕಾರೇತರ ಸಂಸ್ಥೆಗಳು ಕೈಗೊಳ್ಳುವ ತಾಯಿ ಮಗುವಿನ ಆರೋಗ್ಯ ಶಿಬಿರ, ಪೌಷ್ಠಿಕ ಆಹಾರ ನೀಡಿಕೆ, ವಯಸ್ಕರ ಶಿಕ್ಷಣ, ಉದ್ಯೋಗಾಧಾರಿತ ತರಬೇತಿ, ವಸ್ತುಪ್ರದರ್ಶನ ಮತ್ತು ಮಾರಾಟ ಇತ್ಯಾದಿ ಸಾಮಾಜಿಕ ಸೇವೆಗಳನ್ನು ಫಲಾನುಭವಿಗಳಿಗೆ ಒದಗಿಸಲು, ಸಮುದಾಯದ ಮಟ್ಟದಲ್ಲಿ ನೆರೆಹೊರೆ ಸಮಿತಿ ಸದಸ್ಯರ ಮೂಲಕ ಆರೋಗ್ಯ ಶಿಬಿರಗಳನ್ನು ಏರ್ಪಡಿಸುವುದು, ಆರೋಗ್ಯ ತಿಳುವಳಿಕೆಯನ್ನು ನೀಡುವ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಮೂಲಭೂತ ಸೌಲಭ್ಯಗಳ ಬಗ್ಗೆ ತಿಳುವಳಿಕೆ ನೀಡುವುದು.

ವಿಶ್ವ ಪರಿಸರ ದಿನಾಚಾರಣೆ, ಸ್ವಾತಂತ್ರ್ಯೋತ್ಸವ ದಿನಾಚಾರಣೆ, ಗಣರಾಜ್ಯೋತ್ಸವ ಹಾಗೂ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮಗಳಲ್ಲಿ ಫಲಾನುಭವಿಗಳನ್ನು ಬಳಸಿಕೊಂಡು ಆ ಮೂಲಕ ಇವರಿಗೆ ರಾಷ್ಟ್ರಪ್ರೇಮದ ಬಗ್ಗೆ

ತಿಳಿಸುವುದು. ಫಲಾನುಭವಿಗಳು ಉತ್ಪಾದಿಸುವ ವಸ್ತುಗಳನ್ನು ವಸ್ತು ಪ್ರದರ್ಶನಗಳಲ್ಲಿ ಪ್ರದರ್ಶಿಸುವಂತೆ ಪ್ರೇರೇಪಿಸುವುದು, ಆ ಮೂಲಕ ಅವರಿಗೆ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲು ಸಹಾಯಕವಾಗುವುದು ಶಾಲಾ ವಿದ್ಯಾರ್ಥಿಗಳಿಗೆ ವಿವಿಧ ಮೂಲಗಳಿಂದ ಆದಾಯವನ್ನು ಸಂಗ್ರಹಿಸಿ ಪಠ್ಯ-ಪುಸ್ತಕಗಳು-ಸಮವಸ್ತ್ರಗಳನ್ನು ನೀಡುವುದು, ಬೇರೆ-ಬೇರೆ ಇಲಾಖೆಗಳಲ್ಲಿ ನಡೆಯುವ ಕಾರ್ಯಗಾರ ಅಥವಾ ಕಾರ್ಯಕ್ರಮಗಳಿಗೆ ಫಲಾನುಭವಿಗಳನ್ನು ಹಾಜರಾಗುವಂತೆ ನೋಡಿಕೊಳ್ಳುವುದು. ಈ ಸಾಮಾಜಿಕ ಸೇವಾ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರುವುದರ ಬಗ್ಗೆ ತಿಳಿದು ಕೊಳ್ಳಬೇಕೆನಿಸಿತು. ಹಾಗಾಗಿ ಈ ಪ್ರಶ್ನೆಗೆ ಫಲಾನುಭವಿಗಳು ನೀಡಿದ ಉತ್ತರವನ್ನು ಕೋಷ್ಟಕ ೩.೨೭ ರಲ್ಲಿ ನೀಡಲಾಗಿದೆ.

**ಕೋಷ್ಟಕ-೩.೨೭**

**ಸಾಮಾಜಿಕ ಸೇವಾ ಕಾರ್ಯಕ್ರಮ**

| ಕ್ರಮ ಸಂಖ್ಯೆ | ಕಾರ್ಯಕ್ರಮಗಳು | ಒಟ್ಟು | ಪ್ರತಿಶತ(%) |
|---|---|---|---|
| ೧ | ನಡೆದ ಎಲ್ಲಾ ಕಾರ್ಯಕ್ರಮಗಳಲ್ಲಿ | ೫೬ | ೧೮.೬೬ |
| ೨ | ಕೆಲವು ಕಾರ್ಯಕ್ರಮಗಳಲ್ಲಿ | ೧೮೯ | ೬೩.೦೦ |
| ೩ | ಭಾಗವಹಿಸಲಿಲ್ಲ | ೫೫ | ೧೮.೩೩ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕವನ್ನು ನೋಡಿದಾಗ ಕಂಡು ಬರುವುದೇನೆಂದರೆ ಒಟ್ಟು ಸಾಮಾಜಿಕ ಸೇವಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿದವರ ಸಂಖ್ಯೆ ಅತಿ ಹೆಚ್ಚು ೬೩ ಪ್ರತಿಶತ ಫಲಾನುಭವಿಗಳಾಗಿದ್ದಾರೆ, ಯಾವುದೇ ಕಾರ್ಯಕ್ರಮಗಳಲ್ಲಿ ಭಾಗವಹಿಸಿಲ್ಲದವರು ೧೮.೩೩ ಪ್ರತಿಶತ ಇದ್ದಾರೆ, ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿದವರು ೧೮.೬೬ ಪ್ರತಿಶತ ಇರುವುದು ಮೇಲಿನ ಅಂಕಿ ಅಂಶಗಳನ್ನು ಅವಲೋಕಿಸಿದಾಗ ಕಂಡು ಬರುತ್ತದೆ.

ಸಾಮಾಜಿಕ ಸೇವಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ ಬಗ್ಗೆ ಮಾಹಿತಿದಾರರಿಂದ ಸಲಹೆಗಳನ್ನು ಕೇಳಲಾಯಿತು, ಅವರಿಂದ ಹೊರ ಬಂದ ಉತ್ತರಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ಫಲಾನುಭವಿಗಳು ಕೆಲವು ಕಾರ್ಯಕ್ರಮಗಳಿಗೆ ಮಾತ್ರ ಕಾರ್ಯಕ್ರಮ ಸ್ಥಳಕ್ಕೆ ಹೋಗಿ ಬರುವ ವ್ಯವಸ್ಥೆ ಏರ್ಪಡಿಸುತ್ತಾರೆ ಇನ್ನು ಕೆಲವು ಕಾರ್ಯಕ್ರಮಗಳಿಗೆ ಯಾವುದೇ ಪ್ರಯಾಣದ ವ್ಯವಸ್ಥೆ ಮಾಡಿರುವುದಿಲ್ಲ ಹಾಗಾಗಿ ಸಮುದಾಯ ಅಭಿವೃದ್ಧಿ ಸಂಘವು ಎಲ್ಲಾ ಕಾರ್ಯಕ್ರಮಗಳಿಗೆ ಪ್ರಯಾಣದ ವ್ಯವಸ್ಥೆ ಮಾಡಬೇಕೆಂದು ಸಲಹೆ ನೀಡಿರುತ್ತಾರೆ.

೨. ಆರ್‌ಸಿವಿ/ಎನ್‌ಎಚ್‌ಸಿ/ ಎನ್‌ಎಚ್‌ಜಿ ಸದಸ್ಯರು ಅಥವಾ ಇತರೆ ಸಂಬಂಧಿಸಿದ ಅಧಿಕಾರಿ/ ಸಿಬ್ಬಂದಿಗಳು ಒಂದು ವಾರ ಮುಂಚಿತವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಬಗ್ಗೆ ತಿಳಿಸಿದರೆ, ಈ ದಿನವನ್ನು ಮೀಸಲಿರಿಸಿ ಯಾವುದೇ ಪ್ರವಾಸ ಕಾರ್ಯಕ್ರಮಗಳಿದ್ದರೆ ರದ್ದುಗೊಳಿಸಿ ಕೊಳ್ಳಬಹುದು ಎಂದು ಹೇಳಿದ್ದಾರೆ.

ಒಟ್ಟು ಫಲಾನುಭವಿಗಳಲ್ಲಿ ೧೯೪ ಫಲಾನುಭವಿಗಳು (ಅಂದರೆ ಪ್ರತಿಶತ ೬೪.೬೬) ಕ್ರಮ ಸಂಖ್ಯೆ ೦೧ ರ ಉತ್ತರವನ್ನು/ಸಲಹೆಯನ್ನು ನೀಡಿದ್ದಾರೆ. ಇನ್ನುಳಿದ ೧೦೬ ಫಲಾನುಭವಿಗಳು (೩೫.೩೩ ಪ್ರತಿಶತರು) ಕ್ರಮ ಸಂಖ್ಯೆ ೦೨ ರ ಸಲಹೆಯನ್ನು ನೀಡಿರುವದು ಕಂಡು ಬಂದಿದೆ, ಕ್ರಮ ಸಂಖ್ಯೆ ೦೧ ನ್ನು ಅತಿ ಹೆಚ್ಚು ಜನರು ತಿಳಿಸಿರುವುದು ಇದರಿಂದ ಕಂಡು ಬರುತ್ತದೆ.

**ಯೋಜನಾ ಅಧಿಕಾರಿಗಳಿಂದ ಪಡೆದ ಮಾಹಿತಿ:**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆ ಅಡಿಯಲ್ಲಿ ಜಾರಿಗೊಂಡಿರುವ ಕಾರ್ಯಕ್ರಮಗಳ ಕುರಿತು ಅದರ ಮೇಲುಸ್ತುವಾರಿ ನೋಡಿಕೊಳ್ಳುತ್ತಿರುವ ಸಮುದಾಯ ವ್ಯವಹಾರ ಅಧಿಕಾರಿಯವರಿಗೆ ಕಾರ್ಯಕ್ರಮದ ಪ್ರಾರಂಭದಲ್ಲಿ ಹಾಗೂ ಕಾರ್ಯಕ್ರಮಗಳ ಜಾರಿಯಲ್ಲಿ ಅವರಿಗೆ ಎದುರಾದ ಮತ್ತು ಎದುರಿಸುತ್ತಿರುವ ಸಮಸ್ಯೆಗಳನ್ನು ತಿಳಿದುಕೊಳ್ಳುವುದು ಅವಶ್ಯಕವೆನಿಸಿದ್ದರಿಂದ ಅದರಂತೆ ಕೆಲವು ಪ್ರಶ್ನಾವಳಿಗಳನ್ನು ತಯಾರಿಸಿ ಅವರಿಂದ ಉತ್ತರವನ್ನು ಪಡೆಯಲಾಗಿದೆ.

ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಎದುರಾದ ಸಮಸ್ಯೆಗಳ ಬಗ್ಗೆ ಕೇಳಿದಾಗ ಅವರು ಪ್ರಾರಂಭದಲ್ಲಿ ಜನರು ಯೋಜನೆಯ ಬಗ್ಗೆ ಹೊಂದಿದ್ದ ತಪ್ಪು ತಿಳುವಳಿಕೆಯಿಂದಾಗಿ ಜನರನ್ನು ಮನವೊಲಿಸುವುದು ಮತ್ತು ಯೋಜನೆಯ ವ್ಯಾಪ್ತಿಗೆ ಅವರನ್ನು ಒಳಪಡಿಸುವುದು ತ್ರಾಸದಾಯಕವಾಗಿತ್ತು, ಇಲಾಖೆಯಲ್ಲಿದ್ದ ಸಿಬ್ಬಂದಿಗಳು ಸಹ ಕಡಿಮೆ ಸಂಖ್ಯೆಯಲ್ಲಿದ್ದರಿಂದ ಸರ್ಕಾರೇತರ ಸಂಸ್ಥೆಗಳ ನೆರವನ್ನು ಪಡೆದುಕೊಂಡು ಐಇಸಿ ಕಾರ್ಯಕ್ರಮದ ಮೂಲಕ ಜನರಿಗೆ ಅರಿವು ಮೂಡಿಸಿ ಆ ಮೂಲಕ ಫಲಾನುಭವಿಗಳನ್ನು ಮತ್ತು ಸ್ವಸಹಾಯ ಗುಂಪುಗಳನ್ನು ರಚಿಸಲಾಯಿತು ಎಂದಿದ್ದಾರೆ. ಪ್ರಸ್ತುತ ಪ್ರತಿ ವರ್ಷ ಸರ್ಕಾರ ನಿಗದಿಪಡಿಸುವ ಗುರಿ ಕಡಿಮೆ ಇರುವುದರಿಂದ ಎಲ್ಲ ಜನರಿಗೆ ಈ ಯೋಜನೆಯಲ್ಲಿ ಫಲಾನುಭವಿಯನ್ನು ಮಾಡಿಕೊಳ್ಳಲು ಸಾಧ್ಯವಾಗಿರುವುದಿಲ್ಲ ಎಂದು ತಿಳಿಸಿದ್ದಾರೆ.

ಪ್ರತಿ ವರ್ಷವು ಸರ್ಕಾರವು ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಕಾರ್ಯಕ್ರಮಗಳ ಗುರಿ ನಿಗದಿ ಮಾಡುತ್ತಿರುವುದರಿಂದ ಫಲಾನುಭವಿಗಳ ಆಯ್ಕೆಗೆ ಪ್ರತಿ ವರ್ಷಕ್ಕೆ ಇಂತಿಷ್ಟು ಎಂಬ ನಿಗದಿತ ಮಿತಿ ಇರುತ್ತದೆ ಎಂದು ತಿಳಿಸಿರುತ್ತಾರೆ.

ಗುಂಪು ರಚನೆಗೆ ಮತ್ತು ಫಲಾನುಭವಿಗಳನ್ನು ಆಯ್ಕೆ ಮಾಡಿಕೊಳ್ಳುವ ಸಂಧರ್ಭ ಇಲಾಖೆಯಿಂದ ಇರುವ ನಿಯಮಗಳಾದ ೧೦ ರಿಂದ ೨೦ ಜನ ಸದಸ್ಯರನ್ನು ಗುಂಪು ರಚನೆಗೆ ಆಯ್ಕೆ ಮಾಡಿಕೊಳ್ಳುವುದು ಹಾಗೂ ಇತರ ಕಾರ್ಯಕ್ರಮಗಳಿಗೆ ಫಲಾನುಭವಿಯ ಆಯ್ಕೆಗೆ ಸರ್ಕಾರವು ನಿಗದಿಪಡಿಸಿರುವ ನಿಯಮಗಳ ಪಾಲನೆ ಮಾಡುವುದು, ಇವರೆಲ್ಲರೂ ಸಹ ಬಿಪಿಎಲ್ ಕುಟುಂಬಗಳಿಂದ ಬಂದವರಾಗಿರುತ್ತಾರೆ ಎಂದಿದ್ದಾರೆ.

ಮಹಿಳಾ ಗುಂಪುಗಳಿಗೆ ಇಲಾಖೆಯಿಂದ ನೀಡಿದ ವಿವಿಧ ಉದ್ಯಮಶೀಲ ತರಬೇತಿಗಳ ಬಗ್ಗೆ ತಿಳಿಸುತ್ತಾ, ಸ್ವಯಂ ಉದ್ಯೋಗ ತರಬೇತಿ ಹಾಗೂ ಇನ್ನಿತರ ತರಬೇತಿಗಳನ್ನು ಫಲಾನುಭವಿಗಳ ಆಸಕ್ತಿಗೆ ಅನುಗುಣವಾಗಿ ನೀಡಲಾಗಿದೆ ಎಂದಿದ್ದಾರೆ.

ಗುಂಪುಗಳಿಗೆ ನೀಡಿರುವ ವಿವಿಧ ವೃತ್ತಿಪರ ತರಬೇತಿಗಳ ಬಗ್ಗೆ ಕೇಳಿದಾಗ ಗೃಹ ಬಳಕೆ ವಸ್ತುಗಳ ತಯಾರಿಕೆ, ಹಾಗೂ ಇನ್ನಿತರ ಜನರ ಬೇಡಿಕೆಗೆ ಅನುಗುಣವಾಗಿ ತರಬೇತಿಗಳನ್ನು ನೀಡಲಾಗಿದೆ ಎಂದು ತಿಳಿಸಿರುವುದು ಕಂಡು ಬಂದಿದೆ.

ಈ ಯೋಜನೆ ಅಡಿ ಕೈಗೊಂಡಿರುವ ಸ್ವಯಂ ಉದ್ಯೋಗಗಳ ವಿವರವಾದ ಮಾಹಿತಿ ನೀಡಲು ಕೇಳಿದಾಗ ಬ್ಯೂಟಿ ಪಾರ್ಲರ್, ಜರ್ದೋಶಿ, ಮೇಣದ ಬತ್ತಿ, ಅಗರಬತ್ತಿ ತಯಾರಿಕೆ ಇನ್ನೂ ಮುಂತಾದ ಸ್ವಯಂ ಉದ್ಯೋಗಗಳನ್ನು ಕೈಗೊಂಡಿರುವುದನ್ನು ತಿಳಿಸಿರುತ್ತಾರೆ.

ಈ ಯೋಜನೆ ಅಡಿ ಆರೋಗ್ಯ/ ಶುಚಿತ್ವಕ್ಕೆ ಸಂಬಂಧಿಸಿದಂತೆ ನಡೆದಿರುವ ಕಾರ್ಯಕ್ರಮಗಳ ಬಗ್ಗೆ ವಿಚಾರಿಸಿದಾಗ ಸಾಮಾಜಿಕ ಸೇವಾ ಕಾರ್ಯಕ್ರಮ ಅಡಿಯಲ್ಲಿ ಆರೋಗ್ಯ ಅರಿವು ಮೂಡಿಸುವ ಕಾರ್ಯಾಗಾರ, ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗೆ ಸಂಬಂಧಿಸಿದಂತೆ ಇನ್ನಿತರ ಶಿಬಿರಗಳನ್ನು ಏರ್ಪಡಿಸಿರುವುದರ ಬಗ್ಗೆ ವಿವರಿಸಿದ್ದಾರೆ.

ಪ್ರತಿ ಗುಂಪಿಗೆ ಸಹಾಯಧನ ನೀಡುವ ಸಂಧರ್ಭದಲ್ಲಿ ಅನುಸರಿಸುವ ಮಾನದಂಡಗಳ ಬಗ್ಗೆ ವಿವರಿಸಿದ್ದು ಒಂದು ವರ್ಷ ತುಂಬಿರಬೇಕು, ನಿರಂತರ ಉಳಿತಾಯ ಮಾಡುತ್ತಿರಬೇಕು, ಆಂತರಿಕ ಸಾಲದ ವ್ಯವಹಾರ ನಡೆದಿರಬೇಕು, ಲೆಕ್ಕ ಪರಿಶೋಧನೆ ಆಗಿರಬೇಕು ಎಂದಿದ್ದಾರೆ.

ಪ್ರಸ್ತುತ ಹುಬ್ಬಳ್ಳಿ-ಧಾರವಾಡ ಮಹಾನಗರ ವ್ಯಾಪ್ತಿಯಲ್ಲಿ ರಚನೆಯಾಗಿರುವ ಒಟ್ಟು ೭೫೦ ಮಹಿಳಾ ಗುಂಪುಗಳಲ್ಲಿ ೨೦೪ ಗುಂಪುಗಳಿಗೆ ಸಹಾಯಧನ ಸುತ್ತುನಿಧಿ ನೀಡಲಾಗಿದೆ. ಎಲ್ಲ ಸ್ವಸಹಾಯ ಗುಂಪುಗಳು ಬ್ಯಾಂಕ್ ಲಿಂಕೇಜ್ ಹೊಂದಿರುವುದಿಲ್ಲ, ಸದ್ಯದ ಅಂಕಿ ಅಂಶಗಳ ಪ್ರಕಾರ ೫೦೦ ರಷ್ಟು ಸಂಘಗಳು ಲಿಂಕೇಜ್ ಹೊಂದಿರುವುದು ತಿಳಿದು ಬರುತ್ತದೆ.

ಪ್ರಸ್ತುತ ಇಲಾಖಾ ಮಾಹಿತಿ ಪ್ರಕಾರ ಹುಬ್ಬಳ್ಳಿ-ಧಾರವಾಡ ನಗರದ ವ್ಯಾಪ್ತಿಯಲ್ಲಿ ಒಟ್ಟು ೧೦೭೯ ಸ್ವಯಂ ಉದ್ಯೋಗ ಮಾಡುತ್ತಿರುವರ ಸಂಖ್ಯೆ ಇರುವುದು ಕಂಡು ಬಂದಿದೆ. ಮಹಿಳಾ ಗುಂಪು ಉದ್ಯೋಗಗಳ ಸಂಖ್ಯೆ ೮೩ ಇರುವುದು.

ಮಹಿಳಾ ಗುಂಪುಗಳಲ್ಲಿ ನಾಯಕತ್ವದ ಬಗೆಯು ಪ್ರತಿನಿಧಿ-೧ ಹಾಗೂ ಪ್ರತಿನಿಧಿ-೨ ಇರುವುದು ತಿಳಿದು ಬಂದಿದೆ. ಈ ಯೋಜನೆ ಅಡಿಯಲ್ಲಿ ಬ್ಯಾಂಕ್ ಖಾತೆಯನ್ನು ಯಾವುದೇ ಬ್ಯಾಂಕ್ ಶಾಖೆಯಲ್ಲಿ ತೆರೆಯಬಹುದಾಗಿದೆ. ಹುಬ್ಬಳ್ಳಿ ಮತ್ತು ಧಾರವಾಡದ ಎರಡು ನಗರಗಳಲ್ಲಿ ೧೨ ಬ್ಯಾಂಕ್‌ಗಳಲ್ಲಿ ಎಸ್‌ಜೆಎಸ್‌ಆರ್‌ವೈ ಯೋಜನೆಯ ಫಲಾನುಭವಿಗಳು ಬ್ಯಾಂಕ್ ಖಾತೆಯನ್ನು ತೆರೆದಿರುವುದು ಕಂಡು ಬಂದಿದೆ. ಈ ಯೋಜನೆಯ ಅಡಿಯಲ್ಲಿ ಅಂಗವಿಕಲ/ ಅಂಧರ/ ಕಿವುಡ ಹಾಗೂ ಅಲ್ಪಸಂಖ್ಯಾತರ ಇತ್ಯಾದಿ ಯಾವುದೇ ಗುಂಪುಗಳ ರಚನೆ ಇರುವುದಿಲ್ಲ.

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯಲ್ಲಿ ಗುಂಪಿನಲ್ಲಿ ನಿರ್ಣಯ ತೆಗೆದುಕೊಳ್ಳುವ ಮಟ್ಟವನ್ನು ಪರಿಶೀಲಿಸಿದಾಗ ನಿರ್ಣಯ ತೆಗೆದುಕೊಳ್ಳುವಿಕೆಯು ಶೇಕಡಾ ೧೦೦ ರಷ್ಟು ಇರುತ್ತದೆ. ಅದರಂತೆ ಜನರ ಸಹಭಾಗಿತ್ವವು ಸಹ ಶೇಕಡಾ ೧೦೦ ರಷ್ಟು ಇರುತ್ತದೆ ಎಂದು ತಿಳಿದು ಬಂದಿದೆ.

**೩.೭. ಸಾಮಾಜಿಕ ಆರ್ಥಿಕ ನಿರ್ಧಾರಕಾಂಶಗಳ ವಿಶ್ಲೇಷಣೆ:**

ಈ ಅಧ್ಯಾಯದಲ್ಲಿ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯ ಅಡಿಯಲ್ಲಿನ ಫಲಾನುಭವಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಂಶಗಳನ್ನು ವಿಶ್ಲೇಷಣೆ ಮಾಡಿದಾಗ ಜನರು ಈ ಯೋಜನೆಯ ಲಾಭವನ್ನು ಎಷ್ಟರ ಮಟ್ಟಿಗೆ ಪಡೆದು ಕೊಂಡಿದ್ದಾರೆ. ಅವರ ಜೀವನ ಮಟ್ಟ, ಅವರು ಆರ್ಥಿಕವಾಗಿ ಸದೃಢವಾಗಲು ಕಾರಣವಾದ ಅಂಶಗಳು, ಸರ್ಕಾರದ ಕಾರ್ಯಕ್ರಮಗಳು ಮುಂತಾದ ವಿಷಯಗಳ ಕುರಿತು ಸಮಾಜಶಾಸ್ತ್ರೀಯ ದೃಷ್ಟಿ ಕೋನದಲ್ಲಿ **ಪಿ.ಎ ಸಾರೋಕಿನ್** ರವರ ಲಂಬಾಂತರ ಸಂಚಲನಾ ಸಿದ್ಧಾಂತದ ಆಧಾರದ ಮೇಲೆ ಈ ಅಧ್ಯಯನವನ್ನು ವಿಶ್ಲೇಷಿಸಲಾಗಿದೆ.

ಈ ಯೋಜನೆಯಲ್ಲಿ ಫಲಾನುಭವಿಯಾಗಲು ಅರ್ಹತೆ ಹೊಂದಲು ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಲಾಗಿಲ್ಲದಿರುವುದು ಮಾಹಿತಿದಾರರಿಂದ ಪಡೆದ ಶಿಕ್ಷಣದ ವಿವರವನ್ನು ನೀಡುವ ಕೋಷ್ಟಕ ೩.೨ ರಲ್ಲಿ ತಿಳಿಯಬಹುದು. ಈ ಯೋಜನೆಯು ಪ್ರಧಾನ ಮಂತ್ರಿ ರೋಜ್ಗಾರ್ ಯೋಜನೆಗೆ ಸಂಬಂಧಿಸಿದ ನಿಯಮ ನಿಬಂಧನೆಗಳಿಗೆ ಗೊಂದಲ ಉಂಟಾಗಬಾರದೆಂಬ ದೃಷ್ಟಿಯಿಂದ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯ ಅಡಿಯಲ್ಲಿನ ಯೋಜನೆಯ ಫಲಾನುಭವಿಗಳು ೯ನೇ ತರಗತಿ ಅಥವಾ ಅದರ ಒಳಗೆ ಅಭ್ಯಾಸ ಮಾಡಿದ್ದರೆ ಸಾಕೆಂಬ ನಿಯಮವಿರುತ್ತದೆ. ಇಂತಿಷ್ಟೆ ಓದಿರಬೇಕೆಂಬ ನಿಯಮವನ್ನು ಹೊಂದಿಲ್ಲದ ಕಾರಣ ಇಲ್ಲಿ ಶಿಕ್ಷಣಕ್ಕೆ

ಸಂಬಂಧಿಸಿದಂತೆ ಯಾವುದೇ ಅಡ್ಡಿ ಇರುವುದಿಲ್ಲ. ಆದ್ದರಿಂದ ನಗರ ಪ್ರದೇಶದಲ್ಲಿ ಕಡಿಮೆ ಸಾಕ್ಷರತೆಯನ್ನು ಹೊಂದಿದ್ದರೂ ಅಥವಾ ಹೊಂದದೇ ಇದ್ದರೂ ಸಹ ಬಡ ಕುಟುಂಬದವರು ಯೋಜನೆಯ ಲಾಭವನ್ನು ಪಡೆಯಲು ಅನುಕೂಲವಾಗಿದೆ. ಆದರೆ ಖ್ಯಾತ ಅರ್ಥಶಾಸ್ತ್ರಜ್ಞರಾದ ನೊಬೆಲ್ ಪುರಸ್ಕೃತ **ಅಮಾರ್ತ್ಯಸೇನ್** ಪ್ರತಿಪಾದಿಸಿರುವಂತೆ ಬಡತನ ನಿವಾರಣೆಗೆ ಜನರಲ್ಲಿ 'ಸಾಮರ್ಥ್ಯ' ವಿರಬೇಕು ಆ ಮೂಲಕ ಉದ್ಯೋಗ ಪಡೆದು ಆರ್ಥಿಕ ಅಭಿವೃದ್ಧಿ ತನ್ನಿಂದಲೇ ಸಾಗುತ್ತದೆ ಎಂದು ಹೇಳಿರುವ ಅಂಶಕ್ಕೆ ಇಲ್ಲಿ ಹೆಚ್ಚಿನ ಮಹತ್ವವಿದೆ. ಕೋಷ್ಟಕ ೩.೨ ಅನ್ನು ಅಲೋಕಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದ ಶೇ. ೩೧.೬೬% ರಷ್ಟು ಜನರು ಫಲಾನುಭವಿಗಳಾಗಿರುವುದು ಕಂಡು ಬಂದಿದೆ.

ವಯಸ್ಸಿಗೆ ಸಂಬಂಧಿಸಿದಂತೆ ಈ ಯೋಜನೆಯಲ್ಲಿ ಹೆಚ್ಚು ನಿರ್ಬಂದವಿರುವುದಿಲ್ಲ, ಗರಿಷ್ಠ ೬೦ ವರ್ಷ ಒಳಗಿನ ವಯಸ್ಸಿನ ವ್ಯಕ್ತಿಯೂ ಸಹ ಈ ಯೋಜನೆ ಅಡಿಯಲ್ಲಿ ಫಲಾನುಭವಿಯಾಗಬಹುದಾಗಿದೆ. ಕೋಷ್ಟಕ ೩.೧ ರಲ್ಲಿ ೩೦ ರಿಂದ ೪೪ ವಯಸ್ಸಿನವರು ಹಾಗೂ ೪೫ ರಿಂದ ೫೯ ವಯಸ್ಸಿನವರ ಪ್ರಮಾಣ ಕ್ರಮವಾಗಿ ಶೇಕಡಾ ೪೦ ಮತ್ತು ೪೯ ರಷ್ಟು ಈ ಯೋಜನೆಯ ಫಲಾನುಭವಿಯಾಗಿರುವುದನ್ನು ತಿಳಿಯಲಾಗಿದೆ. ಅತಿ ಹೆಚ್ಚು ಅಂದರೆ ಮಧ್ಯಮ ಹಾಗೂ ತದನಂತರದ ವಯಸ್ಸಿನವರೇ ಈ ಯೋಜನೆಯ ಫಲಾನುಭವಿಗಳಾಗಿರುವುದು ಅಂಕಿ ಅಂಶಗಳಿಂದ ಕಂಡು ಬರುತ್ತದೆ.

ಭಾರತ ದೇಶವು ವಿವಿಧ ಜಾತಿ, ಭಾಷೆ, ಧರ್ಮದಿಂದ ಕೂಡಿದ ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರವಾಗಿರುವುದರಿಂದ ಇಲ್ಲಿ ಎಲ್ಲರೂ ಒಂದೇ ಎಂಬ ಭಾವೈಕ್ಯತೆ ಅಡಿಯಲ್ಲಿ (ಸಂವಿಧಾನದ ೦೮ ನೇ ಪರಿಚ್ಛೇದದ ಅಡಿಯಲ್ಲಿ) ದೇಶದ ಸಂವಿಧಾನ ರಚಿಸಲಾಗಿದ್ದು, ಆಯಾ ಶೇಕಡಾವಾರು ಜಾತಿ, ಜನಾಂಗ, ಭಾಷಾವಾರು ಮೀಸಲಾತಿಯನ್ನು ಅಳವಡಿಸಿಕೊಳ್ಳಲಾಗಿದೆ. ಅದರಂತೆ ಈ ಯೋಜನೆ ಅಡಿಯಲ್ಲಿ ಎಸ್‌ಸಿ ಎಸ್‌ಟಿ ಅಂಗವಿಕಲರು, ಅಲ್ಪಸಂಖ್ಯಾತರು ಇತರೆ ಹಿಂದುಳಿದ ವರ್ಗದವರಿಗೆ ಮೀಸಲಾತಿಯನ್ನು ಆಯಾ ಯೋಜನೆಯ ಗಾತ್ರಕ್ಕೆ ತಕ್ಕ ಹಾಗೆ ಅಂಕಿ ಅಂಶಗಳ ಗುರಿಗಳಿಗನುಗುಣವಾಗಿ ಮೀಸಲಾತಿಯನ್ನು ನಿಗದಿ ಪಡಿಸಿದ್ದು ಇರುತ್ತದೆ. ಕೋಷ್ಟಕ ೩.೩ ನ್ನು ಗಮನಿಸಿದಾಗ ಪ್ರತಿಶತ ೫೮ ರಷ್ಟು ಫಲಾನುಭವಿಗಳು ಓಬಿಸಿ ವರ್ಗಕ್ಕೆ ಸೇರಿದವರಾಗಿರುತ್ತಾರೆ.

ಧರ್ಮದ ಆಧಾರದಲ್ಲಿ ಎಲ್ಲಾ ಧರ್ಮಗಳಿಗೆ ಆದ್ಯತೆಯನ್ನು ನೀಡಲಾಗಿದ್ದರೂ ಅತಿ ಹೆಚ್ಚು ಬಹುಸಂಖ್ಯಾತರು ಹಿಂದೂ ಧರ್ಮದವರಿರುವುದರಿಂದ ಅಂಕಿ ಅಂಶಗಳ ಗಣನೆಗೆ ತೆಗೆದುಕೊಂಡು ಅದರ ಆಧಾರದ ಮೇಲೆ ೮೪ ಪ್ರತಿಶತ ಫಲಾನುಭವಿಗಳು ಹಿಂದೂ ಧರ್ಮದವರು ಪಡೆದುಕೊಂಡಿರುತ್ತಾರೆ.

ಭಾಷೆಯ ಆಧಾರದ ಮೇಲೆ ವಿಶ್ಲೇಷಣೆ ಮಾಡಿದಾಗ ಭಾರತದ ಸಂವಿಧಾನದಲ್ಲಿ ಅಧಿಕೃತವಾಗಿ ಘೋಷಣೆಯಾಗಿರುವ (ಸಂವಿಧಾನದ ೮ ನೇ

ಪರಿಚ್ಛೇದದ ಅಡಿಯಲ್ಲಿ) ವಿವಿಧ ಭಾಷೆಗಳು ಆಯಾ ರಾಜ್ಯದ ಪ್ರಾದೇಶಿಕ ಭಾಷೆಗಳಿಗೆ ಅನುಗುಣವಾಗಿ ವಿಂಗಡಣೆಯಾದಂತೆ ಕರ್ನಾಟಕದಲ್ಲಿಯೂ ಸಹ ಕನ್ನಡ ಭಾಷೆಯನ್ನು ಮಾತನಾಡುವವರು ಬಹು ಸಂಖ್ಯಾತರಾಗಿದ್ದು, ಅತಿ ಹೆಚ್ಚು ಅಂದರೆ ೬೯.೬೬ ಕನ್ನಡ ಭಾಷಿಕರು ಈ ಯೊಜನೆಯ ಫಲಾನುಭವಿಗಳಾಗಿರುವುದನ್ನು ಕೋಷ್ಟಕ ೩.೫ ರಲ್ಲಿ ಕಂಡು ಕೊಳ್ಳಲಾಗಿದೆ.

ಈ ಯೋಜನೆ ಅಡಿಯಲ್ಲಿ ಕೋಷ್ಟಕ ೩.೬ ನ್ನು ಗಮನಿಸಿದಾಗ ಅತಿ ಹೆಚ್ಚು ವಿವಾಹಿತೆಯರು, ಅಂದರೆ ೬೧.೩೩ ರಷ್ಟು ವಿವಾಹಿತೆಯರು ಯೋಜನೆಯ ಫಲಾನುಭವಿಗಳಾಗಿರುವುದು ಕಂಡು ಬಂದಿದೆ. ಇದರಿಂದ ನಮಗೆ ತಿಳಿದು ಬರುವ ವಿಚಾರವೆಂದರೆ ಅವಿವಾಹಿತ ಮಹಿಳೆಯರಿಗಿಂತ ವಿವಾಹಿತ ಮಹಿಳೆಯರು ಹೆಚ್ಚು ಪ್ರಯೋಜನವನ್ನು ಪಡೆದುಕೊಂಡಿರುವುದು ಮತ್ತು ೮.೬೬ ರಷ್ಟು ಅವಿವಾಹಿತರು, ೬.೦೦ ರಷ್ಟು ವಿಧವೆಯರು, ೧೨.೩೩ ರಷ್ಟು ವಿವಾಹಿತ ಪುರುಷರು ಉದ್ಯೋಗ ಪಡೆದಿರುವುದು ಕಂಡುಬಂದಿದೆ.

ಈ ಯೋಜನೆಯು ನಗರ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ. ನಗರ ಪ್ರದೇಶದಲ್ಲಿ ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳು ಹೆಚ್ಚು ಸಂಖ್ಯೆಯಲ್ಲಿರುವುದು ಕೋಷ್ಟಕ ೩.೭ ನ್ನು ನೋಡಿದಾಗ ಧೃಡಪಟ್ಟಿರುವುದರಿಂದ (ಪ್ರತಿಶತ ೯೨.೩೩ ಸಂಖ್ಯೆಯಲ್ಲಿರುವುದು) ಅವಿಭಕ್ತ ಕುಟುಂಬಗಳು ನಗರಗಳಲ್ಲಿ ಕಡಿಮೆ ಹೊಂದುತ್ತಾ ಬರುತ್ತಿವೆ ಎಂಬುವುದಕ್ಕೆ ಅಂಕಿ ಅಂಶಗಳು ಪುಷ್ಟಿ ನೀಡುತ್ತವೆ. ಆಧುನಿಕ ಸಮಾಜದಲ್ಲಿ ಜನರು ಬದಲಾವಣೆಗೆ ಬಹಳ ಬೇಗ ಹೊಂದಿಕೊಳ್ಳುತ್ತಿರುವುದು. ಅದರಲ್ಲೂ ಈ ಪ್ರಮಾಣ ನಗರ ಪ್ರದೇಶದಲ್ಲಿ ಹೆಚ್ಚಾಗಿದೆ.

ಭಾರತ ದೇಶದಲ್ಲಿ ಮಾತೃ ಪ್ರಧಾನ ಕುಟುಂಬ ಮತ್ತು ಪಿತೃ ಪ್ರಧಾನ ಕುಟುಂಬಗಳೆಂಬ ಎರಡು ಪದ್ಧತಿಗಳು ಅಸ್ತಿತ್ವದಲ್ಲಿರುವುದನ್ನು ನಾವು ಕಾಣುತ್ತೇವೆ. ಅದರಲ್ಲೂ ಕೇರಳದ ನಂಬೂದರಿ ಸಮುದಾಯದಲ್ಲಿ ಮಾತೃ ಪ್ರಧಾನ ಕುಟುಂಬ ಪದ್ಧತಿ ಇರುವುದನ್ನು ಕಾಣುತ್ತೇವೆ. ಇಲ್ಲಿ ಮಹಿಳೆಯರೇ ಕುಟುಂಬದ ಮುಖ್ಯಸ್ಥೆ ಮತ್ತು ಕುಟುಂಬದ ಆಗು ಹೋಗುಗಳಿಗೆ ಮಹಿಳೆಯೇ ಜವಾಬ್ದಾರಿ ಹೊಂದಿರುತ್ತಾಳೆ. ಪಿತೃ ಪ್ರಧಾನ ಕುಟುಂಬದಲ್ಲಿ ಪುರುಷನೇ ಪ್ರಧಾನ ಪಾತ್ರವಹಿಸುತ್ತಾನೆ. ಆದರೆ ಸಮಾಜದಲ್ಲಿ ಬದಲಾವಣೆಗೊಂಡಂತೆ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿಯೂ ಸಹ ಮಹಿಳೆಯು ಪ್ರಧಾನ ಪಾತ್ರ ವಹಿಸುತ್ತಿರುವುದು ಕಂಡು ಬಂದಿದೆ. ಇದನ್ನು ಕೋಷ್ಟಕ ೩.೯ ರಲ್ಲಿ ಪಡೆದಿರುವ ಅಂಕಿ ಸಂಖ್ಯೆಯ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ.

ನಗರ ಪ್ರದೇಶದಲ್ಲಿ ವಾಸಿಸಲು ಪ್ರತಿಯೊಬ್ಬರಿಗೂ ಕೂಡಾ ಒಂದು ಸೂರು ಅವಶ್ಯಕ. ಕೋಷ್ಟಕ ೩.೧೦ ರಲ್ಲಿನ ಅಂಕಿ ಅಂಶಗಳಿಂದ ನಗರ ಪ್ರದೇಶದ ಜನರು ಗುಡಿಸಲು ಹೊಂದಿಲ್ಲದಿರುವುದು ಕಂಡು ಬಂದಿದೆ. ಈ ಅಧ್ಯಯನದಿಂದ

ಪಡೆದುಕೊಂಡಿರುವ ಅಂಕಿ ಸಂಖ್ಯೆಗಳ ಆಧಾರದಲ್ಲಿ ವಿಶ್ಲೇಷಿಸಿ ಹೇಳುವುದಾದರೆ ಈ ಯೋಜನೆಯ ಫಲಾನುಭವಿಗಳಾದ ನಂತರದಲ್ಲಿ ಜನರು ಮನೆಗಳ ದುರಸ್ಥಿಗಳನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ ಎಂಬುದು ಕಂಡು ಬರುತ್ತದೆ. ಆದಾಗ್ಯೂ ಬಾಡಿಗೆ ಮನೆಯಲ್ಲಿ ಪ್ರತಿಶತ ೧೪.೬೬ ರಷ್ಟು ಜನರು ವಾಸಮಾಡುತ್ತಿರುವುದು ಕಂಡು ಬಂದಿದೆ. ಇವರು ೩ ವರ್ಷಕ್ಕಿಂತಲೂ ಹೆಚ್ಚು ವರ್ಷಗಳಿಂದ ನಗರ ಪ್ರದೇಶದಲ್ಲಿ ವಾಸಿಸುತ್ತಿರುವುದು ಕಂಡು ಬಂದಿದೆ.

ಎಸ್‌ಜೆ.ಎಸ್.ಆರ್.ವೈ. ಯೋಜನೆಗೆ ಸೇರುವುದಕ್ಕೆ ಮುಂಚೆ ಮತ್ತು ನಂತರದಲ್ಲಿ ಆದ ಬದಲಾವಣೆಗಳನ್ನು ವಿಶ್ಲೇಷಿಸಿದಾಗ ಕಂಡು ಬರುವ ಅಂಶವೇನೆಂದರೆ ಫಲಾನುಭವಿಯಾಗುವುದಕ್ಕಿಂತ ಮುಂಚೆ ಮನೆಯಲ್ಲಿ ಹೊಂದಿದ್ದ ವಸ್ತುಗಳು, ಫಲಾನುಭವಿಯಾದ ನಂತರದಲ್ಲಿ ಮನೆಯಲ್ಲಿ ಹೊಂದಿದ್ದ ವಸ್ತುಗಳ ತುಲನೆ ಮಾಡಿದಾಗ ಈ ಯೋಜನೆಯ ಫಲಾನುಭವಿಯಾದ ನಂತರದಲ್ಲಿ ಜೀವನಾವಶ್ಯಕ ವಸ್ತುಗಳಿಗಿಂತಲೂ ಒಂದು ಹೆಜ್ಜೆ ಮುಂದೆ ಸಾಗಿ ಟಿ.ವಿ, ಗ್ಯಾಸ್ ಒಲೆ, ಕಂಪ್ಯೂಟರ್, ಫ್ರಿಜ್, ರೇಡಿಯೋ, ಫ್ಯಾನ್, ಗಡಿಯಾರ, ಮೊಬೈಲ್ ಇತ್ಯಾದಿ ಉಪಕರಣಗಳನ್ನು ಹೊಂದಿರುವುದು ಕಂಡು ಬಂದಿದೆ.

ಜನರು ಯೋಜನೆಯ ಫಲಾನುಭವಿಯಾಗಿ ಸೇರುವುದಕ್ಕೆ ಮುಂಚೆ ಹೊಂದಿದ್ದ ವೃತ್ತಿಗೂ, ಯೋಜನೆಯ ಫಲಾನುಭವಿಯಾದ ನಂತರದಲ್ಲಿ ಬದಲಾವಣೆಯಾದ ವೃತ್ತಿಗೂ ವ್ಯತ್ಯಾಸವಿರುವುದನ್ನು ಕಂಡು ಕೊಳ್ಳಲಾಗಿದೆ. ಪ್ರತಿಶತ ೫೦.೩೩ ರಷ್ಟು ಮಹಿಳೆಯರು ಯಾವುದೇ ಕೆಲಸವಿಲ್ಲದೇ ಹೌಸ್‌ವೈಫ್ ಆಗಿ ಕೆಲಸ ಮಾಡುತ್ತಿದ್ದುದು ಕಂಡು ಬಂದಿದೆ. ಪ್ರತಿಶತ ೩೮.೦೦ ರಷ್ಟು ಕೂಲಿ ಮಾಡುತ್ತಿದ್ದ ಜನರು ಯೋಜನೆಗೆ ಫಲಾನುಭವಿಯಾದ ನಂತರ ಸ್ವಂತ ಉದ್ಯೋಗ ಹೊಂದಿದ್ದರಿಂದ ಕುಟುಂಬದಲ್ಲಿ ಆರ್ಥಿಕ ಬದಲಾವಣೆಗೆ ನಾಂದಿಯಾಯಿತು ಎಂಬುವುದು ತಿಳಿದು ಬರುತ್ತದೆ.

ಯೋಜನೆಗೆ ಫಲಾನುಭವಿಯಾಗುವುದಕ್ಕೆ ಮುಂಚೆ ೩೦,೦೦೦ ಮೇಲ್ಪಟ್ಟು ವಾರ್ಷಿಕ ಆದಾಯ ಹೊಂದಿರುವವರು ಯಾರು ಕಂಡು ಬರಲಿಲ್ಲ, ಯೋಜನೆಗೆ ಫಲಾನುಭವಿಯಾದ ನಂತರ ೬.೩೩ ರಷ್ಟು ಜನರು ವಾರ್ಷಿಕ ೩೦,೦೦೦ಕ್ಕಿಂತ ಹೆಚ್ಚು ವಾರ್ಷಿಕ ಆದಾಯ ಹೊಂದಿರುವವರನ್ನು ಕೋಷ್ಟಕ ೪.೭ ರ ಅಂಕಿ ಸಂಖ್ಯೆಗಳಿಂದ ತಿಳಿದು ಬರುತ್ತದೆ.

ಬ್ಯಾಂಕಿನಲ್ಲಿ ಉಳಿತಾಯ ಖಾತೆಯನ್ನು ಹೊಂದಿರುವ ಬಗ್ಗೆ ಮಾಹಿತಿಯನ್ನು ಕಲೆಹಾಕಲಾಯಿತು. ಯೋಜನೆಗೂ ಮೊದಲು ಪ್ರತಿಶತ ೬.೩೩ ರಷ್ಟು ಜನರು ಉಳಿತಾಯ ಬ್ಯಾಂಕಿನ ಖಾತೆಯನ್ನು ಹೊಂದಿದ್ದು, ಈ ಬಗ್ಗೆ ತಿಳಿದು ಕೊಂಡಿರುವವರಾಗಿದ್ದು, ಉಳಿದವರು ಈ ಬಗ್ಗೆ ಬ್ಯಾಂಕ್ ಮೆಟ್ಟಿಲೇರಿರುವುದಿಲ್ಲ. ಯೋಜನೆಯ ಫಲಾನುಭವಿಯಾದ ನಂತರ ಅಂದರೆ ಈ ಯೋಜನೆಯಲ್ಲಿ

ಯಾವುದೇ ಸಾಲ ಸೌಲಭ್ಯ ಸಬ್ಸಿಡಿ ಇತ್ಯಾದಿಗಳು ಬ್ಯಾಂಕ್ ಮೂಲಕವೇ ವ್ಯವಹಾರ ನಡೆಯುವುದರಿಂದ, ಎಲ್ಲಾ ಮಹಿಳಾ/ಪುರುಷ ಫಲಾನುಭವಿಗಳು ಬ್ಯಾಂಕ್ ಉಳಿತಾಯ ಖಾತೆ, ಸಾಲದ ಖಾತೆ ತೆರೆಯಲು ಬ್ಯಾಂಕ್‌ಗೆ ಬರುತ್ತಿರುವುದು ಕಂಡು ಬಂದಿದೆ. ಪ್ರತಿಶತ ೯೩.೬೬ ರಷ್ಟು ಜನರು ಯೋಜನೆಗೆ ಸೇರಿದ ನಂತರ ಬ್ಯಾಂಕ್ ವ್ಯವಹಾರಗಳನ್ನು ತಿಳಿದು ಕೊಂಡಿರುವುದು ಕೋಷ್ಟಕ ೪.೮ ರಿಂದ ಕಂಡು ಬಂದಿದೆ. ಯೋಜನೆಯಿಂದ ನಿಮ್ಮ ಕುಟುಂಬದಲ್ಲಿ ಬದಲಾವಣೆಯಾಗಿದೆಯೇ ಎಂಬುದಕ್ಕೆ ಪ್ರತಿಶತ ೧೦೦ ರಷ್ಟು ಫಲಾನುಭವಿಗಳು ಉತ್ತಮವಾಗಿದೆ ಎಂಬುದನ್ನು ತಿಳಿಸಿರುವುದು ಕಂಡು ಬಂದಿದೆ. ಇದು **ಪಿ.ಎ. ಸಾರೋಕಿನ್‌ರವರು** ಪ್ರತಿಪಾದಿಸಿರುವಂತೆ ಲಂಬಾಂತರ ಸಂಚಲನೆ ಅಥವಾ ಸಾಮಾಜಿಕ ಆರೋಹಣ ಸಿದ್ಧಾಂತದಂತೆ ಅಭಿವೃದ್ಧಿಯ ಊರ್ದ್ವಮುಖವಾಗಿದೆ ಎಂಬುದು ತಿಳಿಯುತ್ತದೆ.

ವ್ಯಕ್ತಿಯು ಯಾವುದೇ ಸ್ವಯಂ ಉದ್ಯೋಗ ಮಾಡಬೇಕಾದರೆ ಖಾಸಗಿ ಮೂಲಗಳಾದ ಲೇವಾದೇವಿಗಾರರಿಂದ ಸಾಲವನ್ನು ಪಡೆಯುತ್ತಿದ್ದುದು ತಿಳಿದು ಬಂದಿದೆ. ಶೇ.೨೪.೬೬ ರಷ್ಟು ಸಾಲ ಪಡೆಯುತ್ತಿದ್ದುದು ಕೋಷ್ಟಕ ೩.೧೭ ರಲ್ಲಿ ತಿಳಿದು ಬಂದಿದೆ.

ಥ್ರಿಪ್ಟ್ ಮತ್ತು ಕ್ರೆಡಿಟ್ ಸೊಸೈಟಿಗೆ ಸಂಬಂಧಿಸಿದಂತೆ ಪಡೆದಿರುವ ಅಂಕಿ ಅಂಶಗಳನ್ನು ವಿಶ್ಲೇಷಣೆ ಮಾಡಿದಾಗ ನಗರ ಪ್ರದೇಶದ ಗುಂಪಿನಲ್ಲಿ ಪ್ರತಿಶತ ೪೦ ರಷ್ಟು ಗುಂಪುಗಳು ೧೩ ರಿಂದ ೧೪ ಸಂಖ್ಯೆಯನ್ನು ಹೊಂದಿರುವುದನ್ನು ಕೋಷ್ಟಕ ೩.೧೮ ರಿಂದ ತಿಳಿದು ಬರುತ್ತದೆ. ನಗರ ಪ್ರದೇಶದಲ್ಲಿ ೧೯ ರಿಂದ ೨೦ ಸಂಖ್ಯಾ ಬಲವನ್ನು ಹೊಂದಿರುವ ಗುಂಪು ಪ್ರತಿಶತ ೧.೨೭ ರಷ್ಟು ಎಂಬುದಾಗಿ ತಿಳಿದು ಬಂದಿದೆ.

ನಗರ ಪ್ರದೇಶದಲ್ಲಿನ ಗುಂಪುಗಳಲ್ಲಿ ಸಂಘಗಳಿಂದ ಸಾಲ ಪಡೆಯುವ ಮುಖ್ಯ ಉದ್ದೇಶ ಸ್ವಂತ ಉದ್ಯೋಗ ಮಾಡಿಕೊಳ್ಳುವದಾಗಿದೆ. ಈ ಯೋಜನೆಯಲ್ಲಿ ಸ್ವಯಂ ಉದ್ಯೋಗದ ಸಾಲ ಸೌಲಭ್ಯ ದೊರೆತಿಲ್ಲ ಎಂಬುದನ್ನು ತಿಳಿದ ನಂತರ ಗುಂಪಿನ ಸದಸ್ಯರು ಸರ್ಕಾರ ನೀಡುವ ಸುತ್ತು ನಿಧಿ ಅಥವಾ ಉಳಿತಾಯದ ಹಣದಿಂದ ಸಾಲ ಸೌಲಭ್ಯ ಪಡೆದು ವ್ಯಾಪಾರ ವ್ಯವಹಾರ ನಡೆಸುತ್ತಿರುವುದು ಕೋಷ್ಟಕ ೩.೨೦ ರಿಂದ ತಿಳಿದು ಬರುತ್ತದೆ. ಇದನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ನೋಡಿದಾಗ **ಪಿ.ಎ. ಸಾರೋಕಿನ್‌ರವರು** ಪ್ರತಿಪಾದಿಸಿರುವ ಲಂಬಾಂತರ ಸಂಚಲನೆಯ ಊರ್ದ್ವಮುಖ ತತ್ವಕ್ಕೆ ಸಮರ್ಪಕವಾಗಿ ಅಭಿವೃದ್ಧಿಯ ಮೆಟ್ಟಿಲನ್ನು ಏರುತ್ತಿರುವುದು ಕಂಡು ಬಂದಿದೆ.

ಎಸ್.ಜೆ.ಎಸ್.ಆರ್.ವೈ ಯೋಜನೆಯ ಫಲಾನುಭವಿಯಾದ ನಂತರ ಈ ಹಿಂದಿಗಿಂತಲೂ ಮಹಿಳೆಯು ಉತ್ತಮ ಸ್ಥಾನಮಾನವನ್ನು ಪಡೆದಿರುವುದು ಕೋಷ್ಟಕ ೪.೧ ರ ಅಂಕಿ ಅಂಶಗಳಿಂದ ತಿಳಿದು ಬರುತ್ತದೆ. ಈ ಅಂಕಿ ಅಂಶಗಳನ್ನು

ನೋಡಿದಾಗ "ಮನು" ಹೇಳಿರುವ ಮಹಿಳೆ ಅಸಮರ್ಥಳು ಅವಳು ಉದ್ಯೋಗಕ್ಕೆ ಅರ್ಹಳಲ್ಲ ಎಂಬ ತರ್ಕಕ್ಕೆ ವಿರುದ್ಧವಾಗಿ ಈ ಅಧ್ಯಯನದಿಂದ ಆಧುನಿಕ ಸಮಾಜದಲ್ಲಿ ಅವಳು ಹೊಂದಿರುವ ಸ್ಥಾನಮಾನವನ್ನು ಮತ್ತು ಆಗಿರುವ ಸಾಮಾಜಿಕ ಬದಲಾವಣೆಯನ್ನು ತಿಳಿದುಕೊಳ್ಳಲಾಗಿದೆ.

ಮಹಿಳೆ ಕುಟುಂಬದ ನಾಲ್ಕು ಗೋಡೆ ಮಧ್ಯದಲ್ಲಿರಬೇಕು ಗಂಡನ ಬೇಕು ಬೇಡಗಳನ್ನು ಪೂರೈಸಬೇಕೆಂದು ಋಗ್ವೇದದಲ್ಲಿ ಉಲ್ಲೇಖಿಸಲಾಗಿದೆ. ಆಧುನಿಕ ಸಮಾಜದಲ್ಲಿ ಮಹಿಳೆ ಪುರುಷನಿಗಿಂತ ಕಡಿಮೆ ಇಲ್ಲ, ಅವಳು ಸಹ ಕುಟುಂಬವನ್ನು ನಿರ್ವಹಣೆ ಮಾಡುವುದರ ಜೊತೆಗೆ ಸಮಾಜದಲ್ಲಾಗುತ್ತಿರುವ ಬದಲಾವಣೆಗೆ ಹೊಂದಿಕೊಂಡು ನಡೆಯುವ ಜಾಣ್ಮೆಯನ್ನು ಪ್ರದರ್ಶಿಸುತ್ತಿರುವುದು ಈ ಅಧ್ಯಯನದ ಕೋಷ್ಟಕ ೪.೩ ರ ಅಂಕಿ ಸಂಖ್ಯೆಗಳಿಂದ ಕಂಡು ಬಂದಿದೆ.

ಕುಟುಂಬದಲ್ಲಿ ಮಹಿಳೆಯು ಗಂಡನ ಅಧೀನಳಾಗಿ ಮನೆಯ ಆಗು ಹೋಗುಗಳ ಕೆಲಸವನ್ನು ಮಾತ್ರ ನಿರ್ವಹಿಸಬೇಕು ಎಂಬುದು "ಮನುವಿನ ವಾದವಾಗಿತ್ತು, ಸ್ತ್ರೀಗೆ ಅಧಿಕಾರ ನೀಡಬಾರದು ಎಂಬುದು ಅವರ ವಾದವಾಗಿತ್ತು. ಬದಲಾಗುತ್ತಿರುವ ಸಮಾಜದಲ್ಲಿ ಸಿಗುತ್ತಿರುವ ವಿವಿಧ ಯೋಜನೆಗಳ ಲಾಭವನ್ನು ಪಡೆದುಕೊಳ್ಳಲು ಮುಂದೆ ಬಂದಿದ್ದು "ಮಾತೃ ಪ್ರಧಾನ ಕುಟುಂಬದಂತೆಯೇ ಪಿತೃ ಪ್ರಧಾನ ಕುಟುಂಬದಲ್ಲಿಯೂ ಸಹ ಮಹಿಳೆಯು ಕುಟುಂಬದಲ್ಲಿನ ನಿರ್ಣಯ ಕೈಗೊಳ್ಳುವಿಕೆಯಲ್ಲಿ ಪುರುಷನಷ್ಟೇ ಅಧಿಕಾರ/ಜವಾಬ್ದಾರಿ ಹೊಂದಿರುವುದನ್ನು ಕೋಷ್ಟಕ ೪.೪ ರಿಂದ ಕಂಡು ಕೊಳ್ಳಲಾಗಿದೆ. "ವಿದ್ಯಾರ್ಥಿಗಳಿಗೆ ರಾಜಕೀಯ ಜ್ಞಾನ ತಿಳಿದಿರಬೇಕೆ ಹೊರತು ಅದರ ಪ್ರಯೋಗಕ್ಕೆ ಹೋಗಬಾರದು" ಎಂಬುದು 'ಮಹಾತ್ಮಾ ಗಾಂಧೀಜಿ'ಯವರ ಚಿಂತನೆಯಾಗಿತ್ತು. ಆಧುನಿಕ ಸಮಾಜದಲ್ಲಿ ಸರ್ಕಾರಗಳು ನೀಡುತ್ತಿರುವ ರಾಜಕೀಯ ಮೀಸಲಾತಿಯಿಂದಾಗಿ ವಿವಿಧ ಕ್ಷೇತ್ರಗಳಲ್ಲಿ ಮಹಿಳೆ ಸ್ಪರ್ಧೆಗಿಳಿಯುತ್ತಿದ್ದು, ರಾಜಕೀಯ ಪುರುಷರಿಗಷ್ಟೆ ಅಲ್ಲ ಎಂಬುದನ್ನು ತೋರಿಸಿ ಕೊಟ್ಟಿದ್ದಾಳೆ ಹಾಗೂ ಸಮಾಜ ಕಂಟಕ/ಸಮಾಜ ವಿರೋಧಿ ಚಟುವಟಿಕೆಗಳನ್ನು ವಿರೋಧಿಸುತ್ತಿರುವುದು, ವಿವಿಧ ಹಕ್ಕುಗಳ ಪ್ರತಿಪಾದನೆ ಮಾಡುವಷ್ಟು ಸಮರ್ಥಳಾಗಿ ಬೆಳೆಯುತ್ತಿರುವುದು ಕೋಷ್ಟಕ ೪.೫ ರಿಂದ ಕಂಡು ಬಂದಿದೆ.

ಎಸ್.ಜೆ.ಎಸ್.ಆರ್.ವೈ ಯೋಜನೆಯಲ್ಲಿ ಸಣ್ಣ ಉದ್ದಿಮೆ ಸ್ಥಾಪನೆಯು ಒಂದು ಪ್ರಮುಖವಾದ ಅಂಗವಾಗಿದೆ. ಭಾರತ ರತ್ನ ಸರ್. ಎಂ ವಿಶ್ವೇಶ್ವರಯ್ಯನವರು "ಯೋಜಿಸಿರಿ ಇಲ್ಲವೇ ಹಾಳಾಗಿರಿ" ಎಂಬ ಘೋಷಣೆಯನ್ನು ಮನಗಂಡು ಸರ್ಕಾರವು ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೊಳಿಸುತ್ತಾ ಬಂದಿದೆ. ಈ ವಿವಿಧ ಯೋಜನೆಗಳಡಿಯಲ್ಲಿ ನಿರುದ್ಯೋಗ ನಿವಾರಣೆ ಮಾಡಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸುತ್ತಾ ಬಂದಿದೆ. ಅದರಲ್ಲಿ ಸ್ವಯಂ ಉದ್ಯೋಗವು ಒಂದಾಗಿದೆ. ಈ ಉದ್ಯೋಗಕ್ಕೆ ಮಹಿಳೆಯೇ ಮುಖ್ಯವಾದ

ಫಲಾನುಭವಿಯಾಗಿದ್ದಾಳೆ. ೨೫ ಸಣ್ಣ ಉದ್ದಿಮೆ ಕೈಗೊಂಡಿರುವ ಫಲಾನುಭವಿಗಳಿಂದ ಅಂಕಿ ಅಂಶಗಳನ್ನು ಸಂಗ್ರಹಿಸಿದ್ದು, ಸ್ಥಳೀಯ ಅಗತ್ಯತೆ ಹಾಗೂ ಮಾರುಕಟ್ಟೆಯ ಬೇಡಿಕೆಗೆ ಅವಶ್ಯಕವಾಗಿ ಹಾಗೂ ಸೇವೆ ನೀಡುವ ವಲಯಗಳಲ್ಲಿ ವಿವಿಧ ಉದ್ಯೋಗಗಳನ್ನು ಕೈಗೊಂಡಿರುವುದು ಕೋಷ್ಟಕ ೩.೨೧ ರಿಂದ ತಿಳಿದು ಬರುತ್ತದೆ. ಮಹಿಳೆ ಹೆಸರಿನಲ್ಲಿ ತನ್ನ ಕುಟುಂಬದ ಯಜಮಾನನಿಗೆ ಸ್ವಯಂ ಉದ್ಯೋಗ ಮಾಡಲು ತಾನು ಸದಸ್ಯಳಾಗಿ ಸಾಲ-ಸೌಲಭ್ಯ ತೆಗೆದು ಕೊಂಡಿರುವುದು ಸಹ ಈ ಅಧ್ಯಯನದಿಂದ ಕಂಡು ಬಂದಿದೆ. ಆದಾಗ್ಯೂ ಮಾರುಕಟ್ಟೆಯಲ್ಲಿ ಉತ್ಪನ್ನಗಳಿಗೆ ಸ್ಪರ್ಧೆ ಎದುರಿಸುತ್ತಿರುವುದು ಕಂಡು ಬಂದಿದೆ.

ಈಗ ಯಾವುದೇ ಕೆಲಸಕ್ಕಾಗಲಿ, ಉದ್ಯಮ ಆರಂಭಿಸಲಾಗಲೀ, ಸೇವಾ ಕ್ಷೇತ್ರ ಪ್ರವೇಶಕ್ಕಾಗಲೀ, ಕನಿಷ್ಟ ಮಟ್ಟದ ಕ್ವಾಲಿಫಿಕೇಶನ್ ಅಂದರೆ ಅರ್ಹತೆ ಇರಲೇಬೇಕು. ಆದರೆ ಮೈಕ್ರೋ ಎಂಟ್‌ರ್ ಪ್ರೈಸ್ ಅರ್ಥಾತ್ ಅತಿ ಸಣ್ಣ ಮತ್ತು ಸಣ್ಣ ಉದ್ಯಮ ಆರಂಭಿಸಲು ಇಂತಹ ಯಾವುದೇ ವಿದ್ಯಾರ್ಹತೆ ಅಗತ್ಯವಿಲ್ಲ. ಇಲ್ಲಿ ಬೇಕಾಗಿರುವುದು ಅನುಭವ ಅಥವಾ ಅನುಭವಿಗಳ ಮಾರ್ಗದರ್ಶನ ಇಲ್ಲವೇ ಪರಿಣತರಿಂದ ಪಡೆದ ತರಬೇತಿ ಎನ್ನುವುದು ಮುರಳೀದರ್ ಬಿ ಕುಲಕರ್ಣಿ ಇವರ ಲೇಖನದಿಂದ ತಿಳಿಯಬಹುದು.[೩]

"ಉದ್ಯೋಗಂ ಪುರುಷ ಲಕ್ಷಣಂ" ಎಂಬ ಕಾಲವು ಇತ್ತು. ಆದರೆ ಬದಲಾದ ಸಮಾಜದಲ್ಲಿ ಮಹಿಳೆಗೆ ಕುಟುಂಬದಲ್ಲಿ ಯಜಮಾನ, ತಂದೆ-ತಾಯಿ ಅಣ್ಣ-ತಮ್ಮ ಎಲ್ಲರೂ ಉದ್ಯೋಗ ಕೈಗೊಳ್ಳಲು ಪ್ರೋತ್ಸಾಹ/ಬೆಂಬಲ ನೀಡುತ್ತಿರುವುದು ಕೋಷ್ಟಕ ೩.೨೩ ರಿಂದ ಕಂಡು ಬರುತ್ತದೆ. ಮಹಿಳೆಯು ಸಹ ಉತ್ಸಾಹದಿಂದ ಹೊರಬಂದು ದುಡಿಯುತ್ತಿದ್ದಾಳೆ. ಇದನ್ನೇ **ಪಿ.ಎ."ಸಾರೋಕಿನ್"** ರವರು ಸಾಮಾಜಿಕ ಸಂಚಲನೆಯಿಂದಾಗಿ ಮಾತ್ರ ಸಾಮಾಜಿಕ ಪ್ರಗತಿ ಮತ್ತು ಆರ್ಥಿಕ ಅಭಿವೃದ್ಧಿ ಉಂಟಾಗುವುದು ಎಂದಿರುವುದನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ಅವರು ಮಂಡಿಸಿರುವ ಲಂಬಾಂತರ ಸಂಚಲನಾ ಸಿದ್ಧಾಂತದಲ್ಲಿ ಕಾಣಬಹುದು. ಸ್ವಯಂ ಉದ್ಯೋಗ, ಮಹಿಳಾ ಗುಂಪು ಉದ್ಯೋಗ ಹಾಗೂ ಸ್ವಸಹಾಯ ಸಂಘಗಳ ಮೂಲಕ ಗಳಿಸಿದ ಆದಾಯದಲ್ಲಿ ಮಹಿಳೆ ಮಕ್ಕಳ ಶಿಕ್ಷಣಕ್ಕೆ ತರಬೇತಿಗಳಿಗೆ ಬಂದ ಆದಾಯದಲ್ಲಿ ಬಳಕೆ ಮಾಡಿರುವುದನ್ನು ಕೋಷ್ಟಕ ೪.೬ ರಲ್ಲಿ ಕಾಣುತ್ತೇವೆ. ಎ.ಕೆ ಖಾನ್ ರವರು ೧೯೭೭ ರಲ್ಲಿ Basic Need Targets ಎಂಬ ಗ್ರಂಥದಲ್ಲಿ ಬಡತನ ಮೂಲಭೂತ ಬೇಡಿಕೆಗಳಿಗೆ ಹಾಗೂ ಜೀವನಾವಶ್ಯಕ ಅವಶ್ಯಕತೆಗಳಿಗೆ ಸಂಬಂಧಿಸಿದೆ ಎಂದು ತಿಳಿಸಿದ್ದಾರೆ. ಇವರ ಈ ಮಾತಿಗೆ ಪ್ರತಿಯೊಬ್ಬರು ಉದ್ಯೋಗ ಹೊಂದುವುದರ ಮೂಲಕ ಬಡತನ ನಿರ್ಮೂಲನೆ ಸಾಧ್ಯ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಒಗ್ಗಟ್ಟಿನಲ್ಲಿ ಬಲವಿದೆ ಎಂಬುದು ಕಾರ್ಲ್‌ಮಾರ್ಕ್ಸ್ ರವರ ಅಭಿಪ್ರಾಯವಾಗಿದೆ. ಎಸ್.ಜೆ.ಎಸ್.ಆರ್.ವೈ ಯೋಜನೆಯಲ್ಲಿ ಮಹಿಳಾ ಗುಂಪು

ಉದ್ಯೋಗವು ಒಂದು ಮಹತ್ವದ ಕಾರ್ಯಕ್ರಮವಾಗಿದ್ದು ನಗರದ ಸಮಾನ ಮನಸ್ಕ ಮಹಿಳೆಯರು ಮಾಡುವ ಒಂದು ಉದ್ಯೋಗವಾಗಿದೆ.

**ಅರಿಸ್ಟಾಟಲ್‌ರವರು** "ಮಾನವ ಸಂಘ ಜೀವಿ" ಒಂಟಿಯಾಗಿ ಬಾಳಲಾರ ಎಂಬುದನ್ನು ಈ ಹಿಂದೆಯೇ ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ. ಸಮಾಜದಲ್ಲಿ ಪ್ರತಿಯೊಬ್ಬನೂ ಜನರೊಟ್ಟಿಗೆ ವಾಸ ಮಾಡಬೇಕಾಗುತ್ತದೆ ಎಂದಿದ್ದಾರೆ. ಅದರಂತೆ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯಡಿಯಲ್ಲಿ ನಗರ ಪ್ರದೇಶದ ಸಮಾನ ಮನಸ್ಕ ಮಹಿಳೆಯರಲ್ಲಿ ಗುಂಪು ಉದ್ಯೋಗ ಪ್ರಾರಂಭಿಸಲು ಸರ್ಕಾರವು ಪ್ರೇರೇಪಣೆ ನೀಡಿತು. ಗುಂಪು ಉದ್ಯೋಗಕ್ಕೆ ಪ್ರೋತ್ಸಾಹ ನೀಡುವುದರಿಂದ ಅವರು ದೊಡ್ಡ ಗಾತ್ರದ ಉದ್ಯಮಗಳನ್ನು ಪ್ರಾರಂಭಿಸುವುದರಿಂದ (ಸುಮಾರು ೦೫ ರಿಂದ ೧೦ ಜನರು) ಒಗ್ಗಟ್ಟಿನಿಂದ ಬಂಡವಾಳ ಹೂಡಿ ಅದರಲ್ಲಿ ಒಟ್ಟಿಗೆ ದುಡಿಯುವುದರಿಂದ ಹೆಚ್ಚು ಆದಾಯ ಗಳಿಸಿ ಆರ್ಥಿಕ ಅಭಿವೃದ್ಧಿ ಸಾಧಿಸಬಹುದಾಗಿದೆ. ಈ ಉದ್ಯೋಗಕ್ಕೆ ಸರ್ಕಾರವು ನಿಗದಿಪಡಿಸಿರುವ ಗುರಿಯು ಸಹ ವರ್ಷಕ್ಕೆ ೧ ರಿಂದ ೨ ಮಾತ್ರ ಇರುತ್ತದೆ.

**ಡಾ.ಎ. ವಿನಾಯಕ ಮೂರ್ತಿರವರು** ಸ್ವ ಸಹಾಯದ ಮೂಲಕ ಮಹಿಳಾ ಸಶಕ್ತೀಕರಣದ ಪ್ರಬಂಧವನ್ನು ಮಂಡಿಸಿ ಮಹಿಳಾ ಗುಂಪುಗಳು ವಿವಿಧ ಕೌಶಲ್ಯಾಭಿವೃದ್ಧಿ ಪಡೆದುಕೊಂಡು ಸ್ವಯಂ ಉದ್ಯೋಗದ ಕಡೆಗೆ ಗಮನ ನೀಡಬೇಕು ಎಂದು ತಿಳಿಸಿದ್ದಾರೆ. ಅದರಂತೆ ಗುಂಪು ಉದ್ಯೋಗದಲ್ಲಿ ಮಹಿಳೆಯರು ಸ್ಥಳೀಯ ಅಗತ್ಯತೆಗಳು/ ಬೇಡಿಕೆಗೆ ಅನುಗುಣವಾಗಿ ಹಾಗೂ ಮಾರುಕಟ್ಟೆಯಲ್ಲಿ ಉತ್ಪನ್ನ ವಸ್ತುಗಳಿಗೆ ಎದುರಾಗುವ ಸ್ಪರ್ಧೆಯನ್ನು ಮನಗಂಡು ಕಚ್ಚಾ ಸರಕುಗಳನ್ನು ಪಡೆದು ಗುಂಪಾಗಿ ಉದ್ಯೋಗದಲ್ಲಿ ತೊಡಗಿ ಕೊಳ್ಳುತ್ತಿರುವುದು ಕೋಷ್ಟಕ ೩.೨೫ ರಿಂದ ಕೋಷ್ಟಕ ೩.೨೬ ರವರೆಗಿನ ಅಂಕಿ ಅಂಶಗಳು ತಿಳಿಸುತ್ತವೆ. ಈ ಗುಂಪು ಉದ್ಯೋಗದಲ್ಲಿ ಈಗಾಗಲೇ ಸಣ್ಣ ಪುಟ್ಟ ಉದ್ಯೋಗಗಳನ್ನು ಮಾಡುತ್ತಿದ್ದವರು, ಹೆಚ್ಚಿನ ಆದಾಯ ತಂದು ಕೊಡುವ ವಸ್ತುಗಳನ್ನು ಉತ್ಪಾದಿಸಲು ಮುಂದೆ ಬಂದಿದ್ದಾರೆ. ಈ ಫಲಾನುಭವಿಗಳು ಸಹ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಇತ್ಯಾದಿ ಕ್ಷೇತ್ರಗಳಲ್ಲಿ ತನ್ನದೇ ಆದ ಜವಾಬ್ದಾರಿಯುತ ಪಾತ್ರವನ್ನು ನಿರ್ವಹಿಸುತ್ತಾ ಸಮಾಜದಲ್ಲಿ ಆರ್ಥಿಕ ಸ್ವಾತಂತ್ರ್ಯವನ್ನು ಹೊಂದುತ್ತಿರುವುದು ಅಂಕಿ ಅಂಶಗಳಿಂದ ತಿಳಿದು ಬರುತ್ತದೆ.

**ಟಿ.ಎಫ್.ವಾಯ್.ಪಿ.ಕಮಿಟಿ** ೧೦ನೇ ಪಂಚವಾರ್ಷಿಕ ಯೋಜನೆಯ ಭಾರತೀಯ ಸರ್ಕಾರದ ಯೋಜನಾ ಆಯೋಗದ ವರದಿಯಲ್ಲಿ "ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಬಗ್ಗೆ ಮೌಲ್ಯಮಾಪನ ಮಾಡಿ ಮಹಿಳೆ ಉದ್ಯಮ ಕ್ಷೇತ್ರದಲ್ಲಿ ಬರಬೇಕು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳವುದರ ಮೂಲಕ ಅವಳಿಗೆ ಆರ್ಥಿಕ ಸಹಾಯ ನೀಡಬೇಕೆಂಬ ಸಲಹೆ ನೀಡಿದ್ದಾರೆ. ಸ್ವರ್ಣ ಜಯಂತಿ ಶಹರಿ

ರೋಜ್ಗಾರ್ ಯೋಜನೆ ಅಡಿಯಲ್ಲಿ ಹಲವಾರು ಕಾರ್ಯಕ್ರಮಗಳು ಮಹಿಳೆಗೆ ದೊರಕಿರುವುದನ್ನು ಕಂಡು ಕೊಳ್ಳಲಾಗಿದೆ.

**ಎಚ್ಬಾರ್ಕೆ**ರವರು ಭಾರತದ ಆರ್ಥಿಕ ಅಭಿವೃದ್ಧಿ ಎಂಬ ಪುಸ್ತಕದಲ್ಲಿ ಮಹಿಳೆಯು ಬ್ಯಾಂಕ್ ವ್ಯವಹಾರದಲ್ಲಿ ಮುಂದೆ ಬಂದರೆ ಮಾತ್ರ ಸಮತೋಲನದ ಅಭಿವೃದ್ಧಿ ಸಾಧ್ಯ ಎಂದು ಹೇಳಿದ್ದಾರೆ. ಇದನ್ನು ಒಪ್ಪಲಾಗದು ಯಾಕೆಂದರೆ ಮಹಿಳೆಗೆ ಬರೀ ಬ್ಯಾಂಕ್ ವ್ಯವಹಾರದಲ್ಲಿ ತಿಳುವಳಿಕೆ ಇದ್ದರೆ ಸಾಲದು ಮೊದಲು ಉದ್ಯೋಗ ನಂತರ ಆ ಉದ್ಯೋಗದಿಂದ ಆರ್ಥಿಕ ಅಭಿವೃದ್ಧಿ ಸಾಧಿಸುವುದು ಮುಖ್ಯ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಪಂಜಾಬ್ ರಾಜ್ಯದ ಅಮೃತಸರದಲ್ಲಿ ಡಾ.ಎ.ಕೆ. ಸಿಂಗ್ ಮತ್ತು ಡಾ. ಕಮಲ್ ಕುಮಾರ್ ಸಿಂಗ್ ರವರು ಅಧ್ಯಯನ ನಡೆಸಿದ್ದು, ಎಸ್.ಜೆ.ಎಸ್.ಆರ್.ವೈ ಯೋಜನೆ ಅಡಿಯಲ್ಲಿ ಸಾಲ ಸೌಲಭ್ಯದ ಮತ್ತು ಸಹಾಯಧನದ ಹೆಚ್ಚಳ ಮಾಡಬೇಕಾಗಿರುವುದರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ ಅಧ್ಯಯನದಲ್ಲಿಯೂ ಫಲಾನುಭವಿಗಳು ಸಹ ಸಾಲ ಸೌಲಭ್ಯದ ಮತ್ತು ಸಹಾಯಧನದ ಹೆಚ್ಚಳ ಮಾಡಬೇಕಾಗಿರುವುದರ ಬಗ್ಗೆ ಪ್ರಸ್ತಾಪಿಸಿರುವುದನ್ನು ಕಂಡು ಕೊಳ್ಳಲಾಗಿದೆ.

ಎಸ್.ಜೆ.ಎಸ್.ಆರ್.ವೈ ಯೋಜನೆಯ ಕಾರ್ಯಕ್ರಮಗಳ ಅಡಿಯಲ್ಲಿ ಫಲಾನುಭವಿಯಾಗಿರುವವರು ಸರ್ಕಾರದ ಸಬ್ಸಿಡಿ, ಬ್ಯಾಂಕ್ ಸಾಲದ ಮೊತ್ತ, ಘಟಕದ ವೆಚ್ಚ, ಮಾರ್ಜಿನ್ ಹಣ ಇತ್ಯಾದಿ ಎಲ್ಲ ಮಾಹಿತಿಗಳನ್ನೊಳಗೊಂಡಂತೆ ತಿಳುವಳಿಕೆ ಹೊಂದಿದ್ದು, ಸ್ವಯಂ ಉದ್ಯೋಗದ ಪ್ರತಿಶತ ೧೦೦ ರಷ್ಟು ಜನರು, ಮಹಿಳಾ ಗುಂಪು ಉದ್ಯೋಗದ ಫಲಾನುಭವಿಗಳು ಪ್ರತಿಶತ ೧೦೦ ರಷ್ಟು ತಿಳುವಳಿಕೆಯನ್ನು ಹೊಂದಿದವರಾಗಿದ್ದಾರೆ.

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಮತ್ತೊಂದು ಪ್ರಮುಖ ಕಾರ್ಯಕ್ರಮ ಕೌಶಲ್ಯಾಭಿವೃದ್ಧಿಯನ್ನು ಜನರಲ್ಲಿ ಹೆಚ್ಚಿಸುವುದಾಗಿದೆ. ಸ್ವಯಂ ಉದ್ಯೋಗ ಅಥವಾ ಗುಂಪು ಉದ್ಯೋಗ ಕೈಗೊಳ್ಳುವ ಪ್ರತಿಯೊಬ್ಬ ಫಲಾನುಭವಿಗೆ ತರಬೇತಿ ಅವಶ್ಯಕತೆ ಇದ್ದರೆ, ಆ ನಿಟ್ಟಿನಲ್ಲಿ ಕಾರ್ಯಕ್ರಮವನ್ನು ನಿರ್ವಹಿಸುತ್ತದೆ. ಯೋಜನೆಯ ಪ್ರಾರಂಭದಲ್ಲಿ ಅನೇಕ ಜನರು ಸ್ವಂತ ಅನುಭವ/ ಕೌಶ್ಯಲ್ಯದಿಂದ ಸ್ವಯಂ ಉದ್ಯೋಗಗಳನ್ನು ಕೈಗೊಂಡವರಾಗಿದ್ದಾರೆ. ಸ್ಥಳೀಯ ಪ್ರದೇಶದ ಅವಶ್ಯಕತೆಗೆ ತಕ್ಕಂತೆ ಎಸ್.ಜೆ.ಎಸ್.ಆರ್.ವೈ. ಅಡಿಯಲ್ಲಿ ನಗರದ ಬಡ ಮಕ್ಕಳಿಗೆ ತರಬೇತಿಯನ್ನು ನೀಡುವುದರ ಮೂಲಕ ಸರ್ವೀಸ್ ಸೇವೆಗಳಲ್ಲಿ ಅಥವಾ ಇನ್ನಿತರ ನಗರದಲ್ಲಿ ಬೇಡಿಕೆ ಇರುವ ಕೆಲಸ ಸಿಗುವ ತರಬೇತಿಗಳನ್ನು ಆಯೋಜಿಸುತ್ತಾ ಬಂದಿದೆ. ನಡೆದ ವಿವಿಧ ತರಬೇತಿಗಳ ವಿವರಗಳನ್ನು ಕೋಷ್ಟಕ ೫.೯ ರಲ್ಲಿ ತೋರಿಸಲಾಗಿದೆ. ನಗರ ಪ್ರದೇಶದಲ್ಲಿ ವಾಸಿಸುವ ಜನರು ಅವರ ಸಾಮರ್ಥ್ಯಕ್ಕೆ ತಕ್ಕಂತೆ ತರಬೇತಿಯನ್ನು ಪಡೆದು ಉದ್ಯೋಗ ಮಾಡಬಹುದಾಗಿದೆ. **ಅಮಾರ್ತ್ಯ**

**ಸೇನ್** ರ ಚಿಂತನೆಯಂತೆ ಸಾಮರ್ಥ್ಯದ ಕೊರತೆಯೂ ಸಹ ಬಡತನಕ್ಕೆ ಮೂಲ ಕಾರಣ ಹಾಗಾಗಿ ಜನರಿಗೆ ಕೌಶಲ್ಯದ ಸಾಮರ್ಥ್ಯವೂ ಸಹ ಇರಬೇಕೆಂಬುದನ್ನು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

ತರಬೇತಿಯು ಥ್ರಿಪ್ ಮತ್ತು ಕ್ರೆಡಿಟ್ ಸೊಸೈಟಿಗೆ ಸಂಬಂಧಿಸಿದಂತೆ ಹಲವಾರು ತರಬೇತಿಗಳನ್ನು ಪ್ರತಿ ಕುಟುಂಬಗಳು ಪಡೆದುಕೊಂಡಿವೆ. ಈ ಕುಟುಂಬದಲ್ಲಿ ಫಲಾನುಭವಿಯ ಜೊತೆಗೆ ಮಕ್ಕಳು ಸಹ ಬೇಡಿಕೆಗೆ ಅನುಗುಣವಾಗಿ ತರಬೇತಿಗಳನ್ನು ಪಡೆದುಕೊಂಡಿರುವುದನ್ನು ಕೋಷ್ಟಕ ೫.೧೦ ರಿಂದ ಕಂಡುಕೊಳ್ಳಲಾಗಿದೆ.

ತರಬೇತಿಯನ್ನು ಪಡೆದ ಎಲ್ಲರೂ ಸಹ ಉದ್ಯೋಗಗಳನ್ನು ಕೈಗೊಂಡಿರುವುದಿಲ್ಲ, ಹಲವು ಮಂದಿ ಕೆಲಸಕ್ಕಾಗಿ ಕಾದು ಕುಳಿತಿರುವುದು ಕಂಡು ಬಂದಿದೆ. ಇದನ್ನು ಕೋಷ್ಟಕ ೪.೧೧ ರಲ್ಲಿರುವ ಅಂಕಿ ಅಂಶಗಳನ್ನು ನೋಡಿದಾಗ ತರಬೇತಿ ನಂತರ ಪ್ರತಿಶತ ೨೪.೩೩ ರಷ್ಟು ಉದ್ಯೋಗ ಕೈಗೊಂಡಿದ್ದು ಪ್ರತಿಶತ ೭೫.೬೬ ರಷ್ಟು ತರಬೇತಿ ಪಡೆದವರು ನಿರುದ್ಯೋಗಿಗಳಾಗಿರುವುದು ಕಂಡುಬಂದಿದೆ. ಈ ಕಾರಣಕ್ಕಾಗಿ ಫಲಾನುಭವಿಗಳಿಗೆ ಕೋಷ್ಟಕ ೪.೧೨ ರಲ್ಲಿ ಇದಕ್ಕೆ ಸಂಬಂಧಿಸಿದಂತೆ ನೀಡಿರುವ ಸಲಹೆಗಳನ್ನು ಪರಿಗಣಿಸಿದರೆ ತರಬೇತಿ ನಂತರ ಹೆಚ್ಚು ಜನರಿಗೆ ಹೇಗೆ ಸರ್ಕಾರವು ಉದ್ಯೋಗವನ್ನು ನೀಡಲು ಕ್ರಮ ಕೈಗೊಳ್ಳಬೇಕಾಗಿರುವುದು ಎಂಬುದು ತಿಳಿಯಬಹುದು. ತರಬೇತಿಗೆ ಸಂಬಂಧಿಸಿದಂತೆ ಎಲ್ಲಾ ಜನರಿಗೆ ಪ್ರಾಥಮಿಕ ಮಾಹಿತಿ ತಲುಪುತ್ತಿಲ್ಲ, ಇದು ಪ್ರಚಾರದ ರೀತಿಯಲ್ಲಿ ನಗರದ ಕುಟುಂಬಗಳಿಗೆ ದೊರೆಯಬೇಕು ಎಂಬ ಸಲಹೆಯನ್ನು ಸಹ ನೀಡಿರುವುದು ಕಂಡು ಬಂದಿದೆ. ಈ ಅಧ್ಯಯನದಿಂದ ನಾನು ತರಬೇತಿ ಬಗ್ಗೆ ಅಂದುಕೊಂಡಿದ್ದ ಸತ್ಯವು ನಿಜವಾಗಿದೆ. ಇಂದು ಸರ್ಕಾರವು ಹಲವಾರು ಯೋಜನೆಗಳ ಅಡಿಯಲ್ಲಿ ವಿವಿಧ ಕೌಶಲ್ಯಾಭಿವೃದ್ಧಿ ತರಬೇತಿಗಳನ್ನು ನೀಡುತ್ತಿದ್ದರೂ ಸಹ ಅವುಗಳು ಪರಿಣಾಮಕಾರಿಯಾಗಿ ಸಂಬಂಧಿಸಿದ ಜನರಿಗೆ ತಲುಪುತ್ತಿಲ್ಲ ಮತ್ತು ತರಬೇತಿ ಪಡೆದವರಿಗೆ ಸೂಕ್ತ ಉದ್ಯೋಗವನ್ನು ಸಹ ಕಲ್ಪಿಸಲು ಸರ್ಕಾರಕ್ಕೆ ಸಾಧ್ಯವಾಗಿಲ್ಲ. ಕಾರಣ ಮಾಹಿತಿ, ಸಂವಹನ ಹಾಗೂ ಸಂಪರ್ಕದ ಕೊರತೆಯಿದೆ ಎಂದು ಈ ಅಧ್ಯಯನದಿಂದ ಕಂಡು ಬಂದಿದೆ. ತರಬೇತಿ ಕಾರ್ಯಕ್ರಮದಲ್ಲಿ ಕಂಡು ಬಂದ ಅಂಕಿ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ ನೋಡುವುದಾದರೆ ಇದು **ಪಿ.ಎ. ಸಾರೋಕಿನ್** ರವರ ಸಾಮಾಜಿಕ ಅವರೋಹಣ ಅಥವಾ ಅಧೋಮುಖ ಬೆಳವಣಿಗೆ ಎಂದು ಹೇಳಬಹುದು.

ಸಮುದಾಯ ಅಭಿವೃದ್ಧಿ ಸಂಘವು ಈ ಮೇಲಿನ ಎಲ್ಲಾ ಕಾರ್ಯಕ್ರಮಗಳನ್ನು ಸ್ಥಳೀಯ ಸಂಸ್ಥೆಯ ಮಟ್ಟದಲ್ಲಿ ಒಂದು ವಿದ್ಯುಕ್ತ ಸಂಘಟನೆಯಾಗಿ ಸಮಾನ ಗುರಿ ಮತ್ತು ಉದ್ದೇಶಗಳನ್ನು ಹೊಂದಿ ತನ್ನದೇ ಆದ

ಕಾರ್ಯವನ್ನು ನಿರ್ವಹಿಸುತ್ತಾ ಬರುತ್ತಿದೆ, ಇದರ ಬಗ್ಗೆ ಜನರಿಂದ ಅಭಿಪ್ರಾಯಗಳನ್ನು ಪಡೆಯಲಾಗಿದ್ದು ಈ ಸೊಸೈಟಿಯು ರಾಜಕೀಯ ಒತ್ತಡದಿಂದ ದೂರ ಉಳಿಯುವ ಬಗ್ಗೆ ಜನರು ಪ್ರತಿಕ್ರಿಯೆ ವ್ಯಕ್ತಪಡಿಸಿರುವುದು ಕಂಡು ಬಂದಿದೆ.

ಸಾಮಾಜಿಕ ಸೇವಾ ಕಾರ್ಯಕ್ರಮಗಳಲ್ಲಿ ಜನರು ಭಾಗವಹಿಸುತ್ತಿರುವ ಬಗ್ಗೆ ನೋಡಿದಾಗ ಪ್ರತಿಶತ ೧೮.೨೩ ರಷ್ಟು ಜನರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸದೇ ಇರುವುದು ಕಂಡು ಬಂದಿದೆ. ಇದಕ್ಕೆ ಈ ಯೋಜನೆ ಅಡಿಯಲ್ಲಿ ಇರುವ ಮಾಹಿತಿ–ಸಂಪರ್ಕ–ಸಂವಹನ ಕಾರ್ಯಕ್ರಮವು ಪರಿಣಾಮಕಾರಿಯಾಗಿ ಜಾರಿಗೊಳ್ಳದಿರುವದನ್ನು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ. ಈ ಬಗ್ಗೆ ಕೋಷ್ಟಕ ೩.೨ ರಲ್ಲಿನ ಅಂಕಿ ಅಂಶಗಳು ಪುಷ್ಠೀಕರಿಸುತ್ತವೆ.

**ಬ್ಯಾಂಕುಗಳ ಪರಿಕಲ್ಪನೆ :**

೧೯೬೯ ರಲ್ಲಿ ಇಂದಿರಾಗಾಂಧಿಯವರು ಕೈಗೊಂಡ ಬ್ಯಾಂಕ್‌ಗಳ ರಾಷ್ಟ್ರೀಕರಣ ಯೋಜನೆಯಿಂದಾಗಿ ರಾಷ್ಟ್ರೀಕೃತ ಹೊಂದಿದ ೨೧ ಬ್ಯಾಂಕುಗಳು ಪ್ರಮುಖವಾಗಿ ಸಾಮಾಜಿಕ ಅಭಿವೃದ್ಧಿಯಲ್ಲಿ ಕಳೆದ ನಾಲ್ಕು ದಶಕಗಳಿಂದ ತೊಡಗಿಸಿಕೊಂಡಿವೆ. ಇದಲ್ಲದೆಯೇ ವಿವಿಧ ಗ್ರಾಮೀಣ ಬ್ಯಾಂಕುಗಳು, ಸರಕಾರಿ ಬ್ಯಾಂಕುಗಳು ಮತ್ತು ಖಾಸಗಿ ವಲಯದ ಬ್ಯಾಂಕುಗಳು ಕೂಡ ಮಹಿಳಾ ಅಭಿವೃದ್ಧಿಪರ ಪ್ರಕ್ರಿಯೆಯಲ್ಲಿ ಭಾಗಿಯಾಗಿವೆ. ಯೋಜನೆಗೆ ಸಂಬಂಧಪಟ್ಟಂತೆ, ಈ ಕೆಳಗಿನ (ಬ್ಯಾಂಕುಗಳ ಮಟ್ಟಿಗೆ) ವ್ಯವಸ್ಥೆಯ ಬಗೆಗೆ ಅರಿವು ತುಂಬ ಮುಖ್ಯ.

ಜಿಲ್ಲಾ ಅಗ್ರಣೀಯ ಬ್ಯಾಂಕರ್ (ಲೀಡ್ ಬ್ಯಾಂಕ್ ಮ್ಯಾನೇಜರ್)

⇧

ಜಿಲ್ಲಾ ಮಟ್ಟದ ಸಂಯೋಜನಾಧಿಕಾರಿ (ಅದೇ ಬ್ಯಾಂಕಿನ) (ಡಿಸ್ಟಿಕ್ ಕೋ–ಆರ್ಡಿನೇಟರ್)

⇧

ಬ್ಯಾಂಕ್ (ಭೌಗೋಳಿಕವಾಗಿ ಹತ್ತಿರವಾದ) ಬ್ಯಾಂಕ್ ಮ್ಯಾನೇಜರ್

⇧

ಯೋಜನೆಗೆ ಸಂಬಂಧಿಸಿದ ಫಲಾನುಭವಿಗಳು/ ಗುಂಪುಗಳು

ಸಾಮಾನ್ಯವಾಗಿ, ಯೋಜನೆಯ ಅನುಷ್ಠಾನದ ಹಂತದಲ್ಲಿ ಜಿಲ್ಲಾ ಅಗ್ರಣೀಯ ಬ್ಯಾಂಕ್‌ಅಧಿಕಾರಿಯ ಪಾತ್ರ ತುಂಬಾ ಮುಖ್ಯವಾದದ್ದು.

ನಗರ ಮಹಿಳಾ ಸ್ವಸಹಾಯ ಗುಂಪುಗಳಿಗೆ ಯೋಜನೆಯಡಿ ಸುತ್ತು ನಿಧಿಯನ್ನು ನೀಡುವ ಮೊದಲು ರಚನೆಯಾದ ಸ್ವಸಹಾಯ ಗುಂಪುಗಳ ಗ್ರೇಡಿಂಗ್ ಮಾಡುವಾಗ ಅನುಸರಿಸುವ ಮಾನದಂಡಗಳು:

## ಕೋಷ್ಟಕ ೩.೨೮
## ಸ್ವಸಹಾಯ ಗುಂಪುಗಳ ಗ್ರೇಡಿಂಗ್ ಮಾನದಂಡಗಳು[೪]

| ಕ್ರ ಸಂ. | ಮಾನದಂಡಗಳು | ಅತ್ಯುತ್ತಮ | ಉತ್ತಮ | ಅತೃಪ್ತಿಕರ |
|---|---|---|---|---|
| ೧ | ಸ್ವಸಹಾಯ ಗುಂಪಿನ ಗಾತ್ರ | ೧೫ ರಿಂದ ೨೦ ಸದಸ್ಯರು | ೧೦ ರಿಂದ ೧೪ ಸದಸ್ಯರು | ೧೦ ಸದಸ್ಯರಿಗಿಂತ |
| ೨ | ಸದಸ್ಯರ ಆರ್ಥಿಕ ಸ್ಥಿತಿ ಗತಿ | ಎಲ್ಲ ಸದಸ್ಯರು ಬಡತನ ರೇಖೆಗಿಂತ ಕೆಳಗಿರುವವರಿರುತ್ತಾರೆ. | ೨–೩ ಸದಸ್ಯರು ಮಾತ್ರ ಬಡತನ ರೇಖೆಗಿಂತ ಕೆಳಗಿರುವವರಿರುತ್ತಾರೆ. | ಹೆಚ್ಚಿನ ಸದಸ್ಯೆಯರು ಬಡವರಲ್ಲ |
| ೩ | ನಿರ್ವಹಿಸಿದ ವಾರದ ಸಭೆಗಳು | ತಿಂಗಳಿನಲ್ಲಿ ೪–೫ ಸಭೆಗಳು | ತಿಂಗಳಿನಲ್ಲಿ ೨ ಸಭೆಗಳು | ತಿಂಗಳಿನಲ್ಲಿ ೧ ಸಭೆ |
| ೪ | ವಾರದ ಸಭೆಗಳಿಗೆ ಹಾಜರಾತಿ | ಶೇ. ೯೦ ಕ್ಕಿಂತ ಜಾಸ್ತಿ | ಶೇ. ೭೦ ರಿಂದ ಶೇ. ೯೦ | ಶೇ೭೦ ಕ್ಕಿಂತ ಕಡಿಮೆ. |
| ೫ | ಸದಸ್ಯರು ತೊಡಗಿಸಿಕೊಳ್ಳುವ ರೀತಿ | ಉತ್ತಮ ಮಟ್ಟದ ತೊಡಗಿಸಿಕೊಳ್ಳುವಿಕೆ | ಸಾಧಾರಣ ಮಟ್ಟದ ತೊಡಗಿಸಿಕೊಳ್ಳುವಿಕೆ | ಕನಿಷ್ಟ ಮಟ್ಟದ ತೊಡಗಿಸಿಕೊಳ್ಳೂವಿಕೆ |
| ೬ | ಸ್ವಸಹಾಯ ಗುಂಪಿನ ಉಳಿತಾಯ | ತಿಂಗಳಿನಲ್ಲಿ ೪–೫ ಬಾರಿ | ತಿಂಗಳಿನಲ್ಲಿ ೩ ಬಾರಿ | ತಿಂಗಳಿನಲ್ಲಿ ೨ ಬಾರಿಗಿಂತ ಕಡಿಮೆ. |
| ೭ | ಸಂಚಿತ ಉಳಿತಾಯ ಮೊತ್ತ | ರೂ. ೫೦೦೦/– ಗಳಿಗಿಂತ ಹೆಚ್ಚು | ರೂ. ೩೦೦೦/– ದಿಂದ ೫೦೦೦/– ಗಳು | ರೂ. ೩೦೦೦/– ಗಳಿಗಿಂತ ಕಡಿಮೆ |
| ೮ | ಆಂತರಿಕ ಸಾಲವು ವ್ಯಾಪಾರದ ಉದ್ದೇಶಕ್ಕಾಗಿ ಬಳಕೆಯಾಗಿದ್ದು | ಶೇ. ೫೦ ಕ್ಕಿಂತ ಹೆಚ್ಚು ಸದಸ್ಯರಿಂದ | ಶೇ. ೨೫ ರಿಂದ ಶೇ೫೦ ಸದಸ್ಯರಿಂದ | ಶೇ. ೨೫ ಕ್ಕಿಂತ ಕಡಿಮೆ ಸದಸ್ಯರಿಂದ |
| ೯ | ಆಂತರಿಕ ಸಾಲಕ್ಕೆ ಶೇ. ೨೪ ವಿಧಿಸಲಾದ ಬಡ್ಡಿದರ | ಶೇ. ೨೪ | ಶೇ. ೨೪ ರಿಂದ ಶೇ. ೩೬ | ಶೇ. ೩೬ಕ್ಕಿಂತ ಹೆಚ್ಚು ಪ್ರಮಾಣದ ಬಡ್ಡಿದರ |
| ೧೦ | ಸಾಲ ಮರುಪಾವತಿಯ ಪ್ರಮಾಣ | ಶೇ. ೯೧ ಕ್ಕೂ ಹೆಚ್ಚು | ಶೇ. ೮೦ ರಿಂದ ೯೦ | ಶೇ. ೭೯ ಕ್ಕಿಂತ ಕಡಿಮೆ |
| ೧೧ | ಸ್ವ–ಸಹಾಯ ಗುಂಪುಗಳ ನಿಯಮಗಳ ಪರಿಜ್ಞಾನ ಹಾಗೂ ಅನುಸರಣೆ | ಎಲ್ಲಾ ಸದಸ್ಯರು ತಿಳಿದು ಕೊಂಡಿರುತ್ತಾರೆ. | – | ಯಾರು ತಿಳಿದು ಕೊಂಡಿರುವುದಿಲ್ಲ. |
| ೧೨ | ಗುಂಪಿನ ಪುಸ್ತಕಗಳ ನಿರ್ವಹಣೆ | ಎಲ್ಲಾ ಪುಸ್ತಕಗಳನ್ನು ನಿಯಮಿತವಾಗಿ ನಿರ್ವಹಿಸಿದ್ದಾರೆ ಹಾಗೂ ಕಾಲೋಚಿತಗೊಳಿಸಿದ್ದಾರೆ. | ಪ್ರಮುಖ ಪುಸ್ತಕಗಳನ್ನು ಮಾತ್ರ (ನಡುವಳಿ ಉಳಿತಾಯ, ಆಂತರಿಕ ಸಾಲ ಇತ್ಯಾದಿ) ನಿರ್ವಹಿಸಿ ಹಾಗೂ ಕಾಲೋಚಿತಗೊಳಿಸಿದ್ದಾರೆ | ಯಾವುದೇ ಪುಸ್ತಕಗಳನ್ನು ನಿಯಮಿತವಾಗಿ ನಿರ್ವಹಿಸಿರುವುದಿಲ್ಲ ಕಾಲೋಚಿತ ಗೊಳಿಸಿರುವುದಿಲ್ಲ |

| | | | | |
|---|---|---|---|---|
| ೧೩ | ಸರ್ಕಾರ ಯೋಜನೆಗಳ ಬಗ್ಗೆ ಪರಿಜ್ಞಾನ | ಎಲ್ಲಾ ಸದಸ್ಯರು ತಿಳಿದುಕೊಂಡಿರುತ್ತಾರೆ. | ಹೆಚ್ಚಿನ ಸದಸ್ಯರು ತಿಳಿದುಕೊಂಡಿರುತ್ತಾರೆ. | ಯಾರೂ ತಿಳಿದುಕೊಂಡಿರುವದಿಲ್ಲ |
| ೧೪ | ವ್ಯಾಪಾರ ಚಟುವಟಿಕೆಗಳ ಬಗ್ಗೆ ಪ್ರಚಲಿತ ಕಾಯಿದೆ, ಕಾನೂನು ಮತ್ತು ನಿಯಮಗಳ ಪರಿಜ್ಞಾನ | ನವಿದೆ | ಶೇ ೫೦ ರಿಂದ ಶೇ. ೭೪ ರಷ್ಟು ಸದಸ್ಯರಿಗಿದೆ | ಶೇ. ೫೦ ಕ್ಕಿಂತ ಕಡಿಮೆ ಸದಸ್ಯರಿಗಿದೆ. |
| ೧೫ | ಶೈಕ್ಷಣಿಕ ಮಟ್ಟ | ಶೇ. ೨೦ ಕ್ಕಿಂತ ಹೆಚ್ಚು | ಶೇ. ೨೫ ರಿಂದ ಶೇ. ೫೦ ರಷ್ಟು ಸದಸ್ಯರು | ಶೇ. ೨೫ ಕ್ಕಿಂತ ಕಡಿಮೆ |
| ೧೬ | ಉತ್ಪಾದನೆ /ವ್ಯಾಪಾರ ಚಟುವಟಿಕೆಯಲ್ಲಿ ತೊಡಗಿರುವ ಸದಸ್ಯರ ಸಂಖ್ಯೆ | ಶೇ. ೫೦ ಕ್ಕಿಂತಲೂ ಹೆಚ್ಚು | ಶೇ. ೨೫ ರಿಂದ ಶೇ. ೫೦ ರಷ್ಟು ಸದಸ್ಯರು | ಶೇ. ೨೫ ಕ್ಕಿಂತ ಕಡಿಮೆ |
| ೧೭ | ಸದಸ್ಯರ ವಯೋಮಿತಿ | ೧೮ ರಿಂದ ೩೫ ವರ್ಷದ ವಯೋಮಿತಿ | ೩೫ ರಿಂಧ ೫೫ ವರ್ಷದ ವಯೋಮಿತಿ | ೧೮ ವರ್ಷಕ್ಕಿಂತ ಕಡಿಮೆ ೫೬ ವರ್ಷಗಳಿಂದ ಹೆಚ್ಚು |
| ೧೮ | ಯಾವುದೇ ಒಬ್ಬ ಸದಸ್ಯೆಯು ಸಂಬಂಧಿಕರಿಂಧ /ಸ್ನೇಹಿತೆಯರಿಂದ ವಾರದ ಸಭೆಯಲ್ಲಿ ಪ್ರತಿನಿಧಿಸಲ್ಪಟ್ಟ ಸಂದರ್ಭಗಳು | ೨ ಅಥವಾ ೨ ಬಾರಿಗಿಂತ ಕಡಿಮೆ ಸಂದರ್ಭಗಳಲ್ಲಿ | ೩ ಅಥವಾ ೪ ಸಂದರ್ಭಗಳಲ್ಲಿ | ೫ ಕಿಂತ ಹೆಚ್ಚು ಸಂದರ್ಭಗಳಲ್ಲಿ |
| ೧೯ | ಗುಂಪಿನ ಸದಸ್ಯರಲ್ಲಿ ಆದ ಬದಲಾವಣೆ | ಒಂದು ಬಾರಿ ಮಾತ್ರ | ೨ ರಿಂಧ ೩ ಬಾರಿ | ೩ ಕ್ಕಿಂತಲೂ ಹೆಚ್ಚು ಬಾರಿ |
| ೨೦ | ಬಡತನದ ಸೂಚಕಗಳು ಬಡತನ ರೇಖೆಗಿಂತ ಕೆಳಮಟ್ಟದಲ್ಲಿದ್ದರೂ ಬಿಪಿಎಲ್ ಪಟ್ಟಿಯಲ್ಲಿ ಇಲ್ಲದಿರುವವರು) | ಬಾಡಿಗೆ ಮನೆ ಟಿ.ವಿ ಇಲ್ಲ ದ್ವಿಚಕ್ರವಾಹನ ಇಲ್ಲ | ಭೋಗ್ಯದ ಮನೆ ಕಪ್ಪುಬಿಳುಪು ಟಿ.ವಿ, ಸೈಕಲ್ | ಸ್ವಂತ ಮನೆ ಬಣ್ಣದ ಟಿ.ವಿ ದ್ವಿಚಕ್ರ ವಾಹನ |
| ೨೧ | ಸದಸ್ಯರು ವಲಸೆಯ ಸ್ವರೂಪ | ಶೇ. ೫೦ ಕ್ಕಿಂತಲೂ ಹೆಚ್ಚು ಸದಸ್ಯರು ಪ್ರಸ್ತುತ ಸ್ಥಳದಲ್ಲಿ ೨ ವರ್ಷಕ್ಕಿಂತಲೂ ಹೆಚ್ಚು ಅವಧಿಯಿಂದ ವಾಸಿಸುತ್ತಿದ್ದಾರೆ. | ಶೇ. ೫೦ ಕ್ಕಿಂತಲೂ ಹೆಚ್ಚು ಸದಸ್ಯರು ೧ ಅಥವಾ ೨ ವರ್ಷ ಅವಧಿಯಿಂದ ಪ್ರಸ್ತುತ ಸ್ಥಳದಲ್ಲಿ ವಾಸಿಸುತ್ತಿದ್ದಾರೆ. | ಶೇ. ೫೦ ಕ್ಕಿಂತಲೂ ಹೆಚ್ಚು ಸದಸ್ಯರು ೧ ವರ್ಷಕ್ಕಿಂತಲೂ ಕಡಿಮೆ ಅವಧಿಯಿಂದ ಪ್ರಸ್ತುತ ಸ್ಥಳದಲ್ಲಿ ವಾಸಿಸುತ್ತಿದ್ದಾರೆ. |

| | | | | |
|---|---|---|---|---|
| ೨೨ | ಚಿಕ್ಕ ವ್ಯಾಪಾರ ಮಾಡಲು ಇಚ್ಚೆ ಪಡೆದ ಸದಸ್ಯರು | ಶೇ. ೨೦ ಕ್ಕಿಂತ ಕಡಿಮೆ ಸದಸ್ಯರು | ಶೇ. ೨೦ ರಿಂದ ೫೦ ಸದಸ್ಯರು | ಶೇ. ೫೦ ಕ್ಕಿಂತ ಕಡಿಮೆ ಸದಸ್ಯರು |
| ೨೩ | ವ್ಯಾಪಾರದ ಹಿನ್ನೆಲೆಯುಳ್ಳ ಸದಸ್ಯರ ಸಂಖ್ಯೆ | ಶೇ. ೫೦ ಕ್ಕಿಂತ ಹೆಚ್ಚು ಸದಸ್ಯರು | ಶೇ. ೨೫ಕ್ಕಿಂತ ಹೆಚ್ಚು | ಶೇ. ೨೫ ಕ್ಕಿಂತ ಕಡಿಮೆ ಸದಸ್ಯರು |
| ೨೪ | ಗುಂಪಿನಲ್ಲಿ ದೈಹಿಕ ಅಸಾಮರ್ಥ್ಯತೆವುಳ್ಳ ಸದಸ್ಯರ ಸಂಖ್ಯೆ | ೨ ಮತ್ತು ಮೇಲ್ಪಟ್ಟು | ಒಂದು | ಇಲ್ಲ |

ಮೂಲ : ನಗರ ಮಹಿಳಾ ಸ್ವಸಹಾಯ ಗುಂಪು ಯೋಜನೆ ಗುಂಪು ನಿರ್ವಹಣೆ ಕೈಪಿಡಿ (ಸುವರ್ಣ ಕರ್ನಾಟಕ ೨೦೦೬)

## ಕೋಷ್ಟಕ ೩.೨೯

## ಗ್ರಾಮೀಣ ಮತ್ತು ನಗರ ಗುಂಪುಗಳಲ್ಲಿಯ ಪ್ರಮುಖ ವ್ಯತ್ಯಾಸಗಳು

| | ಗ್ರಾಮೀಣ | ನಗರ |
|---|---|---|
| ಉದ್ದೇಶ | ಸಮಾನ ಮನಸ್ಸುಳ್ಳ, ಎಲ್ಲಾ ಮಹಿಳೆಯರ ಸಶಕ್ತೀಕರಣ | ಸಮಾನ ಮನಸ್ಸುಳ್ಳ ಸ್ವಯಂ ಉದ್ಯೋಗಕ್ಕೆ ಅಣಿಯಾಗಿರುವ ಮಹಿಳೆಯರು |
| ಆರ್ಥಿಕ ಅಗತ್ಯತೆ | ಸ್ವಸಹಾಯ ಗುಂಪುಗಳು ಸಂಗ್ರಹಿಸಿದ ಉಳಿತಾಯ ಹಣದಲ್ಲಿ ಹೆಚ್ಚಿನ ಪಾಲು ಸಂಸಾರ ನಿರ್ವಹಣೆಗೆ ಮೀಸಲು | ಸ್ವಸಹಾಯ ಗುಂಪುಗಳು ಸಂಗ್ರಹಿಸಿದ ಉಳಿತಾಯದ ಮೊತ್ತದಲ್ಲಿ ಹೆಚ್ಚಿನ ಪಾಲು ವ್ಯವಹಾರಕ್ಕೆ ಮೀಸಲು |
| ಗುಂಪಿನ ಸದಸ್ಯರ ಸ್ಥಿತಿ | ಯಾವುದೇ ಮಹಿಳೆ, (ಬಡತನ ರೇಖೆಗಿಂತ ಕಡಿಮೆ ಆದಾಯವಿರುವ ಗುಂಪಿನಲ್ಲಿ ಸದಸ್ಯತ್ವ ಪಡೆಯಬಹುದು) | ಯಾವುದೇ ಬಡ ಮಹಿಳೆ, ವ್ಯವಹಾರ ಮಾಡುತ್ತಿದ್ದು ಅಥವಾ ವ್ಯವಹಾರ ಮಾಡುವ ಆಲೋಚನೆ ಇದ್ದರೆ ಮಾತ್ರ ಗುಂಪಿನಲ್ಲಿ ಸದಸ್ಯರಾಗಬಹುದು. |
| ಆದಾಯ ಉತ್ಪನ್ನ ಚಟುವಟಿಕೆ | ಸಾಮಾನ್ಯವಾಗಿ ಗುಂಪು ಮಟ್ಟದಲ್ಲಿ ಅಥವಾ ವೈಯಕ್ತಿಕ ಮಹಿಳೆಯ ಮಟ್ಟದಲ್ಲಿ ತಯಾರಿಕೆಗೆ ಹೆಚ್ಚು ಒತ್ತು | ಗುಂಪು ಅಥವಾ ವೈಯಕ್ತಿಕ ಮಹಿಳೆ ಸಾಧ್ಯವಿದ್ದಲ್ಲಿ ತಯಾರಿಕೆ ಅಪೇಕ್ಷಣೀಯ. |
| ಸುತ್ತು ನಿಧಿ | (ಸ್ಥಿರ) ಗುಂಪು ರಚನೆಯಾಗಿ, ಆಂತರಿಕ ಸಾಲದ ನೀಡಿಕೆ, ವಸೂಲಿಯ ಪ್ರಕ್ರಿಯೆ ಮುಗಿದ ಬಳಿಕ, ಗ್ರೇಡಿಂಗ್ ಆದ ನಂತರ | ಗುಂಪಿನ ಸ್ಥಿರತೆಯ ಬಗೆಗೆ ಹೆಚ್ಚು ಒತ್ತು. (ವಲಸೆ ಪ್ರಕ್ರಿಯೆ ಇದಕ್ಕೆ ವಿರುದ್ದ ಕಾರ್ಯವೆಸಗುವ ಸಾಧ್ಯತೆ ಇದೆ) ಉಳಿದ ನಿಯಮಗಳೂ ಗ್ರಾಮೀಣ ಸಂಘಗಳಿಗೆ ಗುಂಪುಗಳಿಗೆ ಅನ್ವಯಿಸಿದಂತೆ. |
| ಸ್ವಯಂ ಉದ್ಯೋಗಕ್ಕೆ ಅವಕಾಶ | ಗ್ರಾಮೀಣ ಪ್ರದೇಶದಲ್ಲಿ ಕೃಷಿ ಚಟುವಟಿಕೆಗಳ ಸಮಯದಲ್ಲಿ ಇಂತಹ ಅವಕಾಶಗಳನ್ನು ಮಹಿಳೆಯರು ಬಳಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಬಹು ಸಂಖ್ಯೆಯಲ್ಲಿ ಮಹಿಳೆಯರು ನೇರವಾಗಿ ಬೇಸಾಯ್ಕಕೆ ಸಹಾಯ ನೀಡುವ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವರು. | ಅವಕಾಶಗಳು ವಿಫಲವಾಗಿವೆ. ಜೊತೆಗೆ ಪೈಪೋಟಿ ಹಾಗೂ ಜಾಗತೀಕರಣ ಇವರ ಪ್ರಯತ್ನಗಳಿಗೆ ಸವಾಲೊಡ್ಡಬಹುದು. |
| ನೆರವು ಸಂಸ್ಥೆಗಳು | ಬ್ಯಾಂಕು, ಪೋಸ್ಟ್ ಆಫೀಸ್ ಎಂಬ ಹಲವು ಸಂಸ್ಥೆಗಳ ಬಳಕೆ ಸಾಧ್ಯ. | ತಾಲೂಕು, ಜಿಲ್ಲಾ ಮಟ್ಟದಲ್ಲಿ ಹೆಚ್ಚಿನ ನೆರವು ಸಂಸ್ಥೆಗಳ ಉಪಸ್ಥಿತಿ (ಡಿಐಸಿ, ಇತ್ಯಾದಿ) |
| ಮೂಲಭೂತ ಸೌಕರ್ಯಗಳು | ಸಾಂಪ್ರದಾಯಿಕವಾಗಿ ತುಂಬ ಕೆಳಮಟ್ಟದಲ್ಲಿ | ತುಲನಾತ್ಮಕವಾಗಿ ಪ್ರಗತಿ ಹೊಂದಿದ ಸೌಕರ್ಯಗಳು |

ಮೂಲ : ನಗರ ಯೋಜನೆ ಗುಂಪು ನಿರ್ವಹಣೆ ಕೈಪಿಡಿ (ಸುವರ್ಣ ಕರ್ನಾಟಕ ೨೦೦೬)

ಈ ಮೇಲಿನ ಅಂಶಗಳಿಂದ ಗ್ರಾಮೀಣ ಮತ್ತು ನಗರದಲ್ಲಿಯ ಗುಂಪುಗಳ ಪ್ರಮುಖ ವ್ಯತ್ಯಾಸಗಳನ್ನು ಅರಿಯಲು ಸಾಧ್ಯವಾಗಿದೆ.

೩.೮. ಪ್ರಾಕ್‌ಕಲ್ಪನೆಗಳ ಪರಿಶೀಲನೆ:

೧. ಪುರುಷ ಮತ್ತು ಮಹಿಳೆಯರಲ್ಲಿ ಅಸಮಾನತೆಯಿದೆ:

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯಲ್ಲಿ ನಗರ ಪ್ರದೇಶದ ಬಡತನ ರೇಖೆಗಿಂತ ಕೆಳಗಿನ ಕುಟುಂಬದ ಮಹಿಳೆ/ಪುರುಷ ಈ ಯೋಜನೆಯ ಫಲಾನುಭವಿಯಾಗಿದ್ದಾರೆ. ಇದರಲ್ಲಿ ಪುರುಷನೂ ಸಹ ಸ್ವಯಂ ಉದ್ಯೋಗ ಕಾರ್ಯಕ್ರಮದ ಅಡಿಯಲ್ಲಿ ಆಯ್ಕೆಯಾಗಿ ಆಟೋರಿಕ್ಷಾವನ್ನು ಸಾಲ /ಸಹಾಯಧನದ ಮೂಲಕ ಪಡೆದುಕೊಂಡಿದ್ದಾನೆ. ಸ್ವಸಹಾಯ ಗುಂಪುಗಳಿಂದ ಮಹಿಳೆಯು ತರುವ ಸಾಲವನ್ನು ಪುರುಷನಿಗೆ ಕುಟುಂಬದ ಉನ್ನತಿಗೆ ನೀಡುತ್ತಿರುವುದರಿಂದ ಪುರುಷನು ಮಹಿಳೆಯನ್ನು ಗೌರವದಿಂದ ಕಾಣುತ್ತಿರುವುದು ಕಂಡು ಬರುತ್ತಿದ್ದು, ಪುರುಷ ಮತ್ತು ಮಹಿಳೆಯರಲ್ಲಿ ಸಮಾನತೆ ಮೂಡುತ್ತಿರುವುದನ್ನು ಕಂಡು ಕೊಳ್ಳಲಾಗಿದೆ. ಈ ಯೋಜನೆ ನಗರದ ಪುರುಷ ಮತ್ತು ಮಹಿಳೆಯ ಸಮಾನತೆಯ ಹಾದಿಯಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದೆ ಎಂಬುದು ಅಧ್ಯಾಯ ೦೩ ರ ಕೋಷ್ಟಕ ೩.೨೧ ೩.೨೨, ೩.೨೩, ೩.೨೪ ರಿಂದ ತಿಳಿದು ಬಂದಿದೆ.

೨. ಉದ್ಯೋಗದಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ:

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ಕುಟುಂಬದ ಮೇಲೆ, ನೆರೆಹೊರೆ, ಮಕ್ಕಳು ಮತ್ತು ಕುಟುಂಬದ ಹಿರಿಯರ ಮೇಲೆ ಹೆಚ್ಚು ಪರಿಣಾಮ ಬೀರಿದೆ. "ಉದ್ಯೋಗಂ ಪುರುಷ ಲಕ್ಷಣಂ" ಎಂಬ ಕಾಲವಿತ್ತು. ಪ್ರಸ್ತುತ ಆಧುನಿಕ ಸಮಾಜದಲ್ಲಿ ಮಹಿಳೆಯೂ ಸಹ ಉದ್ಯೋಗದಲ್ಲಿ ಸ್ವಾತಂತ್ರ್ಯ ಹೊಂದಿರುವುದನ್ನು ಮತ್ತು ಮಹಿಳೆಯು ಕೈಗೊಳ್ಳುವ ಉದ್ಯೋಗಕ್ಕೆ ತಂದೆ, ತಾಯಿ, ಗಂಡ, ಮಕ್ಕಳು ಸಹ ಬೆಂಬಲ ನೀಡುತ್ತಿರುವುದು ಕೋಷ್ಟಕ ೩.೨೩ ಮತ್ತು ೩.೨೬ ರಿಂದ ತಿಳಿದು ಬಂದಿದೆ. ಹಾಗಾಗಿ **ಪಿ.ಎ ಸಾರೋಕಿನ್‌ರವರು** ಅಭಿಪ್ರಾಯಪಟ್ಟಂತೆ ಈ ಸಾಮಾಜಿಕ ಬದಲಾವಣೆಯು ಲಂಬಾಂತರ ಸಂಚಲನೆಗೆ ಒಳಪಡುತ್ತಿರುವುದು ಅಧ್ಯಯನದಿಂದ ಕಂಡು ಬಂದಿದೆ.

೩. ಹೆಚ್ಚು ಜನರಿಗೆ ಯೋಜನೆ ಬಗ್ಗೆ ಅರಿವಿಲ್ಲದಿರುವುದು:

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ನಗರ ಪ್ರದೇಶದ ಬಡ ಜನರಿಗೆ ಎಂದೇ ಜಾರಿಯಾಗಿರುವುದರಿಂದ ನಗರ ಪ್ರದೇಶದಲ್ಲಿ ವಾಸಿಸುವ ಜನರು ಗ್ರಾಮೀಣ ಪ್ರದೇಶಕ್ಕೆ ಹೋಲಿಸಿ ನೋಡಿದಾಗ ಸಾಕ್ಷರತೆಯಲ್ಲಿ ಮುಂದಿರುವುದನ್ನು ನಾವು ವಿವಿಧ ವರ್ಷಗಳಿಂದ ನಡೆದ ಜನಗಣತಿಯಿಂದ ತಿಳಿಯಲಾಗಿದೆ. ಅದರಂತೆ ಎಸ್.ಜೆ.ಎಸ್.ಆರ್.ವೈ ಯೋಜನೆಯು ಮಹತ್ವದ ಎರಡು ಕಾರ್ಯಕ್ರಮಗಳಾದ ಸ್ವಯಂ ಉದ್ಯೋಗ ಕಾರ್ಯಕ್ರಮ ಹಾಗೂ ಗುಂಪು ಉದ್ಯೋಗ ಕಾರ್ಯಕ್ರಮಗಳನ್ನು ಹೊಂದಿರುವುದರಿಂದ ಗುಂಪಿನಲ್ಲಿರುವ ಸದಸ್ಯರು

ಕಾಲಕಾಲಕ್ಕೆ ಸಾಲ, ಸೌಲಭ್ಯ, ಸಹಾಯಧನ ಹಾಗೂ ಸಬ್ಸಿಡಿ ಇತ್ಯಾದಿಗಳ ಬಗ್ಗೆ ಚರ್ಚೆ ನಡೆಸುತ್ತಿರುವುದರಿಂದ ಮತ್ತು ಗುಂಪಿನಲ್ಲಿ ಎಲ್ಲ ಹಣಕಾಸಿಗೆ ಸಂಬಂಧಿಸಿದ ಜವಾಬ್ದಾರಿ ಪ್ರತಿಯೊಬ್ಬರಿಗೂ ಇರುವುದರಿಂದ ಯೋಜನೆಯ ಬಗ್ಗೆ ಮತ್ತು ಹಣಕಾಸಿನ ಬಗ್ಗೆ ಅರಿವಾಗುತ್ತಿರುವದು ಕಂಡು ಬಂದಿದೆ. ಸ್ವಯಂ ಉದ್ಯೋಗ ಕಾರ್ಯಕ್ರಮವು ವೈಯಕ್ತಿಕ ಸಾಲ ಒದಗಿಸುವ ಕಾರ್ಯಕ್ರಮವಾಗಿರುವುದರಿಂದ ಈ ಬಗ್ಗೆ ಹೆಚ್ಚಿನ ತಿಳುವಳಿಕೆಯನ್ನು ಹೊಂದಿದವರಾಗಿರುತ್ತಾರೆ ಇದನ್ನು ಅಧ್ಯಾಯ ೩ ರಲ್ಲಿ ಕಂಡು ಕೊಳ್ಳಲಾಗಿದೆ.

**೪. ಸರ್ಕಾರದ ಯೋಜನೆಗಳು ಸರಿಯಾಗಿ ತಲುಪದೇ ಇರುವುದು :**

ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆ ಇದಾಗಿದ್ದು, ಕೇಂದ್ರ ಸರ್ಕಾರದ ಶೇಕಡ ೭೫ ಮತ್ತು ರಾಜ್ಯ ಸರ್ಕಾರದ ಶೇ ೨೫ ರಷ್ಟು ಹಣ ಕ್ರೂಢೀಕರಣದ ಮೂಲಕ ಈ ಯೋಜನೆ ಜಾರಿಯಾಗುತ್ತದೆ. ಕೇಂದ್ರ ಸರ್ಕಾರದ ವಸತಿ ಮತ್ತು ಬಡತನ ನಿರ್ಮೂಲನಾ ಸಚಿವಾಲಯವು ಇದರ ಉಸ್ತುವಾರಿಯನ್ನು ನೋಡಿ ಕೊಳ್ಳುತ್ತಿದೆ. ರಾಜ್ಯ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ, ತಾಲ್ಲೋಕು ಮಟ್ಟದಲ್ಲಿ ವಿವಿಧ ಸಮಿತಿಗಳು/ವಿಭಾಗಗಳು ಮೇಲ್ವಿಚಾರಣೆ ಮಾಡುತ್ತಿರುವುದರಿಂದ ಈ ಯೋಜನೆಗಳು ನಗರ ಪ್ರದೇಶದ ಜನರಿಗೆ ಮಾತ್ರವೇ ಇರುವುದರಿಂದ ಸರ್ಕಾರವು ನಿಗದಿತ ಗುರಿಯನ್ನು ಸ್ಥಳೀಯ ಸಂಸ್ಥೆಗಳಿಗೆ ನೀಡಿರುವುದರಿಂದ ವಿವಿಧ ವಿಭಾಗ ಮಟ್ಟದಲ್ಲಿ ಮೇಲುಸ್ತುವಾರಿ ಸಮಿತಿಗಳನ್ನು ನೇಮಿಸಿದ್ದು, ಕಾಲಕಾಲಕ್ಕೆ ಪ್ರಗತಿ ಪರಿಶೀಲನೆ ಮಾಡುತ್ತಿರುವುದರಿಂದ ಈ ಯೋಜನೆಯು ಬಡ ಜನರಿಗೆ ತಲುಪುತ್ತಿದೆ ಎಂಬುದು ಸಣ್ಣ ಉದ್ದಿಮೆ ಸ್ಥಾಪನೆ ಹಾಗೂ ಗುಂಪು ಉದ್ಯೋಗ ಕಾರ್ಯಕ್ರಮಗಳಲ್ಲಿ ಕಂಡು ಕೊಳ್ಳಲಾಗಿದೆ.

**೫. ತರಬೇತಿಗಳ ಬಗ್ಗೆ ಮಾಹಿತಿ ಇಲ್ಲದಿರುವುದು:**

ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯ ಕಾರ್ಯಕ್ರಮಗಳಲ್ಲಿ ತರಬೇತಿ ಕಾರ್ಯಕ್ರಮ (STEP-UP) ಒಂದು ಮಹತ್ವದ ಕಾರ್ಯಕ್ರಮವಾಗಿ ಜಾರಿಗೆ ತರಲಾಗಿದೆ. ಈ ಕಾರ್ಯಕ್ರಮವು ಯೋಜನೆಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಮತ್ತು ಮಕ್ಕಳಿಗೆ ತರಬೇತಿಯನ್ನು ನೀಡುವುದರ ಮುಖಾಂತರ ಅವರಿಗೆ ಸೇವಾವಲಯದಲ್ಲಿ, ಕೈಗಾರಿಕೆಗಳಲ್ಲಿ, ಸಂಸ್ಥೆಗಳಲ್ಲಿ ಉದ್ಯೋಗವಕಾಶಗಳನ್ನು ಒದಗಿಸುವುದು ಮತ್ತು ಸ್ವಯಂ ಉದ್ಯೋಗ ಕೈಗೊಳ್ಳುವ ವ್ಯಕ್ತಿಗಳಿಗೆ ಸಾಲ ಸೌಲಭ್ಯವನ್ನು ಒದಗಿಸುವುದಾಗಿದೆ. ಸರ್ಕಾರವು ಕೌಶಲ್ಯ ತರಬೇತಿಗೆ ಗುರಿಯನ್ನು ನಿಗದಿಪಡಿಸಿದೆ. ಆದಾಗ್ಯೂ ಜನರಿಗೆ ತರಬೇತಿ ಕಾರ್ಯಕ್ರಮದ ಜಾರಿಯ ಬಗ್ಗೆ ಪರಿಣಾಮಕಾರಿಯಾದ ಮಾಹಿತಿ ಸಂಪರ್ಕದ ಕೊರತೆಯಿರುವುದು ಕಂಡು ಬಂದಿದೆ. ಇದರಿಂದ ಯೋಗ್ಯವಾದ ಅಭ್ಯರ್ಥಿಯನ್ನು ತರಬೇತಿಗೆ ಆಯ್ಕೆ ಮಾಡಲು ಅಸಮರ್ಥವಾಗಬಹುದು ಎನ್ನುವುದು ಕೋಷ್ಟಕ ೪.೯ ರಲ್ಲಿರುವ ಅಂಕಿ

ಅಂಶಗಳಿಂದ ಕಂಡು ಬರುತ್ತದೆ. ಹಾಗಾಗಿ ಈ ಕಾರ್ಯಕ್ರಮವು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ **ಪಿ.ಎ.ಸಾರೋಕಿನ್‌ರವರ ಸಿದ್ಧಾಂತ** ಲಂಬಾಂತರ ಸಂಚಲನೆಯ ಆಧಾರದಲ್ಲಿ ವಿಶ್ಲೇಷಿಸಿ ನೋಡಿದಾಗ ಇದನ್ನು ಸಾಮಾಜಿಕ ಅವರೋಹಣ ಎನ್ನಬಹುದು ಈ ತರಬೇತಿ ಯೋಜನೆಯು ಇನ್ನೂ ಹೆಚ್ಚಿನ ಫಲಿತಾಂಶವನ್ನು ನೀಡಬೇಕಾಗಿರುವ ಅವಶ್ಯಕತೆಯಿದೆ.

**೬. ನಗರದಲ್ಲಿ ಪರಸ್ಪರ ನೆರೆಹೊರೆಯವರಲ್ಲಿ ನಂಬಿಕೆ ಇಲ್ಲದಿರುವುದು:**

ಈ ಅಧ್ಯಯನದಲ್ಲಿ ಕಂಡುಕೊಂಡ ಮತ್ತೊಂದು ಅಂಶವೆಂದರೆ ಯೋಜನೆಯಲ್ಲಿ ಪ್ರಮುಖ ಕಾರ್ಯಕ್ರಮವಾದ ಗುಂಪು ಉದ್ಯೋಗ (ಡ್ವಾಕ್ವಾ) (DWACUA) ನಗರ ಪ್ರದೇಶದ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮವು ಗುಂಪು ಉದ್ಯೋಗ ಕೈಗೊಳ್ಳಲು ೧೦ ಜನರನ್ನೊಳಗೊಂಡ ಸಮಾನ ಮನಸ್ಕರನ್ನು ಹೊಂದಿರುವುದರಿಂದ ಆ ಮೂಲಕ ಗುಂಪಿಗೆ ಸಾಲ ಸಹಾಯಧನ ನೀಡಿ ಗುಂಪು ಉದ್ಯೋಗಕ್ಕೆ ಪ್ರೋತ್ಸಾಹ ನೀಡುತ್ತಿರುವುದರಿಂದ ಮತ್ತು ಸ್ವ ಸಹಾಯ ಗುಂಪುಗಳ ರಚನೆಯಲ್ಲಿ ಸುಮಾರು ೧೦ ರಿಂದ ೨೦ ಜನ ನೆರೆಹೊರೆ ಸದಸ್ಯರನ್ನು ಹೊಂದಿ ಉಳಿತಾಯ ಮಾಡುವುದು, ಗುಂಪಿನಲ್ಲಿಯ ಉಳಿತಾಯದ ಹಣವನ್ನು ಸಂಘದ ಸದಸ್ಯರಿಗೆ ರೊಟೇಷನ್ ಪದ್ಧತಿ ಮೂಲಕ ಸಾಲ ನೀಡುವುದು ಇತ್ಯಾದಿ ಸೌಲಭ್ಯಗಳು ಇರುತ್ತವೆ. ಒಂದು ವರ್ಷದ ತುಂಬಿದ ಗುಂಪಿಗೆ ಮೌಲ್ಯಮಾಪನ ಮಾಡಿ ಸರ್ಕಾರವು ಸುತ್ತು ನಿಧಿಯನ್ನು ಘೋಷಿಸುತ್ತದೆ. ಇದರಿಂದಾಗಿ ನಗರ ಪ್ರದೇಶದಲ್ಲೂ ಸಹ ಗ್ರಾಮೀಣ ಪ್ರದೇಶದಂತೆಯೇ ನೆರೆಹೊರೆ ಭಾವನೆ ಬೆಳೆಯಲು ಪರಸ್ಪರ ನಂಬಿಕೆ ಬೆಳೆಯಲು, ಒಗ್ಗಟ್ಟು ಮೂಡಲು ಮತ್ತು ನಾವು ಎಂಬ ಭಾವನೆ ಸಮುದಾಯದಲ್ಲಿ ಮೂಡಲು ಕಾರಣವಾಗುತ್ತಿದೆ ಎಂಬುದನ್ನು ಅಧ್ಯಾಯ ೩ ರ ಈ ಎರಡು ಕಾರ್ಯಕ್ರಮಗಳಲ್ಲಿ ಕಂಡು ಕೊಳ್ಳಲಾಗಿದೆ.

**೭. ಬ್ಯಾಂಕುಗಳಲ್ಲಿ ದೊರೆಯುವ ಸೌಲಭ್ಯಗಳು ಜನರಿಗೆ ತಲುಪುವುದಿಲ್ಲ:**

ಸಾಲ ಸೌಲಭ್ಯಗಳು ಶ್ರೀಮಂತರಿಗೆ, ಬಂಡವಾಳ ಶಾಹಿಗಳಿಗೆ ಮಾತ್ರ ಎಂಬ ಕಾಲವು ಇತ್ತು, ಆದರೆ ಈ ಅಧ್ಯಾಯದಲ್ಲಿ ಸಾಮಾನ್ಯ ಬಡವನಿಗೂ ಸರ್ಕಾರವು ಹಲವು ಯೋಜನೆಗಳ ಮೂಲಕ ಸಾಲ-ಸೌಲಭ್ಯ ಮತ್ತು ಸಹಾಯಧನವನ್ನು ಬ್ಯಾಂಕ್ ಮೂಲಕ ನೀಡುತ್ತಿರುವುದನ್ನು ಈ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

**೮. ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆಯಲ್ಲಿ ಬರುವ ಫಲಾನುಭವಿಗಳು ಯೋಜನೆಯ ಪರಿಕಲ್ಪನೆ ಸಂಕೀರ್ಣತೆಯನ್ನು ಅರ್ಥಮಾಡಿಕೊಂಡಂತಿಲ್ಲ:**

ಈ ಅಧ್ಯಯನದಲ್ಲಿ ಕಂಡು ಬಂದ ಪ್ರಮುಖ ಅಂಶವೇನೆಂದರೆ ಯೋಜನೆಯಲ್ಲಿನ ಎಲ್ಲ ಕಾರ್ಯಕ್ರಮಗಳ ಪರಿಕಲ್ಪನೆ ಮತ್ತು ಸಂಕೀರ್ಣತೆಯನ್ನು ಪ್ರತಿಯೊಬ್ಬ ಫಲಾನುಭವಿಯೂ ಸಹ ಸಂಪೂರ್ಣವಾಗಿ ಅರ್ಥಮಾಡಿಕೊಂಡಂತಿಲ್ಲ

ಎನ್ನುವುದು ನನ್ನ ಊಹೆಯಾಗಿತ್ತು. ಅದು ನಿಜವಾಗಿದ್ದು ಫಲಾನುಭವಿಗಳು ಅವರು ಅಳವಡಿಸಿ ಕೊಂಡಿರುವ ಕಾರ್ಯಕ್ರಮದ ಉದ್ಯೋಗದ ಮಾಹಿತಿಯನ್ನು ಮಾತ್ರ ಹೊಂದಿದ್ದು, ಆಯಾ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಯೋಜನೆಯ ಪರಿಕಲ್ಪನೆಯನ್ನು ಹೊಂದಿದ್ದು, ಆ ನಿಟ್ಟಿನಲ್ಲಿ ತನ್ನ ಕಾರ್ಯನಿರ್ವಹಿಸುತ್ತಿರುವದನ್ನು ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

* * *

**ಅಡಿಟಿಪ್ಪಣಿಗಳು**

೧. ಕರ್ನಾಟಕ ಸರ್ಕಾರ ನಗರಾಭಿವೃದ್ಧಿ ಇಲಾಖೆ ಅಡಿಯಲ್ಲಿರುವ ಕೆಯುಐಡಿಎಫ್‌ಸಿ, ಹುಬ್ಬಳ್ಳಿ. ವರ್ಷ–೨೦೧೦

೨. ವಿಜಯ ಕರ್ನಾಟಕ ಪತ್ರಿಕೆ ದಿನಾಂಕ: ೧೫.೮.೨೦೦೯.

೩. The Times of India English News Paper Dated: 17.8.2009

೩. ಪ್ರಜಾವಾಣಿ ಕನ್ನಡ ದಿನ ಪತ್ರಿಕೆ ದಿನಾಂಕ: ೨೫.೯.೨೦೧೩ (ವಾಣಿಜ್ಯ ಪುರವಣಿ)

೪. ನಗರ ಯೋಜನೆ ಗುಂಪು ನಿರ್ವಹಣೆ ಕೈಪಿಡಿ (ಸುವರ್ಣ ಕರ್ನಾಟಕ೨೦೦೬)

೫. ನಗರ ಮಹಿಳಾ ಸ್ವಸಹಾಯ ಗುಂಪು ಯೋಜನೆ ಗುಂಪು ನಿರ್ವಹಣೆ ಕೈಪಿಡಿ (ಸುವರ್ಣ ಕರ್ನಾಟಕ ೨೦೦೬).

* * *

# ಅಧ್ಯಾಯ-೦೪

# ಸರ್ಕಾರದ ಯೋಜನೆಯ ಪರಿಣಾಮಗಳು

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ಭಾರತ ಸರ್ಕಾರದ ಮಹತ್ವಕಾಂಕ್ಷೆಯ ಯೋಜನೆಯಾಗಿದ್ದು, ಇದು ಕೇಂದ್ರ ವಸತಿ ಮತ್ತು ಬಡತನ ನಿರ್ಮೂಲನೆಯ ಸಚಿವಾಲಯದ ಅಡಿಯಲ್ಲಿ ಬರುತ್ತದೆ. ಇದರ ಮುಖ್ಯ ಉದ್ದೇಶ ನಗರ ಪ್ರದೇಶದ ಬಡತನ ರೇಖೆಗಿನ ಕೆಳ ಕುಟುಂಬಗಳಿಗೆ ಉದ್ಯೋಗ ದೊರಕಿಸಿ ಕೊಟ್ಟು ಅವರು ಸಾಮಾಜಿಕ, ಆರ್ಥಿಕ, ರಾಜಕೀಯ, ಹಾಗೂ ವಿವಿಧ ಕ್ಷೇತ್ರಗಳಲ್ಲಿ ತನ್ನದೇ ಸ್ಥಾನಮಾನಗಳನ್ನು ಹೊಂದಲು ಸಹಾಯಕಾರಿಯಾಗಿದೆ. ಈ ಯೋಜನೆಯನ್ನು ಕೇಂದ್ರ ಮಟ್ಟದಲ್ಲಿ ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನಾ ವಿಭಾಗ, ರಾಜ್ಯ ಮಟ್ಟದಲ್ಲಿ ಪೌರಾಡಳಿತ ನಿರ್ದೇಶನಾಲಯ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ನಗರಾಭಿವೃದ್ಧಿ ಕೋಶಗಳು ಮತ್ತು ಜಿಲ್ಲಾಡಳಿತ ಈ ಯೋಜನೆಯನ್ನು ಮೇಲ್ವಿಚಾರಣೆ ಮಾಡುವ ಮತ್ತು ಯೋಜನೆಗೆ ಸಂಬಂಧಿಸಿದಂತೆ ಸಲಹೆ ಸೂಚನೆಗಳನ್ನು ನೀಡುವ ಕೆಲಸವನ್ನು ಮಾಡುತ್ತಿರುವುದರಿಂದ ಯೋಜನೆಯು ನಗರ ಪ್ರದೇಶದಲ್ಲಿ ತನ್ನದೇ ಆದ ರೀತಿಯಲ್ಲಿ ಬಡಜನರ ಆರ್ಥಿಕ ಅಭಿವೃದ್ಧಿಗೆ ಸಹಕರಿಸುತ್ತಿದೆ ಎನ್ನಬಹುದು.

ಈ ಯೋಜನೆಯಿಂದ ನಗರದ ಸಮಾಜದಲ್ಲಿ ಮತ್ತು ಅವರ ಜೀವನ ಮಟ್ಟದಲ್ಲಿ ಆಗಿರುವ ಬದಲಾವಣೆಗಳನ್ನು ನಾವು ಕೆಳಗಿನಂತೆ ನೋಡಬಹುದು.

**೪.೧ ಸಾಮಾಜಿಕ ಬದಲಾವಣೆ :**

ಸಮಾಜ ನಿಂತ ನೀರಲ್ಲ ಇದು ಹರಿಯುತ್ತಿರುವ ನದಿಯಂತೆ ಸದಾ ಹೊಸತನ್ನು ನೀಡುತ್ತಾ ಬದಲಾವಣೆಯತ್ತ ಜನರನ್ನು ಕೊಂಡೊಯ್ಯುತ್ತಿದೆ. ಹಿಂದೆ ಸಾಂಪ್ರದಾಯಿಕ ಸಮಾಜದಲ್ಲಿ ಅವಿಭಕ್ತ ಕುಟುಂಬದಲ್ಲಿ ಪುರುಷನೇ ಪ್ರಧಾನ ಪಾತ್ರವಹಿಸುತ್ತಿದ್ದನು. ಆದರೆ ಇಂದು ಆಧುನೀಕರಣಗೊಂಡಂತೆ, ಮಹಿಳೆಯು ಉದ್ಯಮ ಕ್ಷೇತ್ರದಲ್ಲಿ ತನ್ನ ಛಾಪನ್ನು ಮೂಡಿಸಿದ್ದಾಳೆ. ಮಹಿಳಾ ಶಿಕ್ಷಣ ಹೆಚ್ಚಾದಂತೆ ಸಮಾಜದಲ್ಲಿ ಮಹಿಳಾ ಸ್ಥಾನಮಾನಗಳಲ್ಲಿ ಬದಲಾವಣೆಗೊಳ್ಳುತ್ತಿರುವುದನ್ನು ನೋಡಬಹುದಾಗಿದೆ. ಪ್ರಮುಖ **ಅರ್ಥಶಾಸ್ತ್ರಜ್ಞರಾದ ಅಮಾರ್ತ್ಯಸೇನ್** ಕೂಡಾ ಬಡತನ ನಿರ್ಮೂಲನೆಗೆ 'ಶಿಕ್ಷಣ' ಪ್ರಮುಖ ಹಂತ ಎಂಬುದನ್ನು ಪ್ರತಿಪಾದಿಸಿದ್ದಾರೆ. ಕೆಳಗಿನ ಕೋಷ್ಟಕ ೪.೧ ರಿಂದ ಸಮಾಜದಲ್ಲಾಗಿರುವ ಬದಲಾವಣೆಯನ್ನು ತಿಳಿಯಬಹುದು.

## ಕೋಷ್ಟಕ ೪.೧

## ಸಾಮಾಜಿಕ ಬದಲಾವಣೆ

| ಸಾರ್ವಜನಿಕ ಸ್ಥಳಗಳಿಗೆ ಭೇಟಿ | ಎಸ್.ಜೆ.ಎಸ್.ಆರ್.ವೈ ಗುಂಪಿಗೆ | | ಅಲ್ಲಿಯಾವುದಾದರೂ ತೊಂದರೆ ಅನುಭವಿಸಿದ್ದೀರಾ? | |
|---|---|---|---|---|
| | ಸೇರುವ ಮುಂಚೆ | ಸೇರಿದ ನಂತರ | ಹೌದು | ಇಲ್ಲ |
| ಮಾರುಕಟ್ಟೆಗೆ ಮಾರಲು/ ಕೊಳ್ಳಲು | ೪೪ | ೨೫೬ | ೩೪ | ೨೬೬ |
| ಸರಕಾರಿ ಕಛೇರಿಗಳಿಗೆ/ ಸಂಸ್ಥೆಗಳಿಗೆ, | ೩೧ | ೨೬೯ | ೧೩ | ೨೮೭ |
| ಬ್ಯಾಂಕಿಗೆ | ೧೭ | ೨೮೩ | ೪೯ | ೨೫೧ |
| ಆಸ್ಪತ್ರೆಗೆ/ ತಮಗೆ ಮತ್ತು ಮಕ್ಕಳ ಸಲುವಾಗಿ | ೧೯ | ೨೮೧ | ೩೧ | ೨೬೯ |
| ಇತರೆ ಹೆಸರಿಸಿ | ೩೫ | ೨೬೫ | ೦೦ | ೦೦ |

ಮೇಲಿನ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ ಎಸ್.ಜೆ.ಎಸ್.ಆರ್.ವೈ ಯೋಜನಾ ಗುಂಪಿನ ಫಲಾನುಭವಿಯಾದ ನಂತರ ೨೫೬ ಫಲಾನುಭವಿಗಳು ಮಾರುಕಟ್ಟೆಗೆ ಹೋಗುತ್ತಿದ್ದಾರೆ. ಅದಕ್ಕೂ ಮುಂಚೆ ೪೪ ಜನ ಮಾರುಕಟ್ಟೆ ಸ್ಥಳಗಳಿಗೆ ಹೋಗುತ್ತಿದ್ದರು, ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಯೋಜನೆಗೆ ಸೇರಿದ ನಂತರದಲ್ಲಿ ಜನರು ಹೆಚ್ಚಾಗಿ ಮಾರುಕಟ್ಟೆಗೆ ತೆರಳಿ ತರಕಾರಿ ಮತ್ತು ಮನೆಗೆ ಬೇಕಾದ ಅಗತ್ಯ ವಸ್ತುಗಳನ್ನು ತರುತ್ತಿರುವುದು ತಿಳಿದು ಬರುತ್ತದೆ. ಸಾಮಾನ್ಯವಾಗಿ ಸರಕಾರಿ ಕಛೇರಿ/ಸಂಸ್ಥೆಗಳಿಗೆ ಪುರುಷರು ಹೆಚ್ಚಾಗಿ ಹೋಗುತ್ತಿದ್ದುದು ಕಂಡು ಬರುವ ವಿಷಯವಾಗಿದೆ. ಈ ಹಿಂದೆ ೩೧ ಫಲಾನುಭವಿಗಳು ಸರಕಾರಿ ಸಂಸ್ಥೆಗಳಿಗೆ ಹೋಗುತ್ತಿದ್ದರೂ ಸಹ ತದನಂತರದಲ್ಲಿ ಅವರ ಸಂಖ್ಯೆ ೨೬೯ ಕ್ಕೆ ಹೆಚ್ಚಾಗಿದ್ದು, ಜನರು ಸ್ವತಂತ್ರವಾಗಿ ಹಾಗೂ ಧೈರ್ಯವಾಗಿ ಯಾವುದೇ ಕಛೇರಿ/ಸಂಸ್ಥೆಗಳಿಗೆ ಭೇಟಿ ನೀಡಿ ಬರುತ್ತಿರುವುದು ಅವರು ಹೆಚ್ಚು ಆತ್ಮವಿಶ್ವಾಸವನ್ನು ಬೆಳೆಸಿಕೊಂಡಿರುವುದು ಕಂಡು ಬಂದಿದೆ. ಸಾರ್ವಜನಿಕ ಬ್ಯಾಂಕುಗಳಿಗೆ ಈ ಹಿಂದೆ ೧೭ ಫಲಾನುಭವಿಗಳು ಸ್ನೇಹಿತರೊಂದಿಗೆ ಭೇಟಿ ನೀಡಿರುವುದು ತಿಳಿದು ಬಂದಿದೆ. ಸಂಘಕ್ಕೆ ಸೇರ್ಪಡೆಯಾದ ನಂತರ ೨೮೩ ಜನರು ಬ್ಯಾಂಕಿನ ಮೆಟ್ಟಿಲು ತುಳಿದಿರುವುದು

ಕಂಡು ಬಂದಿದೆ. ಪ್ರಾರಂಭದಲ್ಲಿ ಇಬ್ಬರು ಸದಸ್ಯರು ಬ್ಯಾಂಕಿಗೆ ಹಣ ಕಟ್ಟಲು ಹೋಗುತ್ತಿದ್ದು ನಂತರದಲ್ಲಿ ಒಬ್ಬರೇ ಭೇಟಿ ನೀಡುತ್ತಿರುವುದು ಅವರಲ್ಲಿ ಇನ್ನೂ ಹೆಚ್ಚು ಆತ್ಮ ವಿಶ್ವಾಸವನ್ನು ಭರಿಸಿದೆ. ಈ ಯೋಜನೆಗೆ ಸೇರುವ ಮೊದಲು ೧೯ ಮಹಿಳೆಯರು ತಮಗೆ ಮತ್ತು ಮಕ್ಕಳಿಗೆ ತೊಂದರೆಯಾದರೆ ಆಸ್ಪತ್ರೆಗೆ ಹೋಗುತ್ತಿದ್ದರು. ಈ ಹಿಂದೆ ಆಸ್ಪತ್ರೆಗಳಿಗೆ ಮಕ್ಕಳನ್ನು ತೋರಿಸಲು ಹೋಗಲು ಹಿಂಜರಿಯುತ್ತಿದ್ದ ಮಹಿಳೆ ನಂತರದಲ್ಲಿ ೨೮೧ ಮಹಿಳೆಯರು ಈ ಕಡೆ ಗಮನ ಹರಿಸಿದ್ದು ಗಂಡನ ಅವಲಂಬನೆಯನ್ನೇ ಅವಲಂಬಿಸಬಾರದು ಅವರಿಗೂ ಸಹ ಅವರದೇ ಆದ ಕೆಲಸವಿರುವುದನ್ನು ಮಹಿಳೆ ಅರಿತು ಬದಲಾವಣೆಗೊಂಡಿರುವುದು ಕಂಡು ಬರುತ್ತದೆ. ಯಾವುದಾದರೂ ತೊಂದರೆ ಅನುಭವಿಸಿದ್ದೀರಾ ಎಂಬುವುದಕ್ಕೆ ಅವರ ಉತ್ತರ ಅಲ್ಲಿಯ ಅಧಿಕಾರಿ ಸಿಬ್ಬಂದಿಗಳು ಸರಿಯಾಗಿ ಕಾರ್ಯನಿರ್ವಹಿಸದೆ ಕಾಯಿಸುತ್ತಿದ್ದರು ಎಂದು ತಿಳಿದು ಬಂದಿದೆ. ಇದನ್ನು ಪ್ರಶ್ನಿಸಲು ಸಹ ಹಿಂಜರಿಯುವುದಿಲ್ಲ ಎಂದಿದ್ದಾರೆ, ಇದರಿಂದ ಮಹಿಳೆಗೆ ನಾನು ಸಮಾನಳು ಎಂಬ ಭಾವನೆ ಮೂಡಿರುವುದು ಕಂಡು ಬರುತ್ತದೆ. ಇತರೆ ವಿವಿಧ ಸಂಸ್ಥೆಗಳಿಗೆ ಗುಂಪಿಗೆ ಸೇರುವ ಮೊದಲು ೩೫ ಮಹಿಳೆಯರು ಭೇಟಿ ನೀಡುತ್ತಿದ್ದರು, ಈ ಯೋಜನೆಗೆ ಸೇರಿದ ನಂತರ ೨೬೫ ಮಹಿಳೆಯರು ಭೇಟಿ ನೀಡುತ್ತಿರುವುದು ಕಂಡು ಬಂದಿದೆ. ಹಾಗೆಯೇ ಮೇಲಿನ ಸ್ಥಳಗಳಿಗೆ ಫಲಾನುಭವಿಗಳು ಹೋದ ಸ್ಥಳದಲ್ಲಿ ಯಾವುದೇ ತೊಂದರೆ ಅನುಭವಿಸಿದ್ದೀರಾ ಎಂಬುವುದಕ್ಕೆ ಹಿಂದಿಗಿಂತ ನಂತರದಲ್ಲಿ ಯಾವುದೇ ತೊಂದರೆ ಅನುಭವಿಸದೇ ಇರುವುದು ಹೆಚ್ಚಾಗಿ ಅಂಕಿ ಅಂಶಗಳಿಂದ ಕಂಡು ಬಂದಿದೆ. ಇದರಿಂದಾಗಿ ಮಹಿಳೆ ಏಕಾಂಗಿಯಾಗಿ ಯಾವುದೇ ಹಿಂಜರಿಕೆ ಇಲ್ಲದೇ ಸಾರ್ವಜನಿಕ/ಸಂಸ್ಥೆ/ಸ್ಥಳಗಳಿಗೆ ಭೇಟಿ ನೀಡುತ್ತಿರುವುದು ಆರೋಗ್ಯಕರ ಬೆಳವಣಿಗೆಯಾಗಿದೆ.

**೪.೨ ಜೀವನ ಮಟ್ಟದಲ್ಲಿ ಬದಲಾವಣೆ :**

ಯೋಜನೆಯ ಫಲಾನುಭವಿಯಾಗುವುದಕ್ಕಿಂತ ಮೊದಲಿನ ಪುರುಷ ಮತ್ತು ಮಹಿಳೆಯ ಕುಟುಂಬ ಜೀವನ ಮಟ್ಟ ಮತ್ತು ಯೋಜನೆಯ ನಂತರದ ಜೀವನ ಮಟ್ಟವನ್ನು ತಿಳಿದುಕೊಳ್ಳುವುದು ಅವಶ್ಯಕವೆನಿಸಲಾಗಿದ್ದರಿಂದ ಮನೆಯಲ್ಲಿ ಹೊಂದಿರಬಹುದಾದ ವಿವಿಧ ವಸ್ತುಗಳ ಮಾಹಿತಿಯನ್ನು ಕಲೆಹಾಕಲಾಯಿತು. ಇವುಗಳು ಸಹ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟು ಕೊಂಡು ನಾವು ವಿವಿಧ ಆಯಾಮಗಳಲ್ಲಿ ಅವಲೋಕಿಸಿದಾಗ ಜನರ ಕುಟುಂಬದಲ್ಲಿನ ಸ್ಥಿತಿಗತಿ ಹಾಗೂ ಅವರ ಜೀವನ ಮಟ್ಟವನ್ನು ಸಹ ಅಳೆಯಬಹುದಾಗಿದೆ, ಅಂಕಿ ಅಂಶಗಳನ್ನು ಕೋಷ್ಟಕ ೪.೨ ರಲ್ಲಿ ಸಂಗ್ರಹಿಸಲಾಗಿದೆ.

## ಕೋಷ್ಟಕ–೪.೨

### ಮನೆಯ ವಸ್ತುಗಳ ಪಟ್ಟಿ

| ವಸ್ತುಗಳು | ಎಸ್‌ಜೆಎಸ್‌ಆರ್‌ವೈಯೋಜನೆಗೆ ಸೇರುವ/ಸೇರಿದ | | ವಸ್ತುಗಳನ್ನುಹೊಂದದೇ ಇರುವವರು |
|---|---|---|---|
| | ಮುಂಚೆ | ನಂತರ | |
| ಟಿವಿ | ೪೧ | ೨೩೯ | ೨೦ |
| ರೇಡಿಯೋ | ೨೯ | ೪೭ | ೨೨೪ |
| ಟೇಪ್‌ರೆಕಾರ್ಡರ್ | ೧೭ | ೧೩೨ | ೧೫೧ |
| ಡಿವಿಡಿ ಪ್ಲೇಯರ್ | ೦೯ | ೩೬ | ೨೫೫ |
| ಫೋನ್ | – | ೧೫ | ೨೮೫ |
| ಮೊಬೈಲ್ | ೩೪ | ೨೫೭ | ೦೯ |
| ಗಡಿಯಾರ | ೬೭ | ೧೯೪ | ೩೯ |
| ಸೈಕಲ್ | ೭೨ | ೧೫೮ | ೭೦ |
| ಮೊಪೆಡ್/ಸ್ಕೂಟರ್ | ೧೩ | ೧೨೨ | ೧೩೫ |
| ಫ್ಯಾನ್ | ೪೪ | ೧೫೨ | ೧೦೪ |
| ಹೊಲಿಗೆ ಯಂತ್ರ | ೦೪ | ೧೬೪ | ೧೬೮ |
| ವಿದ್ಯುತ್ ಶಕ್ತಿ ಓಲೆ | – | ೦೨ | ೨೯೮ |
| ಗ್ಯಾಸ್‌ಒಲೆ | – | ೧೯೭ | ೧೦೩ |
| ಕಾರು | – | – | – |
| ಆಟೋರಿಕ್ಷಾ | ೦ | ೪೮ | ೨೫೨ |
| ಕಂಪ್ಯೂಟರ್ | ೦ | ೦೪ | ೨೯೬ |
| ವಾಷಿಂಗ್ ಮೆಷಿನ್ | ೦ | ೦ | ೩೦೦ |
| ತಳ್ಳುವಗಾಡಿ | ೧೨ | ೧೫ | ೨೭೩ |
| ಎತ್ತಿನಗಾಡಿ | ೦೨ | ೦೩ | ೨೯೫ |
| ಕೂಲರ್ | ೦ | ೦ | ೩೦೦ |
| ಫ್ರಿಜ್ | ೦ | ೪ | ೨೯೬ |
| ಪೀಠೋಪಕರಣಗಳು | ೦ | ೦೮ | ೨೯೨ |

ಈ ಮೇಲಿನ ಪಟ್ಟಿಯನ್ನು ನೋಡಿದಾಗ ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರಿದ ನಂತರದಲ್ಲಿ ಗರಿಷ್ಟ ಪ್ರಮಾಣದ ಜನರು ನಗರ ಪ್ರದೇಶದಲ್ಲಿ ಮೇಲಿನ ಪಟ್ಟಿಯಲ್ಲಿ ವಿವರಿಸಿರುವ ವಸ್ತುಗಳನ್ನು ಹೊಂದಿರುವುದು [illegible]

**ಕೋಷ್ಟಕ–೪.೨**

**ಮನೆಯ ವಸ್ತುಗಳ ಪಟ್ಟಿ**

| ವಸ್ತುಗಳು | ಎಸ್‌ಜೆಎಸ್‌ಆರ್‌ವೈಯೋಜನೆಗೆ ಸೇರುವ/ಸೇರಿದ | | ವಸ್ತುಗಳನ್ನುಹೊಂದದೇ ಇರುವವರು |
|---|---|---|---|
| | ಮುಂಚೆ | ನಂತರ | |
| ಟಿವಿ | ೪೧ | ೨೩೯ | ೨೦ |
| ರೇಡಿಯೋ | ೨೯ | ೪೭ | ೨೨೪ |
| ಟೇಪ್‌ರೆಕಾರ್ಡರ್ | ೧೭ | ೧೩೨ | ೧೫೧ |
| ಡಿವಿಡಿ ಪ್ಲೇಯರ್ | ೦೯ | ೩೬ | ೨೫೫ |
| ಪೋನ್ | – | ೧೫ | ೨೮೫ |
| ಮೊಬೈಲ್ | ೩೪ | ೨೫೭ | ೦೯ |
| ಗಡಿಯಾರ | ೬೭ | ೧೯೪ | ೩೯ |
| ಸೈಕಲ್ | ೭೨ | ೧೫೮ | ೭೦ |
| ಮೊಪೆಡ್/ಸ್ಕೂಟರ್ | ೧೩ | ೧೨೨ | ೧೩೫ |
| ಫ್ಯಾನ್ | ೪೪ | ೧೫೨ | ೧೦೪ |
| ಹೊಲಿಗೆ ಯಂತ್ರ | ೦೪ | ೧೬೪ | ೧೬೮ |
| ವಿದ್ಯುತ್ ಶಕ್ತಿ ಓಲೆ | – | ೦೨ | ೨೯೮ |
| ಗ್ಯಾಸ್‌ಒಲೆ | – | ೧೯೭ | ೧೦೩ |
| ಕಾರು | – | – | – |
| ಆಟೋರಿಕ್ಷಾ | ೦ | ೪೮ | ೨೫೨ |
| ಕಂಪ್ಯೂಟರ್ | ೦ | ೦೪ | ೨೯೬ |
| ವಾಷಿಂಗ್ ಮೆಷಿನ್ | ೦ | ೦ | ೩೦೦ |
| ತಳ್ಳುವಗಾಡಿ | ೧೨ | ೧೫ | ೨೭೩ |
| ಎತ್ತಿನಗಾಡಿ | ೦೨ | ೦೩ | ೨೯೫ |
| ಕೂಲರ್ | ೦ | ೦ | ೩೦೦ |
| ಫ್ರಿಜ್ | ೦ | ೪ | ೨೯೬ |
| ಪೀಠೋಪಕರಣಗಳು | ೦ | ೦೮ | ೨೯೨ |

ಈ ಮೇಲಿನ ಪಟ್ಟಿಯನ್ನು ನೋಡಿದಾಗ ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರಿದ ನಂತರದಲ್ಲಿ ಗರಿಷ್ಟ ಪ್ರಮಾಣದ ಜನರು ನಗರ ಪ್ರದೇಶದಲ್ಲಿ ಮೇಲಿನ ಪಟ್ಟಿಯಲ್ಲಿ ವಿವರಿಸಿರುವ ವಸ್ತುಗಳನ್ನು ಹೊಂದಿರುವುದು ಸಂಗ್ರಹಿಸಲಾದ ಅಂಕಿ

ಅಂಶಗಳಿಂದ ತಿಳಿದು ಬರುತ್ತದೆ. ಇನ್ನು ಕೆಲವರು ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರಿದ ನಂತರದಲ್ಲಿಯೂ ಸಹ ಯಾವುದೇ ವಸ್ತುಗಳನ್ನು ಹೊಂದಿಲ್ಲದಿರುವುದು ಕಂಡು ಬಂದಿದೆ. ಒಟ್ಟಾರೆಯಾಗಿ ಮೇಲಿನ ಪಟ್ಟಿಯನ್ನು ನೋಡಿದಾಗ ಯೋಜನೆಯ ಫಲಾನುಭವಿಯಾದ ನಂತರದಲ್ಲಿ ಮನೆಯ ಅವಶ್ಯಕ ವಸ್ತುಗಳನ್ನು ಹೆಚ್ಚಾಗಿ ಖರೀದಿಸಿರುವುದು ಮೇಲಿನ ಅಂಕಿ ಅಂಶಗಳಿಂದ ಕಂಡು ಬಂದಿದೆ.

**೪.೩ ಮಹಿಳಾ ಸ್ಥಾನಮಾನದಲ್ಲಿ ಬದಲಾವಣೆ:**

ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಗೆ ಫಲಾನುಭವಿಯಾದ ನಂತರದಲ್ಲಿ ಮಹಿಳೆಯರು ಕುಟುಂಬದಲ್ಲಿ ವಿವಿಧ ಸಂಘ ಸಂಸ್ಥೆಗಳಲ್ಲಿ ತಮ್ಮದೇ ಆದ ಸ್ಥಾನಮಾನಗಳನ್ನು ಹೊಂದಿರುವುದನ್ನು ಕೆಳಗಿನ ಕೋಷ್ಟಕ ೪.೩ ರಲ್ಲಿ ಕಾಣಬಹುದು.

**ಕೋಷ್ಟಕ –೪.೩**

**ಮಹಿಳಾ ಸ್ಥಾನಮಾನ**

| ಅ. ಸಂ | ಮಹಿಳಾ ಸ್ಥಾನಮಾನ | ಎಸ್‌ಜೆಎಸ್‌ಆರ್‌ವೈ ಸೇರುವ/ಸೇರಿದ ನಂತರ | |
|---|---|---|---|
| | | ಮುಂಚೆ | ನಂತರ |
| ೧ | ಕುಟುಂಬ ನಿರ್ಣಯಗಳಲ್ಲಿ ನೀವು ಪಾಲ್ಗೊಳ್ಳುತ್ತಿರಾ | ೮೭ | ೨೧೩ |
| ೨ | ನಿಮ್ಮ ಪತಿಗೆ ಕುಡಿತದ ಚಟವಿದೆಯೇ ಇದ್ದರೆ, ಅದನ್ನು ಬಿಡಿಸಲು ಪ್ರಯತ್ನಿಸಿದ್ದೀರಾ | ಇಲ್ಲ | ೨೯ |
| ೩ | ಶಾಲೆಗೆ ಹೋಗುತ್ತಿರುವ ಮಕ್ಕಳ ಸಂಖ್ಯೆ | ಎಲ್ಲರೂ | ಎಲ್ಲರೂ |
| ೪ | ಕುಟುಂಬದಲ್ಲಿ ನಿಮ್ಮ ಸ್ಥಾನಮಾನ | ಪರವಾಗಿಲ್ಲ | ಉತ್ತಮ |
| ೫ | ನಿಮ್ಮ ಮತ್ತು ಇತರ ಕುಟುಂಬ ಸದಸ್ಯರ ಶಿಕ್ಷಣ ಮುಂದುವರೆಸುವಿಕೆ ಬಗ್ಗೆ ನಿಮ್ಮ ಅಭಿಪ್ರಾಯ | ಸಾಧಾರಣ | ಉತ್ತಮ |
| ೬ | ಇತರೆ ಸ್ಥಳೀಯ ಸಂಸ್ಥೆಯಲ್ಲಿ ನಿಮ್ಮ ಸದಸ್ಯತ್ವ | ಇಲ್ಲ | ೮೩ |

ಮಹಿಳೆಯರು ಎಸ್.ಜೆ.ಎಸ್.ಆರ್.ವೈ ಯೋಜನೆಗೆ ಸೇರುವುದಕ್ಕೆ ಮುಂಚೆಯೂ ಸಹ ಕುಟುಂಬದಲ್ಲಿ ಯಾವುದೇ ನಿರ್ಣಯಗಳನ್ನು ಕೈಗೊಳ್ಳಲು ಪಾಲ್ಗೊಳ್ಳುತ್ತಿದ್ದೆವು ಎಂಬುವುದಾಗಿ ೮೭ ಫಲಾನುಭವಿಗಳು ತಿಳಿಸಿದ್ದಾರೆ. ೨೧೩ ಫಲಾನುಭವಿಗಳಲ್ಲಿ ಈ ಯೋಜನೆಗೆ ಸೇರಿದ ನಂತರ ಗಂಡ–ಹೆಂಡತಿಯರಿಬ್ಬರೂ ಸಹ ನಿರ್ಣಯ ಕೈಗೊಳ್ಳುವಲ್ಲಿ ಭಾಗವಹಿಸುತ್ತಿರುವುದು ಕಂಡು ಬಂದಿದೆ. ಆದರೆ

ಫಲಾನುಭವಿಗಳು ತಮ್ಮ ಪತಿಗೆ ಕುಡಿತದ ಚಟವಿದ್ದರೂ ಅದನ್ನು ಬಿಡುವಂತೆ ತಿಳಿಸಿ ಹೇಳುವ ಧೈರ್ಯವನ್ನು ಗುಂಪಿಗೆ ಸೇರಿದ ನಂತರ ೨೯ ಜನರು ಮಾಡಿದ್ದಾರೆ. ಇದನ್ನು ನೋಡಿದಾಗ ಮಹಿಳೆಯರಿಗೆ ಗುಂಪಿಗೆ ಸೇರಿದ ನಂತರ ಗುಂಪಿನಲ್ಲಿ ಆಗುವ ಚರ್ಚೆ ಮತ್ತು ವಿಷಯಗಳ ಮೂಲಕ ಅರಿವಾಗಿ ಬದಲಾವಣೆ ಹೊಂದಿರುವುದು ಕಂಡು ಬರುತ್ತದೆ. ಎಲ್ಲಾ ಫಲಾನುಭವಿಗಳು, ಮಕ್ಕಳು ಶಾಲೆಗೆ ಹೋಗುತ್ತಿರುವುದನ್ನು ತಿಳಿಸಿದ್ದಾರೆ. ಅಂದರೆ ನಗರದಲ್ಲಿ ಶಿಕ್ಷಣದ ಬಗ್ಗೆ ಜನರಿಗೆ ಮೊದಲಿನಿಂದಲೂ ಅರಿವಿರುವುದನ್ನು ಕಾಣಬಹುದಾಗಿದೆ ಮತ್ತು ಹೆಚ್ಚಾಗಿ ಫಲಾನುಭವಿಗಳು ತಮ್ಮ ಮಕ್ಕಳು ಭವಿಷ್ಯದಲ್ಲಿ ಒಳ್ಳೆಯ ವಿದ್ಯಾವಂತರಾಗಲಿ ಎಂಬುವುದನ್ನು ಮನಗಂಡಿರುವುದು ತಿಳಿದು ಬರುತ್ತದೆ.

ಎಸ್.ಜೆ.ಎಸ್.ಆರ್.ವೈ ಗುಂಪಿಗೆ ಸೇರುವುದಕ್ಕೆ ಮುಂಚೆ ಫಲಾನುಭವಿಗಳ ಸ್ಥಾನಮಾನ ಸಾಧಾರಣ ಮಟ್ಟದಲ್ಲಿದ್ದು, ಯೋಜನೆಯ ಫಲಾನುಭವಿಯಾದ ನಂತರ ಗುಂಪಿನಲ್ಲಿ ದೊರೆಯುವ ಸಾಲ ಸೌಲಭ್ಯವನ್ನು ಪ್ರತಿ ಮಹಿಳೆಯು ತನ್ನ ಕುಟುಂಬದ ಏಳಿಗೆಗಾಗಿ, ಮಕ್ಕಳ ಶಿಕ್ಷಣಕ್ಕಾಗಿ, ಮನೆಯ ಆಗು ಹೋಗುಗಳಿಗಾಗಿ ಬಳಸಲು ಹಣ ತರುತ್ತಿರುವುದನ್ನು ಕಂಡ ಪುರುಷರು ಬ್ಯಾಂಕ್‌ನಿಂದ ಈ ರೀತಿ ಸುಲಭವಾಗಿ ಸಾಲ ದೊರೆಯುವುದು ಮಹಿಳೆಯರಿಗೆ ಮಾತ್ರ ಎಂಬುವುದನ್ನು ಅರಿತು ಸುಲಭ ಹಾಗೂ ಕೈಗೆಟುಕುವ ರೀತಿಯ ಬಡ್ಡಿ ದರದಲ್ಲಿ ಹೆಚ್ಚಿನ ಮೊತ್ತದ ಸಾಲ ದೊರೆಯುತ್ತಿರುವುದರಿಂದ ಇದನ್ನರಿತ ಮನೆಯ ಪುರುಷ ಮುಖ್ಯಸ್ಥನು ಸಹ ಮಹಿಳೆಗೆ ಕುಟುಂಬದಲ್ಲಿ ಯಾವುದೇ ನಿರ್ಣಯಗಳಲ್ಲಿ ಪಾಲ್ಗೊಳ್ಳಲು ಮಹಿಳೆಗೆ ಸ್ಥಾನಮಾನ ನೀಡುತ್ತಿರುವುದು ಕಂಡು ಬಂದಿದೆ.

ಶಿಕ್ಷಣದ ವಿಷಯವಾಗಿ ಹೇಳುವುದೆಂದರೆ ಫಲಾನುಭವಿಗಳು ತಮ್ಮ ಶಿಕ್ಷಣಕ್ಕಿಂತ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚು ಒತ್ತು ಕೊಟ್ಟು ಮಕ್ಕಳು ನಮ್ಮ ರೀತಿ ಆಗದೆ ಉನ್ನತ ಶಿಕ್ಷಣವನ್ನು ಕೊಡಿಸುವ ಮತ್ತು ಯಾವುದಾದರೂ ಒಂದು ಉದ್ಯೋಗವನ್ನು ಮಾಡಲು ಶಕ್ತನಾಗುವ ಮಟ್ಟಿನವರೆಗೆ ಎಷ್ಟೇ ಕಷ್ಟ ಬಂದರೂ ಎದೆಗುಂದದೇ ಓದಿಸುವ ಧೈರ್ಯವನ್ನು ವ್ಯಕ್ತಪಡಿಸಿರುವುದು ಕಂಡು ಬಂದಿದೆ. ಅತೀ ಹೆಚ್ಚಾಗಿ ಸಂಘದಿಂದ ದೊರೆಯುವ ಸೌಲಭ್ಯಗಳನ್ನು ಮಕ್ಕಳ ಶಿಕ್ಷಣಕ್ಕಾಗಿ ಬಳಸುತ್ತಿರುವುದು ಹಾಗೂ ಆದಾಯ ಉತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸುತ್ತಿರುವುದು ಕಂಡು ಬರುತ್ತದೆ.

ವಿವಿಧ ಸಂಘ ಸಂಸ್ಥೆಗಳಲ್ಲಿ ಹೊಂದಿರುವ ಸದಸ್ಯತ್ವದ ವಿಷಯವಾಗಿ ಅವರು ಗುಂಪಿಗೆ ಸೇರುವ ಮುಂಚೆ ಯಾವುದೇ ಸಂಘ ಸಂಸ್ಥೆಯ ಸದಸ್ಯರಾಗಿರುವುದಿಲ್ಲ. ತದನಂತರ ೮೩ ಜನರು ವಿವಿಧ ಸಮುದಾಯ ಸದಸ್ಯತ್ವ ಸಂಘಟನೆಯ ಸದಸ್ಯರಾಗಿರುವುದು ಕಂಡು ಬಂದಿದೆ. ಮಹಿಳಾ ಗುಂಪಿನಲ್ಲಿ ಯಾವುದೇ ಒಬ್ಬ

ಸದಸ್ಯರು ಸಭೆ ಸೇರಿದಾಗ ತಾನು ಸೇರಿರುವ ಸಂಘ ಸಂಸ್ಥೆಯ ಸದಸ್ಯತ್ವದ ಅನುಕೂಲತೆಗಳ ಬಗ್ಗೆ ಚರ್ಚಿಸಿದಾಗ ಅದರ ಸಾಧಕ ಬಾಧಕಗಳನ್ನು ತಿಳಿದು ಕೊಂಡು ಗುಂಪಿನಲ್ಲಿ ತಮಗೆ ಆಗಿರುವ ಅನುಕೂಲತೆಯನ್ನು ಮನಗಂಡು ಬಹಳ ಮಹಿಳೆಯರು ಸದಸ್ಯತ್ವವನ್ನು ಹೊಂದಿರುವುದು ಕಂಡು ಬಂದಿದೆ. ಯಾವುದೇ ಸಂಘ ಸಂಸ್ಥೆಯ ಸದಸ್ಯತ್ವ ಹೊಂದುವ ಮುಂಚೆ ಮನೆಯಲ್ಲಿ ಚರ್ಚಿಸಿ ನಿರ್ಣಯ ಕೈಗೊಳ್ಳುತ್ತಿರುವುದರಿಂದ ಮನೆಯಲ್ಲಿ ಗಂಡನೂ ಸಹ ಮಹಿಳೆಗೆ ಬೆಂಬಲ ನೀಡುತ್ತಿರುವುದರಿಂದ ಮಹಿಳೆಯು ಸಂಪೂರ್ಣವಾಗಿ ಸಬಲೀಕರಣದತ್ತ ಬರುತ್ತಿರುವುದು ತಿಳಿಯುತ್ತದೆ. ಸಂಘದಲ್ಲಿ ಪ್ರತಿ ಸಭೆಗೆ ಪ್ರತಿಯೊಬ್ಬರು ಒಂದೊಂದು ಸಭೆಯ ಅಧ್ಯಕ್ಷತೆಯನ್ನು ವಹಿಸುವ ನಿಯಮವಿರುವುದರಿಂದ ಗುಂಪಿನಲ್ಲಿ ಧೈರ್ಯ ಹಾಗೂ ನಾಯಕತ್ವದ ಗುಣ ಬೆಳೆದು ಆಮೂಲಕ ತನಗೂ ಸಭೆಯಲ್ಲಿ ಒಂದು ಗೌರವ, ಸ್ಥಾನಮಾನ ಸಿಗುತ್ತಿರುವುದರಿಂದ ಸಂತೋಷಗೊಂಡು ಇತರೆ ಸಂಘ ಸಂಸ್ಥೆಗಳಿಗೆ ಸದಸ್ಯತ್ವ ಹೊಂದಲು ಸ್ವಪ್ರೇರಣೆ ಹೊಂದುತ್ತಿರುವುದು ತಿಳಿದು ಬಂದಿದೆ. ಇದರಿಂದ **ಅಮಾರ್ತ್ಯಸೇನ್** ರವರು ಬಡತನ ನಿರ್ಮೂಲನೆಗಾಗಿ ಪ್ರತಿಪಾದಿಸಿರುವ ಅಂಶಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಸಾಮಾರ್ಥ್ಯ ಅಭಿವೃದ್ಧಿಯಾದಂತೆ ವಿವಿಧ ಉದ್ಯೋಗವಕಾಶಗಳನ್ನು ರೂಪಿಸಿ ಕೊಂಡು ಪ್ರಮುಖ ಸ್ಥಾನಮಾನ ಮತ್ತು ಸಮಾಜದಲ್ಲಿ ಬದಲಾವಣೆ ಹೊಂದಬಹುದು ಎಂಬುದು ಮೇಲಿನ ಅಂಶಗಳಿಂದ ತಿಳಿದು ಬರುತ್ತದೆ.

**೪.೪ ಪ್ರಮುಖ ನಿರ್ಣಯ ಕೈಗೊಳ್ಳುವಲ್ಲಿ ಬದಲಾದ ಮಹಿಳೆಯರ ಪಾತ್ರ:**

ಪ್ರತಿಯೊಂದು ಕುಟುಂಬದಲ್ಲಿ ಯಾವುದೇ ನಿರ್ಣಯವನ್ನು ಕೈಗೊಳ್ಳಬೇಕಾದ ಸಂದರ್ಭ ಬಂದಾಗ ಕುಟುಂಬದ ಮುಖ್ಯಸ್ಥನು ಆರೋಗ್ಯಕರವಾದ ನಿರ್ಧಾರವನ್ನು ಕೈಗೊಂಡಾಗ ಮಾತ್ರ ಅದು ಯಶಸ್ವಿಯಾಗಿ ನಡೆಯಲು ಸಾಧ್ಯವಾಗುತ್ತದೆ. ವೇದಗಳ ಕಾಲದ ಸಮಾಜಗಳಲ್ಲೇ ಮಹಿಳೆಗೆ ಹೆಚ್ಚಿನ ಸ್ಥಾನಮಾನಗಳಿದ್ದುದನ್ನು ನಾವು ಇತಿಹಾಸದಿಂದ ತಿಳಿಯುತ್ತೇವೆ. ಇಂದಿನ ಆಧುನಿಕ ಸಮಾಜದಲ್ಲಿ ಕುಟುಂಬದ ಆಗು ಹೋಗುಗಳಿಗೆ ಸಂಬಂಧಿಸಿದಂತೆ ಮಹಿಳೆಯು ಸಹ ತನ್ನದೇ ಆದ ಪಾತ್ರವನ್ನು ವಹಿಸುತ್ತಾ ಬರುತ್ತಿರುವುದನ್ನು ಕಾಣುತ್ತೇವೆ. ಉದಾ: ಕೇರಳದ ನಂಬೂದರಿ ಸಮಾಜದಲ್ಲಿ ಇಂದಿಗೂ ಸಹ ಮಾತೃಪ್ರಧಾನ ಕುಟುಂಬದಲ್ಲಿ ಮಹಿಳೆಯೇ ಮುಖ್ಯ ಪಾತ್ರವಹಿಸುತ್ತಿರುವುದನ್ನು ಕಾಣುತ್ತೇವೆ. ಪ್ರಸ್ತುತ ಸಮಾಜದಲ್ಲಿ ಮಹಿಳೆಯು ಕುಟುಂಬದಲ್ಲಿ ನಿರ್ಣಯ ಕೈಗೊಳ್ಳುವಲ್ಲಿ ವಹಿಸುತ್ತಿರುವ ಪಾತ್ರದ ವಿಷಯವಾಗಿ ಮಾಹಿತಿಯನ್ನು ಕಲೆಹಾಕಲಾಯಿತು. ಅದನ್ನು ಕೋಷ್ಟಕ ೪.೪ ರಲ್ಲಿ ಸಂಗ್ರಹಿಸಲಾಗಿದೆ.

## ಕೋಷ್ಟಕ –೪.೪

## ನಿರ್ಣಯ ಕೈಗೊಳ್ಳುವಲ್ಲಿ ಮಹಿಳೆಯರು

| ನಿರ್ಣಯದ ವಿಧಗಳು | ಎಸ್.ಜೆ.ಎಸ್.ಆರ್.ವೈ ಯೋಜನೆಗೆ ಸೇರುವ/ ಸೇರಿದ | |
|---|---|---|
| | ಮುಂಚೆ | ನಂತರ |
| ಮನೆಯ ರಿಪೇರಿ | ೦೮ | ೧೧೦ |
| ಹೊಸ ಉದ್ಯೋಗ | ೨೨ | ೧೩೯ |
| ಕುಟುಂಬ ಯೋಜನೆ | ೧೭ | ೧೫೪ |
| ಮಕ್ಕಳ ಶಿಕ್ಷಣ | ೭೧ | ೧೫೫ |
| ಹೊಸವಸ್ತು ಕೊಳ್ಳುವಾಗ | ೨೪ | ೧೧೩ |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಒಟ್ಟು ಫಲಾನುಭವಿಗಳಲ್ಲಿ ೦೮ ಜನರು ಮನೆಯ ರಿಪೇರಿ ಬಗ್ಗೆ ನಿರ್ಣಯವನ್ನು ಈ ಯೋಜನೆಗೆ ಸೇರುವ ಮುಂಚೆ ತೆಗೆದುಕೊಳ್ಳುತ್ತಿದ್ದರು, ಯೋಜನೆಯ ನಂತರ ೧೧೦ ಜನರು ನಿರ್ಣಯ ಕೈಗೊಳ್ಳುವಿಕೆಯಲ್ಲಿ ಕುಟುಂಬದಲ್ಲಿ ಭಾಗವಹಿಸಿದ್ದಾರೆ, ೨೨ ಜನರು ಮುಂಚೆ ಹೊಸ ಉದ್ಯೋಗ ಮಾಡುವ ಬಗ್ಗೆ ನಿರ್ಣಯ ಕೈಗೊಳ್ಳುತ್ತಿದ್ದರೆ, ನಂತರದಲ್ಲಿ ೧೩೯ ಜನರು ನಿರ್ಣಯ ಮಾಡುವಲ್ಲಿ ಪಾತ್ರವಹಿಸಿದ್ದಾರೆ, ೧೭ ಜನರು ಮುಂಚೆ ಕುಟುಂಬ ಯೋಜನೆಯ ಬಗ್ಗೆ ನಿರ್ಣಯ ಕೈಗೊಂಡಿದ್ದರೆ, ನಂತರದಲ್ಲಿ ೧೫೪ ಜನರು ನಿರ್ಣಯದಲ್ಲಿ ಭಾಗವಹಿಸಿರುವುದು ತಿಳಿಯುತ್ತದೆ, ಅದೇ ರೀತಿ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ಹಿಂದೆ ೭೧ ಜನರು, ನಂತರದಲ್ಲಿ ೧೫೫ ಜನರು ನಿರ್ಣಯ ವಿಷಯವಾಗಿ ಪಾಲ್ಗೊಂಡಿದ್ದಾರೆ, ಹಾಗೆಯೇ ಈ ಹಿಂದೆ ಹೊಸ ವಸ್ತುವನ್ನು ಕೊಳ್ಳುವಲ್ಲಿ ೨೪ ಜನರು, ಯೋಜನೆಗೆ ಸೇರಿದ ನಂತರ ೧೧೩ ಜನರು ಜೊತೆಯಾಗಿ ಭಾಗಿಯಾಗಿ ಪರಸ್ಪರ ಮಾತುಕತೆಯಲ್ಲಿ ಭಾಗವಹಿಸಿರುವುದು ಕಂಡು ಬರುತ್ತದೆ. ಇನ್ನುಳಿದ ಸದಸ್ಯರು ಮುಂಚೆ ಮತ್ತು ನಂತರದಲ್ಲಿಯೂ ನಿರ್ಣಯದಲ್ಲಿ ಭಾಗವಹಿಸಿರುವುದು ಕಂಡು ಬಂದಿದೆ.

### ೪.೫ ರಾಜಕೀಯ ಬದಲಾವಣೆ:

ಭಾರತ ಪ್ರಜಾಪ್ರಭುತ್ವ ರಾಷ್ಟ್ರವಾದ್ದರಿಂದ ಪ್ರತಿಯೊಬ್ಬ ಪ್ರಜೆಯು ರಾಜಕೀಯದ ಬಗ್ಗೆ ಸಾಮಾನ್ಯ ಜ್ಞಾನವನ್ನಾದರೂ ಹೊಂದಿರಬೇಕಾದುದು ಅಗತ್ಯ. ಮಹಾತ್ಮಾ ಗಾಂಧೀಜಿಯವರು ಹೇಳುವಂತೆ ವಿದ್ಯಾರ್ಥಿಗಳು ರಾಜಕೀಯ ಜ್ಞಾನ ಹೊಂದಿರಬೇಕೆ ವಿನಃ ಅದರ ಪ್ರಯೋಗಕ್ಕೆ ಹೋಗಬಾರದು ಎಂದು ತಿಳಿಸಿದ್ದಾರೆ. ಅಂದರೆ ಪ್ರತಿಯೊಬ್ಬರೂ ಸಹ ರಾಜಕೀಯದ ಪರಿಜ್ಞಾನ ಹೊಂದಿರಬೇಕೆಂದು

ಅದರಂತೆ ಚಾಲ್ತಿಯಲ್ಲಿರುವ ಕಾನೂನುಗಳನ್ನು ಮತ್ತು ಹಕ್ಕುಗಳನ್ನು ಸಹ ತಿಳಿದಿರಬೇಕಾಗುತ್ತದೆ ಎಂದಿದ್ದಾರೆ. ಅಂದಾಗ ಮಾತ್ರ ಅವನು ಅಥವಾ ಅವಳು ಜವಾಬ್ದಾರಿಯುತ ಪ್ರಜೆಯಾಗಲು ಸಾಧ್ಯ. ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರುವ ಮುಂಚೆ ಮತ್ತು ನಂತರದಲ್ಲಿ ಫಲಾನುಭವಿಗಳಲ್ಲಿ ಆದ ಬದಲಾವಣೆಗಳನ್ನು ಕೋಷ್ಟಕ ೪.೫ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ –೪.೫**

**ರಾಜಕೀಯ ನಿರ್ಧಾರ ಕೈಗೊಳ್ಳುವಲ್ಲಿ**

| ಕ್ರ.ಸಂ | ರಾಜಕೀಯ ಬದಲಾವಣೆ | ಎಸ್.ಜೆ.ಆರ್. ವೈ ಯೋಜನೆಗೆ ಸೇರುವ/ಸೇರಿದ | |
|---|---|---|---|
| | | ಮುಂಚೆ | ನಂತರ |
| ೧ | ಕಾನೂನು ಪ್ರಕಾರ ಮಹಿಳೆಯರಿಗೂ ಆಸ್ತಿಯ ಹಕ್ಕಿದೆ. ಇದು ನಿಮಗೆ ಗೊತ್ತೆ? | ೯೭ | ೨೦೩ |
| ೨ | ವರದಕ್ಷಿಣೆ ತೆಗೆದುಕೊಳ್ಳುವುದು ಮತ್ತು ಕೊಡುವುದರ ಬಗ್ಗೆಯಾವಾಗಲಾದರೂ ವಿರೋಧಿಸಿದ್ದೀರಾ | ಇಲ್ಲ | ೧೫೯ |
| ೩ | ಚುನಾವಣೆ ಪ್ರಚಾರದಲ್ಲಿ ಭಾಗವಹಿಸಿದ್ದೀರಾ | ೪೪ | ೧೭೬ |
| ೪ | ಮತ ಹಾಕಲು ಭಾಗವಹಿಸಿದ್ದೀರಾ? | ೧೨೭ | ೧೭೩ |
| ೫ | ಸಮುದಾಯ ಅಭಿವೃದ್ಧಿ ಚಟುವಟಿಕೆಗಳಲ್ಲಿ ಭಾಗವಹಿಸಿದ್ದೀರಾ? | ೩೮ | ೨೬೨ |
| ೬ | ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದೀರಾ? | ೧೧೪ | ೧೮೬ |
| ೭ | ಹೆಂಡತಿಯನ್ನು ಬಡಿಯುವ ಗಂಡನನ್ನು ಪ್ರತಿಭಟಿಸಿದ್ದೀರಾ? | – | ೧೯ |
| ೮ | ಕೂಲಿಯಲ್ಲಿ ಮಹಿಳೆ/ಪುರುಷರ ಅಸಮಾನತೆಯನ್ನು ಪ್ರತಿಭಟಿಸಿದ್ದೀರಾ? | ೨೪ | ೨೭೬ |
| ೯ | ಕುಡಿತವನ್ನು ಪ್ರತಿಭಟಿಸಿದ್ದೀರಾ? | ೦೩ | ೯೮ |
| ೧೦ | ಕೆಲಸದ ಪ್ರದೇಶಗಳಲ್ಲಿ ಮಹಿಳೆಗೆ ಕಿರುಕುಳ ಕೊಡುವುದನ್ನು ಪ್ರತಿಭಟಿಸಿದ್ದೀರಾ | ೧೭ | ೨೮೩ |

ಮೇಲಿನ ಕೋಷ್ಟಕ ೪.೫ ನ್ನು ನೋಡಿದಾಗ ೯೭ ಜನರು ಮುಂಚೆ ಕಾನೂನಿನ ಪ್ರಕಾರ ಆಸ್ತಿಯ ಹಕ್ಕು ಇದೆ ಎಂಬುದಾಗಿ ತಿಳಿದಿತ್ತು ಎಂದಿದ್ದಾರೆ, ನಂತರದಲ್ಲಿ ೨೦೩ ಜನರು ಅರಿತುಕೊಂಡಿದ್ದಾರೆ. ವರದಕ್ಷಿಣೆ ತೆಗೆದುಕೊಳ್ಳುವುದು ಮತ್ತು ಕೊಡುವುದರ ಬಗ್ಗೆ ತಪ್ಪು ಎನ್ನುವ ವಿಷಯದ ಬಗ್ಗೆ ವಿರೋಧಿಸಿದ್ದೀರಾ ಎಂಬುದಕ್ಕೆ ಮುಂಚೆ ಈ ವಿಷಯಕ್ಕೆ ಫಲಾನುಭವಿಗಳು ಅಷ್ಟಾಗಿ ಮಹತ್ವ

ನೀಡಿಲ್ಲದಿರುವುದು ಕಂಡು ಬಂದಿದೆ. ನಂತರದಲ್ಲಿ ೧೫೯ ಫಲಾನುಭವಿಗಳು ಇದರ ಬಗ್ಗೆ ಅರಿವಾಗಿ ವಿರೋಧಿಸಿರುವುದು ತಿಳಿದು ಬಂದಿದೆ.

ರಾಜಕೀಯ ಚುನಾವಣಾ ಪ್ರಚಾರ ಕಾರ್ಯಕ್ರಮದಲ್ಲಿ ಮುಂಚೆ ೪೪ ಫಲಾನುಭವಿಗಳು ಪಾಲ್ಗೊಂಡಿದ್ದಾರೆ. ಈ ಯೋಜನೆಗೆ ಸೇರ್ಪಡೆಯಾದ ನಂತರ ೧೭೬ ಫಲಾನುಭವಿಗಳು ಪಾಲ್ಗೊಂಡಿದ್ದಾರೆ. ೧೨೭ ಫಲಾನುಭವಿಗಳು ಯೋಜನೆಯ ಫಲಾನುಭವಿಗಳಾಗುವುದಕ್ಕೆ ಮುಂಚೆಯೂ ಸಹ ಮತದಾನದ ಹಕ್ಕನ್ನು ಅರಿತವರಾಗಿದ್ದಾರೆ, ನಂತರದಲ್ಲಿ ೧೭೩ ಜನರಿಗೆ ಮತದಾನದ ಹಕ್ಕಿನ ಬಗ್ಗೆ ತಿಳುವಳಿಕೆ ಬಂದಿರುವುದು ಕಂಡು ಬಂದಿದೆ. ಸಮುದಾಯ ಅಭಿವೃದ್ಧಿ ಚಟುವಟಿಕೆಗಳಿಂದ ಕುಟುಂಬ ಯೋಜನಾ ಕಾರ್ಯಕ್ರಮ ಆರೋಗ್ಯ, ಶಿಕ್ಷಣ, ನೈರ್ಮಲ್ಯ, ಚುಚ್ಚು ಮದ್ದುಗಳ ಮತ್ತು ಆರೋಗ್ಯ ಶಿಬಿರ ಕಾರ್ಯಕ್ರಮಗಳಲ್ಲಿ ಈ ಹಿಂದೆ ೩೮ ಫಲಾನುಭವಿಗಳು ಭಾಗವಹಿಸಿರುವುದು ತಿಳಿದು ಬರುತ್ತದೆ. ನಂತರ ೨೬೨ ಫಲಾನುಭವಿಗಳು ಪಾಲ್ಗೊಂಡಿರುವುದು ಕಂಡು ಬಂದಿದೆ. ಈ ಸಂಖ್ಯೆ ಹೆಚ್ಚಲು ಕಾರಣ ಈ ಯೋಜನೆಯಲ್ಲಿಯೇ ಒಂದು ಪ್ರತ್ಯೇಕವಾದ ಸಾಮಾಜಿಕ ಸೇವಾ ಕಾರ್ಯಕ್ರಮ ಇರುವುದರಿಂದ ಫಲಾನುಭವಿಗಳಿಗೆ ಹೆಚ್ಚು ಅರಿವಾಗಿದೆ.

ಮಹಿಳೆ ಮತ್ತು ಪುರುಷರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ಎಂಬುದು ಸರ್ಕಾರದ ನಿಲುವಾಗಿದೆ. ಆದರೆ ಈ ಹಿಂದೆಯೂ ಸಹ ಮಹಿಳಾ ಕೆಲಸಕ್ಕೆ ಪುರುಷನಷ್ಟೇ ಸಮಾನವೇತನ ನೀಡುತ್ತಿರಲಿಲ್ಲ ಇಂದು ಹಲವಾರು ಬದಲಾವಣೆಗಳು ಕಂಡು ಬಂದಿವೆ. ಈ ಹಿಂದೆ ೨೪ ಫಲಾನುಭವಿಗಳು ಸಮಾನ ವೇತನ ನೀಡುವುದರ ಬಗ್ಗೆ ತಿಳುವಳಿಕೆ ಇದ್ದು ಇದನ್ನು ಪ್ರತಿಭಟಿಸಿದ್ದಾರೆ. ಆದರೆ ಈ ಯೋಜನೆಯ ನಂತರ ೨೭೬ ಫಲಾನುಭವಿಗಳಿಗೆ ಅಸಮಾನತೆಯ ಅರಿವಾಗಿದ್ದು ಅದನ್ನು ಕೇಳುವ ಧೈರ್ಯ ಬಂದಿದೆ. ಹೆಂಡತಿಯನ್ನು ಬಡಿಯುವ ಗಂಡನನ್ನು ಈ ಹಿಂದೆ ಯಾವ ಮಹಿಳೆಯೂ ಸಹ ಪ್ರತಿಭಟಿಸಿಲ್ಲದಿರುವುದು ಯೋಜನೆಯ ನಂತರದಲ್ಲಿ ೧೯ ಮಹಿಳೆಯರು ಈ ವಿಷಯವಾಗಿ ಗಂಡನೊಂದಿಗೆ ಚರ್ಚೆ ಮಾಡಿರುವುದು ಕಂಡು ಬರುತ್ತದೆ.

ಈ ಯೋಜನೆಗೆ ಸೇರುವುದಕ್ಕೆ ಮುಂಚೆ ಮನೆಯಲ್ಲಿ ಕುಡಿವ ಗಂಡನನ್ನು ಕುಡಿಯದಂತೆ ತಿಳುವಳಿಕೆ ಅಥವಾ ಪ್ರತಿಭಟನೆ ಮಾಡಿದ್ದೀರಾ ಎಂಬುದಕ್ಕೆ ೦೩ ಮಹಿಳೆಯರು ಧೈರ್ಯವನ್ನು ತೋರಿಸಿರುವುದು ಕಂಡು ಬಂದಿದೆ. ಈ ಯೋಜನೆಯ ಫಲಾನುಭವಿಯಾದ ನಂತರ ೯೮ ಮಹಿಳೆಯರಿಗೆ ತಿಳುವಳಿಕೆ ಬಂದಿದ್ದು ಗಂಡನಿಗೆ ತಿಳುವಳಿಕೆ ನೀಡುವ ಕೆಲಸ ಮಾಡಿದ್ದಾರೆ. ಮಹಿಳೆಯರು ಮಾಡುವ ಕೆಲಸದ ಸ್ಥಳದಲ್ಲಿ ಅಲ್ಲಿ ಯಾರಿಗಾದರೂ ಕಿರುಕುಳ ಇತ್ಯಾದಿ ಮಾಡಿದ್ದನ್ನು ಪ್ರತಿಭಟಿಸುವ ಧೈರ್ಯವನ್ನು ಈ ಹಿಂದೆ ೧೭ ಜನರು ಮಾಡಿದರೆ ನಂತರದಲ್ಲಿ ೨೮೩ ಜನರು ಪ್ರತಿಭಟಿಸಿರುವುದು ಕಂಡು ಬರುತ್ತದೆ. ಅದರಂತೆ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಿಕೆಯಲ್ಲಿ ಈ ಹಿಂದೆ ೧೧೪ ಜನರು

ನಂತರದಲ್ಲಿ ೧೭೧ ಜನರು ಭಾಗವಹಿಸುತ್ತಿರುವುದು ಮೇಲಿನ ಕೋಷ್ಟಕದಿಂದ ತಿಳಿದು ಬರುತ್ತದೆ.

ಒಟ್ಟಾರೆಯಾಗಿ ಮೇಲಿನ ಅಂಶಗಳನ್ನು ಗಮನಿಸಿದಾಗ ಈ ಯೋಜನೆಗೆ ಸೇರಿದ ನಂತರದಲ್ಲಿ ಜನರು ಸಕ್ರೀಯವಾಗಿ ಪಾಲ್ಗೊಂಡಿರುವುದು ಆ ಮೂಲಕ ಕುಟುಂಬದಲ್ಲಿಯೂ ಸಹ ಬದಲಾವಣೆಯಾಗಿರುವುದು ಕಂಡು ಬಂದಿದೆ.

**೪.೬ ಮಕ್ಕಳ ಶಿಕ್ಷಣಕ್ಕೆ ಅನುಕೂಲಕರವಾಗಿರುವುದು :**

ಆರ್ಥಿಕವಾಗಿ ಹೆಚ್ಚು ಸಬಲರಾದಂತೆ ಮಕ್ಕಳಿಗೆ ಶಿಕ್ಷಣ ಕೊಡಿಸಲು ತಂದೆ ತಾಯಿಗಳು ಮುಂದೆ ಬರುವುದು ಸಹಜ. ಬಡತನದ ಬೇಗೆಯಲ್ಲಿದ್ದಾಗ ಆರ್ಥಿಕವಾಗಿ ಅಶಕ್ತರಿದ್ದಾಗ ಮಕ್ಕಳಿಗೆ ಶಿಕ್ಷಣ ನೀಡಲು ತಂದೆ ತಾಯಂದಿರು ಮುಂದೆ ಬರುವುದಿಲ್ಲ, ಮಗನು ಸಹ ದುಡಿದು ತಂದರೆ ತುತ್ತಿನ ಚೀಲ ತುಂಬಿಸಬಹುದು ಎಂಬ ಆಲೋಚನೆಯಲ್ಲಿರುತ್ತಾನೆ. ಸ್ವಯಂ ಉದ್ಯೋಗದ ಚಟುವಟಿಕೆ ಮಾಡಿ ಮಕ್ಕಳ ಶಿಕ್ಷಣಕ್ಕೆ ಎಷ್ಟರ ಮಟ್ಟಿಗೆ ಅನುಕೂಲವಾಗಿರುವುದರ ವಿಷಯವಾಗಿ ಮಾಹಿತಿದಾರರಿಂದ ಉತ್ತರ ಪಡೆದು ಕೊಳ್ಳಲು ಪ್ರಯತ್ನಿಸಲಾಯಿತು, ಅವರಿಂದ ಬಂದ ಮಾಹಿತಿಯನ್ನು ಕೋಷ್ಟಕ ೪.೬ ರಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ–೪.೬**

**ಮಕ್ಕಳ ಶಿಕ್ಷಣಕ್ಕೆ ಅನುಕೂಲ**

| ಕ್ರಮ ಸಂಖ್ಯೆ | ಮಕ್ಕಳ ಶಿಕ್ಷಣಕ್ಕಾಗಿ | ಒಟ್ಟು | ಪ್ರತಿಶತ (%) |
|---|---|---|---|
| ೦೧ | ಹೌದು | ೨೧೮ | ೭೨.೬೬ |
| ೦೨ | ಇಲ್ಲ | ೮೨ | ೨೭.೩೩ |
| | **ಒಟ್ಟು** | **೩೦೦** | **೧೦೦** |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ೭೨.೬೬ ಪ್ರತಿಶತ ಫಲಾನುಭವಿಗಳು ಈ ಉದ್ಯೋಗ ಕೈಗೊಂಡ ಮೇಲೆ ಮಕ್ಕಳ ಶಿಕ್ಷಣಕ್ಕೆ ಹಾಗೂ ಮನೆಯ ಇತರ ಎಲ್ಲಾ ಖರ್ಚು ವೆಚ್ಚಗಳಿಗೆ ಅನುಕೂಲಕರವಾಗಿದೆ ಎಂದು ತಿಳಿಸಿರುವುದು ಕಂಡು ಬಂದಿದೆ. ಪ್ರತಿಶತ ೨೭.೩೩ ಮಾಹಿತಿದಾರರು ಶಿಕ್ಷಣಕ್ಕೆ ಬಳಸಿಲ್ಲದಿರುವುದು ಇತರ ಎಲ್ಲಾ ಖರ್ಚು ವೆಚ್ಚಗಳಿಗೆ ಬಳಸಿ ಕೊಂಡಿರುವುದು ಕಂಡು ಬಂದಿದೆ.

**೪.೭ ವಾರ್ಷಿಕ ಆದಾಯದಲ್ಲಿ ಬದಲಾವಣೆ :**

ಎಸ್.ಜೆ.ಎಸ್.ಆರ್.ವೈ ಗೆ ಸೇರುವ ಮುಂಚೆ ಫಲಾನುಭವಿಗಳ ವಾರ್ಷಿಕ ವರಮಾನ ಹಾಗೂ ಯೋಜನೆಗೆ ಸೇರಿದ ನಂತರದ ವಾರ್ಷಿಕ ವರಮಾನ

ಸಾಮಾಜಿಕ ಸಂಶೋಧನೆಯಲ್ಲಿ ಯಾವುದೇ ಫಲಿತಾಂಶವನ್ನು ನಾವು ಪಡೆಯಬೇಕಾದರೆ ಪ್ರಸ್ತುತ ಹಾಗೂ ಹಿಂದಿನ ಸ್ಥಿತಿಗತಿಗಳ ಆದಾಯದ ಮೂಲವನ್ನು ಮಾಹಿತಿದಾರರಿಂದ ತಿಳಿದು ಕೊಳ್ಳುವುದರಿಂದ ಈ ಯೋಜನೆಯ ಯಶಸ್ಸು ಮತ್ತು ಇದರಿಂದ ಫಲಾನುಭವಿಗೆ ಆದ ಪ್ರಯೋಜನ ಎರಡನ್ನು ತಾಳೆ ಮಾಡಿ ಯೋಜನೆಯ ಪರಿಣಾಮದ ಬಗ್ಗೆ ಸ್ಪಷ್ಟತೆಯನ್ನು ಪಡೆದುಕೊಳ್ಳಲು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅದರಂತೆ ಅಂಕಿ ಅಂಶಗಳನ್ನು ಕೋಷ್ಟಕ ೪.೭ ರಲ್ಲಿ ವಿವರಿಸಲಾಗಿದೆ.

**ಕೋಷ್ಟಕ– ೪.೭**

**ಹಿಂದಿನ ವಾರ್ಷಿಕ ವರಮಾನ / ಯೋಜನೆಗೆ ಸೇರಿದ ನಂತರ ವಾರ್ಷಿಕ ವರಮಾನ**

| ಹಿಂದಿನ ವಾರ್ಷಿಕ ವರಮಾನ | | | | ಇಂದಿನ ವಾರ್ಷಿಕ ವರಮಾನ: | | |
|---|---|---|---|---|---|---|
| ಕ್ರ.ಸಂ | ವಾರ್ಷಿಕ ವರಮಾನ ರೂಗಳಲ್ಲಿ | ಒಟ್ಟು | ಪ್ರತಿಶತ (%) | ವಾರ್ಷಿಕ ವರಮಾನ ರೂಗಳಲ್ಲಿ | ಒಟ್ಟು | ಪ್ರತಿಶತ (%) |
| ೧. | ೧೦,೦೦೦ ಕ್ಕಿಂತ ಕಡಿಮೆ | ೩೮ | ೧೨.೬೬ | ೧೦,೦೦೦ಕ್ಕಿಂತ ಕಡಿಮೆ | ೦ | ೦ |
| ೨. | ೧೦,೦೦೧ – ೨೦,೦೦೦ | ೧೮೩ | ೬೧.೦೦ | ೧೦,೦೦೧ – ೨೦,೦೦೦ | ೩೭ | ೧೨.೩೩ |
| ೩. | ೨೦,೦೦೧– ೩೦,೦೦೦ | ೭೯ | ೨೬.೩೩ | ೨೦,೦೦೧–೩೦,೦೦೦ | ೨೪೪ | ೮೧.೩೩ |
| ೪. | ೩೦,೦೦೦/ಕ್ಕಿಂತ ಮೇಲ್ಪಟ್ಟು | ೦ | ೦ | ೩೦,೦೦೦/ಕ್ಕಿಂತಮೇಲ್ಪಟ್ಟು | ೧೯ | ೬.೩೩ |
| | ಒಟ್ಟು | ೩೦೦ | ೧೦೦% | ಒಟ್ಟು | ೩೦೦ | ೧೦೦% |

ಮೇಲಿನ ಕೋಷ್ಟಕದಲ್ಲಿ ಪ್ರತಿಶತ ೧೨.೬೬ ಜನರು ೧೦,೦೦೦ ಕ್ಕಿಂತಲೂ ಕಡಿಮೆ ವಾರ್ಷಿಕ ಆದಾಯ ಹೊಂದಿದವರಾಗಿದ್ದು, ಪ್ರತಿಶತ ೬೧ ಜನರು ೧೦,೦೦೧ ರಿಂದ ೨೦,೦೦೦ ದವರೆಗೆ ಆದಾಯ ಹೊಂದಿದವರಾಗಿದ್ದಾರೆ. ಪ್ರತಿಶತ ೨೬.೩೩ ಜನರು೨೦,೦೦೧ ರಿಂದ ೩೦,೦೦೦ ಆದಾಯ ಹೊಂದಿದವರಾಗಿದ್ದಾರೆ. ಈ ಮಾಹಿತಿಯನ್ನು ಅವಲೋಕಿಸಿದಾಗ ಪ್ರತಿಶತ ೬೧ ರಷ್ಟು ಜನರು ಹೆಚ್ಚಾಗಿ ೧೦.೦೦೧ ರಿಂದ ೨೦,೦೦೦ ಒಳಗಿನ ಆದಾಯದ ಮೂಲದವರಾಗಿರುತ್ತಾರೆ.

ಎಸ್‌ಜಿಎಸ್‌ಆರ್‌ವೈ ಫಲಾನುಭವಿಯಾದ ನಂತರ ಪ್ರತಿಶತ ೮೧.೩೩ ಜನರು ಕ್ರಮ ಸಂಖ್ಯೆ ೦೩ ರ ಆದಾಯ ಮೂಲವನ್ನು, ಪ್ರತಿಶತ ೧೨.೩೩ ಜನರು ಕ್ರಮ

ಸಂಖ್ಯೆ ೦೨ ರ ಆದಾಯದ ಮೂಲವನ್ನು, ಪ್ರತಿಶತ ೬.೩೩ ಜನರು ಕ್ರಮ ಸಂಖ್ಯೆ ೪ ರ ಆದಾಯದ ಮೂಲವನ್ನು ಹೊಂದಿದವರಾಗಿದ್ದಾರೆ. ಈ ಯೋಜನೆಯ ಫಲಾನುಭವಿಯಾಗುವ ಮೊದಲಿನ ವಾರ್ಷಿಕ ಆದಾಯಕ್ಕಿಂತ ಫಲಾನುಭವಿಯಾದ ನಂತರದಲ್ಲಿ ವಾರ್ಷಿಕ ಆದಾಯದಲ್ಲಿ ಬದಲಾವಣೆಗೊಂಡಿರುವುದು ಮೇಲಿನ ಕೋಷ್ಟಕದಿಂದ ಕಂಡು ಬಂದಿದೆ. ಆದಾಗ್ಯೂ ಖ್ಯಾತ ಅರ್ಥಶಾಸ್ತ್ರಜ್ಞರಾದ **ಅಮಾರ್ತ್ಯಸೇನ್ ರವರು "ಆರ್ಥಿಕ ಕಲ್ಯಾಣ"**ಕ್ಕೆ ಆದಾಯದ ಮೂಲ ಒಂದೇ ಕಾರಣವಾಗುವುದಿಲ್ಲ ಎಂಬ ಅಂಶವನ್ನು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

**೪.೮ ಬ್ಯಾಂಕ್‌ಉಳಿತಾಯ ಖಾತೆ ಹೊಂದಿದವರ ಸಂಖ್ಯೆಯಲ್ಲಿ ಆದ ಬದಲಾವಣೆ :**

ಉಳಿತಾಯದ ಹಣವನ್ನು ಸುರಕ್ಷಿತವಾಗಿಡಲು ಬ್ಯಾಂಕ್ ಖಾತೆ ಅವಶ್ಯಕ, ಈ ಹಿಂದೆ ಜನರು ಬ್ಯಾಂಕಿನ ಬಗ್ಗೆ ಮಾಹಿತಿ ಇರದೇ ಇದ್ದುದರಿಂದ ತಮ್ಮ ಉಳಿತಾಯದ ಹಣವನ್ನು ಮನೆಯಲ್ಲಿ, ಸಂಬಂಧಿಕರ ಹತ್ತಿರ, ಸ್ನೇಹಿತರ ಹತ್ತಿರ ಇಡುತ್ತಿದ್ದು, ಎಷ್ಟೋ ಬಾರಿ ಹಣವೇ ಮರಳಿ ಸಿಗದೇ ಹೋದ ನಿದರ್ಶನಗಳಿವೆ. ಇಂದು ಯಾವುದೇ ಯೋಜನೆಯ ಫಲಾನುಭವಿಯಾಗಬೇಕಾದರೆ ಮೊದಲು ಬ್ಯಾಂಕ್ ಖಾತೆ ಇರುವುದು ಕಡ್ಡಾಯವಾಗಿದೆ. ಯಾವುದೇ ಸರ್ಕಾರದ ಕಾರ್ಯಕ್ರಮದ ಫಲಾನುಭವಿಗಳಿಗೆ ಸರ್ಕಾರವು ಬ್ಯಾಂಕ್ ಮೂಲಕವೇ ಸಾಲ ಅಥವಾ ಸಹಾಯಧನ ನೀಡುತ್ತಿರುವುದರಿಂದ ಬ್ಯಾಂಕ್ ಖಾತೆ ಹೊಂದುವುದು ಅವಶ್ಯಕವಾಗಿದೆ ಹಾಗಾಗಿ ಕೋಷ್ಟಕ ೪.೮ ರಿಂದ ಫಲಾನುಭವಿಗಳು ಹೊಂದಿದ ಉಳಿತಾಯ ಬ್ಯಾಂಕ್ ಖಾತೆಯ ಅಂಕಿ ಸಂಖ್ಯೆಗಳನ್ನು ತಿಳಿಯಬಹುದಾಗಿದೆ.

**ಕೋಷ್ಟಕ– ೪.೮**

**ಫಲಾನುಭವಿಗಳು ಹೊಂದಿದ ಉಳಿತಾಯ ಬ್ಯಾಂಕ್ ಖಾತೆ ವಿವರ**

| ಕ್ರ.ಸಂ | ಉಳಿತಾಯ ಬ್ಯಾಂಕ್ ಖಾತೆ | | | |
|---|---|---|---|---|
| | ಮೊದಲು | ಪ್ರತಿಶತ | ನಂತರ | ಪ್ರತಿಶತ (%) |
| ೧ | ೧೯ | ೬.೩೩ | ೨೮೧ | ೯೩.೬೬ |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಎಸ್.ಜೆ.ಎಸ್.ಆರ್.ವೈ ಯೋಜನೆಯ ಫಲಾನುಭವಿಯಾಗುವ ಮೊದಲು ಪ್ರತಿಶತ ೬.೩೩ ಜನರು ಬ್ಯಾಂಕ್‌ನಲ್ಲಿ ಉಳಿತಾಯ ಖಾತೆಯನ್ನು ಹೊಂದಿದವರಾಗಿದ್ದಾರೆ, ಈ ಯೋಜನೆಯ ಫಲಾನುಭವಿಯಾದ ನಂತರ ೯೩.೬೬ ರಷ್ಟು ಜನರು ಉಳಿತಾಯ ಖಾತೆ ಹೊಂದಿರುವುದನ್ನು ಕಾಣಬಹುದಾಗಿದೆ. ನಗರದ ಅವಿದ್ಯಾವಂತ ಪುರುಷ ಮತ್ತು

ಮಹಿಳೆಯರು ಸಹ ಇಂದು ಬ್ಯಾಂಕ್ ಖಾತೆಯನ್ನು ಹೊಂದಿರುವುದನ್ನು ನೋಡುತ್ತೇವೆ, ಉದಾಹರಣೆಗೆ ಬ್ಯಾಂಕಿಗೆ ಹೋದ ಸಂದರ್ಭದಲ್ಲಿನ ಒಂದು ಅನುಭವದ ಪ್ರಕಾರ ಹಲವು ಸಲ ಅವಿದ್ಯಾವಂತ ಪುರುಷ/ಮಹಿಳೆಯರು ಸಹ ಬ್ಯಾಂಕಿನಲ್ಲಿ ನಗದು ತೆಗೆಯಲು ನಗದು ಚಲನ್ ಬರೆಸಿ ಕೊಂಡಿರುತ್ತಾರೆ ಹಾಗೂ ಬ್ಯಾಂಕ್ ಪಾಸ್ ಪುಸ್ತಕದಲ್ಲಿರುವ ಬಾಕಿ ಹಣದ ಬಗ್ಗೆ ಮಾಹಿತಿ ಪಡೆದುಕೊಂಡಿರುವುದು ಕಂಡು ಬಂದಿದೆ. ಆದಾಗ್ಯೂ ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಹಲವು ಕಾರ್ಯಕ್ರಮಗಳಲ್ಲಿ ಕೈಗೊಳ್ಳುವ ಉದ್ಯೋಗಗಳಲ್ಲಿ ಪಡೆಯುವ ಸಾಲ ಮತ್ತು ಸಹಾಯಧನ ಎಲ್ಲವೂ ಬ್ಯಾಂಕ್ ಮೂಲಕವೇ ನಡೆಯುವುದರಿಂದ ಬ್ಯಾಂಕ್ ಖಾತೆ ಹೊಂದುವುದು ಕಡ್ಡಾಯವಾದ್ದರಿಂದ ಶೇಕಡ ೯೩.೬೬ ಜನರು ಉಳಿತಾಯ ಖಾತೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಇದರಲ್ಲಿ ಮಹಿಳೆಯರು ತಮ್ಮ ಹೆಸರಿನಲ್ಲಿ ಹಾಗೂ ಸಂಘದ ಹೆಸರಿನಲ್ಲಿ ಹೆಚ್ಚಾಗಿ ಬ್ಯಾಂಕ್ ಖಾತೆ ಹೊಂದಿರುವುದು ಕಂಡು ಬಂದಿದೆ.

**೪.೯ ವಿವಿಧ ಕ್ಷೇತ್ರದಲ್ಲಾದ ಬದಲಾವಣೆ:**

ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ ಅಡಿಯಲ್ಲಿ ಉದ್ಯೋಗ ಮಾಡುತ್ತಿರುವ ವಿವಿಧ ರೀತಿಯ ಫಲಾನುಭವಿಗಳಿಗೆ ಸರ್ಕಾರದ ಈ ಯೋಜನೆಯಿಂದ ಆಗಿರುವ ಲಾಭಗಳನ್ನು ಈ ಕೆಳಗಿನಂತೆ ತಿಳಿಯಬಹುದಾಗಿದೆ.

- ಮನೆಗೆ ಬಣ್ಣವನ್ನು ಮಾಡಿಸಲು ಅನುಕೂಲವಾಯಿತು.
- ವಿದ್ಯುಚ್ಛಕ್ತಿಯನ್ನು ವೈರ್‌ನ್ನು ಒಪನ್ ಆಗಿ ಮನೆಯ ರೂಂ ಗಳಿಗೆ ಎಳೆದು ಕೊಂಡಿದ್ದೆವು ಈಗ ವೈರಿಂಗ್ ಮಾಡಿಸಿ ಕೊಳ್ಳಲಾಗಿದೆ.
- ಮನೆಗೆ ವಿದ್ಯುತ್ ಅಭಾವವನ್ನು ಅರಿತು ಸಬ್ಸಿಡಿಯಲ್ಲಿ ದೊರೆಯುವ ಸೋಲಾರ್ ಲ್ಯಾಟೀನ್ ಖರೀದಿಸಿಕೊಳ್ಳಲು ಅನುಕೂಲವಾಯಿತು.
- ಮನೆ/ಮಾಳಿಗೆಯನ್ನು ರಿಪೇರಿ ಮಾಡಿಸಿಕೊಳ್ಳುವುದಕ್ಕೆ ಅನುಕೂಲವಾಯಿತು.
- ಶೌಚಾಲಯವನ್ನು ಕಟ್ಟಿಸಿಕೊಳ್ಳಲು ಸಹಾಯಕವಾಯಿತು.
- ಗ್ಯಾಸ್ ಮತ್ತು ಒಲೆ ಕೊಳ್ಳಲು ಸಹಕಾರಿಯಾಗಿದೆ.
- ಕುಡಿಯುವ ನೀರಿನ ಸಂಪರ್ಕವಿಲ್ಲದೇ ಸಾರ್ವಜನಿಕ ನಲ್ಲಿಯಿಂದ ನೀರನ್ನು ತರುತ್ತಿದ್ದೆವು ಇದರಿಂದ ನಳ ಬಂದಾಗ ಮಕ್ಕಳಿಗೆ ಶಾಲೆಗೆ ಹೋಗಲು ಆಗುತ್ತಿರಲಿಲ್ಲ ನೀರನ್ನು ಸಂಗ್ರಹಿಸಲು ಗೈರುಹಾಜರಾತಿ ಮಾಡಲು ಹೇಳುತ್ತಿದ್ದೆವು, ಕುಟುಂಬದಲ್ಲಿ ಆದಾಯ ಗಳಿಸಿದ ನಂತರ ಕುಡಿಯುವ ನೀರಿನ ಸಂಪರ್ಕವನ್ನು ಪಡೆದು ಕೊಳ್ಳಲಾಯಿತು. ಈಗ ಮಕ್ಕಳಿಗೆ ಯಾವುದೇ ದಿನವೂ ಗೈರು ಹಾಜರಾಗದಂತೆ ನೋಡಿಕೊಳ್ಳುತ್ತಿದ್ದೇವೆ ಎಂದಿದ್ದಾರೆ.

- ಸಂಬಂಧಿಕರ ಪ್ರಮುಖ ಕಾರ್ಯಕ್ರಮಗಳಿಗೆ ಹೋಗಬೇಕೆಂದರೆ, ಮಾರುಕಟ್ಟೆಗೆ ಹೋಗುವ ಸಂದರ್ಭ ಬಂದಾಗ ಕುಡಿಯುವ ನೀರು ಬರುವ ಆತಂಕದಿಂದ ಜನರು ಇರುತ್ತಿದ್ದುದು ಕಂಡು ಬಂದಿದೆ. ಪ್ರಸ್ತುತ ಯೋಜನೆಯಲ್ಲಿ ಉದ್ಯೋಗ ಕೈಗೊಂಡು ಆದಾಯದ ಮೂಲ ಹೆಚ್ಚಿದ ನಂತರ ನಳ ಸಂಪರ್ಕ ಪಡೆದುಕೊಂಡಿರುವುದು ಕಂಡು ಬಂದಿದೆ.
- ಯೋಜನೆಯಲ್ಲಿ ಉದ್ಯೋಗ ಕೈಗೊಂಡ ನಂತರ ಬಂದ ಆದಾಯದಲ್ಲಿ ಮನೆಯ ಅಗತ್ಯ ವಸ್ತುಗಳಾದ ಮಿಕ್ಸಿ ಖರೀದಿ, ಅಲ್ಮೆರಾ, ಅಗತ್ಯ ಪೀಠೋಪಕರಣಗಳು, ಮಕ್ಕಳಿಗೆ ಸೈಕಲ್ ಇತ್ಯಾದಿ ವಸ್ತುಗಳನ್ನು ಪಡೆದುಕೊಳ್ಳಲು ಅನುಕೂಲಕರವಾಗಿರುವುದು ಕಂಡು ಬಂದಿದೆ.
- ಸ್ವಯಂ ಉದ್ಯೋಗದ ಅಡಿಯಲ್ಲಿ ಕೈಗೊಂಡಿರುವ ಉದ್ಯೋಗದ ಜೊತೆಗೆ ಫಲಾನುಭವಿಗಳು ಉಪ ಕಸುಬುಗಳಾದ ಕೋಳಿ ಸಾಕಾಣಿಕೆ, ಉಪ್ಪಿನಕಾಯಿ ತಯಾರಿಕೆ, ಹಪ್ಪಳ ತಯಾರಿಕೆ, ಕಾಗದದ ಬ್ಯಾಗ್ ತಯಾರಿಕೆಗೆ ಬಂಡವಾಳ ಹಾಕಲು ಸಹಾಯಕವಾಗಿರುವುದು ಕಂಡು ಬಂದಿದೆ.
- ಬ್ಯಾಂಕ್‌ನೊಂದಿಗೆ ಜನರು ಹೆಚ್ಚು ಸಂಪರ್ಕ ಸಾಧಿಸಲು ಅನುಕೂಲವಾಗಿರುವುದು ಈ ಅಧ್ಯಯನದಿಂದ ಕಂಡು ಬಂದಿದೆ.
- ಮಕ್ಕಳ ಶಿಕ್ಷಣಕ್ಕೆ ಪುಸ್ತಕ, ಬಟ್ಟೆ, ಶಾಲಾ-ಕಾಲೇಜು ಶುಲ್ಕ ಇತ್ಯಾದಿಗಳಿಗೆ ಅನುಕೂಲಕರವಾಗಿರುವುದು ಕಂಡುಬಂದಿದೆ.
- ಮಕ್ಕಳ ಮದುವೆಗೆ ಆಭರಣ ಮಾಡಿಸಲು ಮತ್ತು ಮದುವೆ ವೆಚ್ಚಕ್ಕಾಗಿ ಖಾಸಗಿ ಸಾಲ ಪಡೆಯುವುದು ತಪ್ಪಿತು.

**೪.೧೦. ತರಬೇತಿ ಕ್ಷೇತ್ರದಲ್ಲಾಗಿರುವ ಬದಲಾವಣೆ :**

ಪ್ರಸ್ತುತ ಹುಬ್ಬಳ್ಳಿ-ಧಾರವಾಡ ಮಹಾನಗರದಲ್ಲಿ ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿಯಲ್ಲಿ ಹಮ್ಮಿಕೊಂಡಿರುವ ತರಬೇತಿಗಳನ್ನು (ಮಕ್ಕಳಿಗೆ /ಫಲಾನುಭವಿಗಳಿಗೆ) ಹಾಗೂ ಈ ತರಬೇತಿಗಳಿಗೆ ಜನರು ಹಾಜರಾಗಿ ಅದರಿಂದ ಪ್ರಯೋಜನವಾಗಿದೆಯೇ ಎಂಬುದನ್ನು ತಿಳಿದು ಕೊಳ್ಳಲು ಪ್ರಯತ್ನಿಸಿ ಮಾಹಿತಿಯನ್ನು ಕಲೆಹಾಕಲಾಯಿತು. ಕೋಷ್ಟಕ ೪.೯ ರಲ್ಲಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಈ ಯೋಜನೆ ಅಡಿಯಲ್ಲಿ ವಿವಿಧ ತರಬೇತಿಗಳನ್ನು ಪಡೆದ ನಂತರ ತರಬೇತಿ ಪಡೆದ ಎಲ್ಲರೂ ಉದ್ಯೋಗ ಕೈಗೊಂಡಿರುವುದಿಲ್ಲ ಮತ್ತು ಕೆಲಸ ಸಿಕ್ಕಿರುವುದಿಲ್ಲ. ಪ್ರತಿಶತ ೨೪.೩೩ ರಷ್ಟು ಜನರು ತರಬೇತಿಯನ್ನು ಪಡೆದ ನಂತರ ಉದ್ಯೋಗ ಕೈಗೊಂಡಿರುವುದು ಮತ್ತು ಕೆಲಸ ಸಿಕ್ಕಿರುವುದು ಕಂಡು ಬಂದಿದೆ. ಪ್ರತಿಶತ ೭೫.೬೬ ರಷ್ಟು ಜನರು ತರಬೇತಿಯನ್ನು ಪಡೆದ ನಂತರ ಯಾವುದೇ ಉದ್ಯೋಗವನ್ನು ಮಾಡದೇ ಇರುವುದು ಕಂಡು ಬಂದಿದೆ.

ಈ ಯೋಜನೆಯಲ್ಲಿ ತರಬೇತಿಗಳನ್ನು ಏರ್ಪಡಿಸುತ್ತಿರುವ ಬಗ್ಗೆ ಫಲಾನುಭವಿಗಳ ಸಲಹೆಗಳನ್ನು ಕೇಳಲಾಯಿತು. ಮಾಹಿತಿದಾರರು ನೀಡಿದ ಸಲಹೆಗಳನ್ನು ಕೋಷ್ಟಕ ೪.೧೨ ರಲ್ಲಿ ಪಟ್ಟಿ ಮಾಡಲಾಗಿದೆ.

**ಕೋಷ್ಟಕ–೪.೧೨**

**ಮಾಹಿತಿದಾರರು ನೀಡಿದ ಸಲಹೆಗಳು**

| ಕ್ರಮ ಸಂ | ಸಲಹೆಗಳು | ಒಟ್ಟು ಜನರು | ಪ್ರತಿಶತ |
|---|---|---|---|
| ೦೧ | ತರಬೇತಿಯು ಮುಗಿದ ನಂತರ ತಕ್ಷಣವೇ ಕೈಗಾರಿಕೆಗಳಲ್ಲಿ/ ಸಂಸ್ಥೆಗಳಲ್ಲಿ ಉದ್ಯೋಗವಕಾಶವನ್ನು ಕಲ್ಪಿಸಲು ವ್ಯವಸ್ಥೆ ಮಾಡಬೇಕು | ೫೩ | ೧೭.೬೬ |
| ೦೨ | ಐ.ಇ.ಸಿ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿ ಯಾಗದಿರುವ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು, ಪರಿಣಾಮಕಾರಿ ಜಾರಿಗೆ ಒತ್ತಾಯಿಸಿದ್ದಾರೆ | ೧೮೮ | ೬೨.೬೬ |
| ೦೩ | ಸ್ವಯಂಉದ್ಯೋಗವನ್ನು ಕೈಗೊಳ್ಳುವ ತರಬೇತಿಯನ್ನು ನೀಡಿದ ನಂತರ ಬೇಗನೆ ಸಾಲ ಸೌಲಭ್ಯ ಪಡೆದು ಕೊಳ್ಳಲು ಸಹಾಯ ಒದಗಿಸುವುದು. | ೨೧ | ೭.೦೦ |
| ೦೪ | ಸಮುದಾಯ ಅಭಿವೃದ್ಧಿ ಘಟಕವು ಬೇಗನೆ ತರಬೇತಿ ಮುಗಿಸಿದ ಮಕ್ಕಳಿಗೆ ಸೇವಾವಲಯದಲ್ಲಿ ಇರುವ ವಿವಿಧ ಅವಕಾಶಗಳನ್ನು ತಿಳಿಸಬೇಕು. | ೩೮ | ೧೨.೬೬ |
| | ಒಟ್ಟು | ೩೦೦ | ೧೦೦ |

ಮೇಲಿನ ಕೋಷ್ಟಕವನ್ನು ಅವಲೋಕಿಸಿದಾಗ ಪ್ರತಿಶತ ೬೨.೬೬ ಜನರು ಐಇಸಿ ಕಾರ್ಯಕ್ರಮವನ್ನು (ಪ್ರಚಾರ ಕಾರ್ಯ) ವನ್ನು ಇನ್ನೂ ಹೆಚ್ಚಾಗಿ ಹಮ್ಮಿಕೊಂಡು ತಿಳುವಳಿಕೆ ನೀಡಬೇಕೆಂದಿದ್ದಾರೆ. ಪ್ರತಿಶತ ೧೭.೬೬ ರಷ್ಟು ಜನರು

ತರಬೇತಿ ನಂತರ ತಕ್ಷಣವೇ ಉದ್ಯೋಗವಕಾಶವನ್ನು ಕಲ್ಪಿಸಬೇಕು ಎಂದು ಹೇಳಿರುವುದು ಕಂಡು ಬಂದಿದೆ. ಪ್ರತಿಶತ ೦೭ ರಷ್ಟು ಜನರು ತಕ್ಷಣವೇ ಸಾಲ ಸೌಲಭ್ಯ ಒದಗಿಸಬೇಕು ಎಂದರೆ, ಪ್ರತಿಶತ ೧೨.೬೬ ರಷ್ಟು ಜನರು ಸೇವಾ ವಲಯದಲ್ಲಿ ಇರುವ ಅವಕಾಶಗಳನ್ನು ತಿಳಿಸಿಕೊಡಬೇಕು ಎಂದು ಹೇಳಿರುವುದು ಕಂಡು ಬಂದಿದೆ. ಈ ತರಬೇತಿ ಕಾರ್ಯಕ್ರಮವು **ಪಿ.ಎ. ಸಾರೋಕಿನ್ ರವರು** ಪ್ರತಿಪಾದಿಸಿರುವ ಲಂಬಾಂತರ ಸಂಚಲನಾ ಸಿದ್ಧಾಂತದ ಪ್ರಕಾರ ಅಧೋಮುಖ (ಅವರೋಹಣ ಸ್ಥಿತಿ) ಬೆಳವಣಿಗೆಯಾಗಿರುವುದನ್ನು ಕಾಣುತ್ತೇವೆ.

### ೪.೧೧. ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಕರ್ನಾಟಕದಲ್ಲಿ ಸಾಧಿಸಿರುವ ಪ್ರಗತಿಯ ಅಂಕಿ-ಅಂಶಗಳು:

ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ ಅಡಿಯಲ್ಲಿ ೧೯೯೭ ರಿಂದ ೨೦೦೯ ರವರೆಗೆ ಅಂದರೆ ಯೋಜನೆಯು ಜಾರಿಗೆ ಬಂದ ವರ್ಷದಿಂದ ೨೦೦೯ ರವರೆಗೆ ಸಾಧಿಸಿರುವ ಪ್ರಗತಿಯನ್ನು ನೋಡಬಹುದಾಗಿದೆ.

| | | |
|---|---|---|
| ಒಟ್ಟು ಗುರುತಿಸಲಾದ ಬಿಪಿಎಲ್ ಕುಟುಂಬಗಳ ಸಂಖ್ಯೆ | = | ೯,೧೦,೭೨೫ |
| ಒಟ್ಟು ಗುರುತಿಸಲಾದ ಬಿಪಿಎಲ್ ಕುಟುಂಬಗಳ ಜನಸಂಖ್ಯೆ | = | ೪೫,೫೩,೬೨೫ |
| ಒಟ್ಟು ನೆರೆ-ಹೊರೆ ಗುಂಪುಗಳ ರಚನೆ | = | ೨೬,೬೩೫ |
| ಒಟ್ಟು ನೆರೆ-ಹೊರೆ ಸಮಿತಿಗಳ ರಚನೆ | = | ೨೨೬ |
| ಒಟ್ಟು ಬಿಡುಗಡೆಯಾದ ಮೊತ್ತ | = | ೨೮೧,೮೭ ಕೋಟಿ |
| ಒಟ್ಟು ಖರ್ಚಾದ ಹಣ | = | ೨೧೩,೭೫ ಕೋಟಿ |

ಎಸ್.ಜೆ.ಎಸ್.ಆರ್.ವೈ ಯೋಜನೆಯು ಪ್ರಾರಂಭದಿಂದ ೧೯೯೭ ರಿಂದ ೨೦೦೯ ರವರೆಗೆ ಸಾಧಿಸಿರುವ ಪ್ರಗತಿಯನ್ನು ಮೇಲಿನ ಅಂಕಿ ಸಂಖ್ಯೆಗಳಿಂದ ತಿಳಿದುಕೊಳ್ಳಲಾಯಿತು. ಈ ಯೋಜನೆಯಲ್ಲಿನ ಕಾರ್ಯಕ್ರಮಗಳ ಪ್ರಗತಿಯನ್ನು ಈ ಕೆಳಗಿನಂತೆ ನೋಡಬಹುದು.

**ಸಣ್ಣ ಉದ್ಯಮ ಸ್ಥಾಪನೆ ಮೂಲಕ ಸ್ವಯಂ ಉದ್ಯೋಗ :**

ಒಟ್ಟು ಗುರುತಿಸಲಾದ ಫಲಾನುಭವಿಗಳ ಸಂಖ್ಯೆ : ೬೮,೬೭೪

ಒಟ್ಟು ಫಲಾನುಭವಿಗಳಿಗೆ ಬಿಡುಗಡೆಯಾದ ಸಾಲ : ೫೮,೭೨೮

ಬಿಡುಗಡೆಯಾದ ಸಹಾಯಧನ : ೩೧,೪೮ ಕೋಟಿ

**ನಗರ ಪ್ರದೇಶದಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ :**

ಮಹಿಳಾ ಗುಂಪು ಉದ್ಯೋಗಗಳಿಗೆ ಸಾಲದ ಮೊತ್ತ : ೩೬೫೬ ಕೋಟಿ

ಬಿಡುಗಡೆಯಾದ ಸಹಾಯಧನದ ಮೊತ್ತ : ೨೮,೬೫ ಕೋಟಿ

**ತರಬೇತಿ ಕಾರ್ಯಕ್ರಮ :**

ತರಬೇತಿಯನ್ನು ಪಡೆದ ಫಲಾನುಭವಿಗಳ ಸಂಖ್ಯೆ : ೯೦೨೫

ಬಿಡುಗಡೆಯಾದ ಮೊತ್ತ : ೨೧.೦೪ ಕೋಟಿ

**ಥ್ರಿಫ್ಟ್ ಮತ್ತು ಕ್ರೆಡಿಟ್ ಸೊಸೈಟಿ :**

ಒಟ್ಟು ಗುಂಪುಗಳ ರಚನೆ : ೩೩,೫೯೬
ಗುಂಪುಗಳಿಂದಾಗ ಒಟ್ಟು ಉಳಿತಾಯ : ೭೦.೨೮ ಕೋಟಿ
ಬಿಡುಗಡೆಯಾದ ಸುತ್ತು ನಿಧಿ : ೧೮.೫೯ ಕೋಟಿ
ಉಪಯೋಗಿಸಿದ ನಿಧಿ : ೭೩.೮೭ ಕೋಟಿ

**ವೇತನಾಧಾರಿತ ಮಂಜೂರಿ ಉದ್ಯೋಗ :**

ಸೃಷ್ಟಿಸಿದ ಮಾನವ ದಿನಗಳ ಸಂಖ್ಯೆ : ೩೯.೨೮ ಲಕ್ಷ
ಬಿಡುಗಡೆಯಾದ ಮೊತ್ತ : ೨೮.೮೦ ಕೋಟಿ.

**ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರದ ಪ್ರಗತಿಯ ಅಂಕಿ ಅಂಶಗಳು :**

೧೯೯೮ -೧೯೯೯ ರಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯ ಅಡಿಯಲ್ಲಿ ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳ ಸಮೀಕ್ಷೆಯನ್ನು ಮಾಡಿದಾಗ ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ

ಒಟ್ಟು ಬಿಪಿಎಲ್ ಕುಟುಂಬಗಳ ಸಂಖ್ಯೆ : ೪೯,೬೯೩

ಒಟ್ಟು ಬಿಪಿಎಲ್ ಜನಸಂಖ್ಯೆಯ ಪ್ರಮಾಣ : ೨,೪೭,೯೧೮

ಹುಬ್ಬಳ್ಳಿಯಲ್ಲಿರುವ ಬಿಪಿಎಲ್ ಕುಟುಂಬಗಳ ಸಂಖ್ಯೆ : ೩೦,೯೦೫

ಧಾರವಾಡದಲ್ಲಿರುವ ಬಿಪಿಎಲ್ ಕುಟುಂಬಗಳ ಸಂಖ್ಯೆ : ೧೮,೭೮೮

**ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆ ಅಡಿಯಲ್ಲಿ ಇರುವ ಸಮುದಾಯ ಅಭಿವೃದ್ಧಿ ಸಂಘಗಳ ಸಂಖ್ಯೆ :**

ಹುಬ್ಬಳ್ಳಿ- ೦೧, ಧಾರವಾಡ- ೦೧

**ಈ ಯೋಜನೆ ಅಡಿಯಲ್ಲಿ ರಚಿತವಾಗಿರುವ ನೆರೆಹೊರೆ ಗುಂಪುಗಳ ಸಂಖ್ಯೆ:**

ಹುಬ್ಬಳ್ಳಿಯಲ್ಲಿರುವ ನೆರೆಹೊರೆ ಗುಂಪುಗಳ ಸಂಖ್ಯೆ : ೮೨೦
ಧಾರವಾಡದಲ್ಲಿರುವ ನೆರೆಹೊರೆ ಗುಂಪುಗಳ ಸಂಖ್ಯೆ : ೮೬
**ಒಟ್ಟು ಸಂಖ್ಯೆ : ೧೬೮೨**

**ಈ ಯೋಜನೆ ಅಡಿಯಲ್ಲಿ ರಚಿತವಾಗಿರುವ ನೆರೆಹೊರೆ ಸಮಿತಿಗಳ ಸಂಖ್ಯೆ:**

ಹುಬ್ಬಳ್ಳಿಯಲ್ಲಿರುವ ನೆರೆಹೊರೆ ಸಮಿತಿಗಳ ಸಂಖ್ಯೆ : ೯೦
ಧಾರವಾಡದಲ್ಲಿರುವ ನೆರೆಹೊರೆ ಸಮಿತಿಗಳ ಸಂಖ್ಯೆ : ೮೦
ಒಟ್ಟು ಸಂಖ್ಯೆ : ೧೭೦

**ಈ ಯೋಜನೆಯ ಅಡಿಯಲ್ಲಿ ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ರಚಿತವಾಗಿರುವ ಸಾಂಘಿಕ ವ್ಯವಸ್ಥೆ ಅಡಿಯಲ್ಲಿ ಇರುವ ಒಟ್ಟು ಸದಸ್ಯರ ಸಂಖ್ಯೆ :**

ಹುಬ್ಬಳ್ಳಿ ಯಲ್ಲಿರುವ ಒಟ್ಟು ಸದಸ್ಯರ ಸಂಖ್ಯೆ : ೩೧,೪೨೦
ಧಾರವಾಡದಲ್ಲಿರುವ ಒಟ್ಟು ಸದಸ್ಯರ ಸಂಖ್ಯೆ : ೧೮,೭೮೮
ಒಟ್ಟು ಸದಸ್ಯರ ಸಂಖ್ಯೆ : ೫೦,೨೦೮

**ಈ ಯೋಜನೆಯ ಅಡಿಯಲ್ಲಿ ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ರಚಿತವಾಗಿರುವ ಒಟ್ಟು ಸ್ವ ಸಹಾಯ ಸಂಘಗಳ ಸಂಖ್ಯೆ:**

ಹುಬ್ಬಳ್ಳಿಯಲ್ಲಿ ರಚಿತವಾಗಿರುವ ಸ್ವ ಸಹಾಯ ಸಂಘಗಳ ಸಂಖ್ಯೆ : ೪೩೭
ಧಾರವಾಡದಲ್ಲಿ ರಚಿತವಾಗಿರುವ ಸ್ವ ಸಹಾಯ ಸಂಘಗಳ ಸಂಖ್ಯೆ : ೩೧೩
ಒಟ್ಟು ಸ್ವ ಸಹಾಯ ಸಂಘಗಳ ಸಂಖ್ಯೆ (ಹು–ಧಾ) : ೭೫೦
ಸುತ್ತು ನಿಧಿ ಪಡೆದಿರುವ ಸಂಘಗಳ ಸಂಖ್ಯೆ (ಹು–ಧಾ) : ೨೧೪
ಬ್ಯಾಂಕ್ ಲಿಂಕೇಜ್ ಆಗಿರುವ ಸಂಖ್ಯೆ (ಹು–ಧಾ) : ೫೦೦

**ಈ ಯೋಜನೆಯ ಅಡಿಯಲ್ಲಿ ಹುಬ್ಬಳ್ಳಿ–ಧಾರವಾಡದಲ್ಲಿರುವ ಸಣ್ಣ ಉದ್ದಿಮೆಗಳ ಸಂಖ್ಯೆ:**

ಹುಬ್ಬಳ್ಳಿಯಲ್ಲಿರುವ ಸಂಖ್ಯೆ : ೬೭೯
ಧಾರವಾಡದಲ್ಲಿರುವ ಸಂಖ್ಯೆ : ೪೦೦

**ಒಟ್ಟು ಸಂಖ್ಯೆ: ೧೦೭೯**

**ಈ ಯೋಜನೆಯ ಅಡಿಯಲ್ಲಿ ಹುಬ್ಬಳ್ಳಿ–ಧಾರವಾಡದಲ್ಲಿರುವ ಗುಂಪು ಉದ್ದಿಮೆಗಳ ಸಂಖ್ಯೆ :**

ಹುಬ್ಬಳ್ಳಿ : ೬೩, ಧಾರವಾಡ : ೨೦.

ಮನು ಮಹಿಳೆಯು ಕುಟುಂಬದ ಜವಾಬ್ದಾರಿಯನ್ನು ಅಂದರೆ ಮಕ್ಕಳನ್ನು ಸಾಕಿ ಸಲುವುದೇ ಅವಳ ಕೆಲಸ ಎಂದು ವೇದಗಳ ನಂತರದ ಕಾಲದಲ್ಲಿ ಕರೆಯುತ್ತಿದ್ದ ಕಾಲವಿತ್ತು. ಆದರೆ ಇಂದಿನ ಆಧುನ್ಕಿಕ ಯುಗದಲ್ಲಿ ಪ್ರತಿಯೊಂದು ರಂಗದಲ್ಲಿಯೂ ಸಹ ಮಹಿಳೆಯು ತನ್ನದೇ ಆದ ಕ್ಷೇತ್ರದಲ್ಲಿ ಸ್ವಾವಲಂಬಿಯಾಗುತ್ತಿರುವುದು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ. ಮನು ಮಹಿಳೆಯನ್ನು ಅಸಮರ್ಥಳು ಮಹಿಳೆಯು ಶಿಕ್ಷಣ ಪಡೆದು ಸ್ವಾವಲಂಬಿಯಾಗಲು ಸಾಧ್ಯವಿಲ್ಲ ಎಂಬಂತೆ ಬಿಂಬಿಸಿದ್ದನ್ನು ಇಂದಿನ ಸಮಾಜ ಮತ್ತು ಈ ಅಧ್ಯಯನದಿಂದ ಕಂಡು ಕೊಂಡ ಫಲಿತಾಂಶವನ್ನು ಮತ್ತು ಯೋಜನೆಯಿಂದ ಸಾಧಿಸಿರುವ ಪ್ರಗತಿಯನ್ನು ನೋಡಿದಾಗ ಒಪ್ಪಲು ಸಾಧ್ಯವಿಲ್ಲವೆಂಬುದನ್ನು ಈ ಅಧ್ಯಯನದಿಂದ ತಿಳಿದು ಕೊಳ್ಳಲಾಗಿದೆ.

ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆ ಭಾರತ ಸರ್ಕಾರದ ಯೋಜನೆಯಾಗಿದ್ದು, ಇದು ಆಯಾ ರಾಜ್ಯಗಳಿಗೆ ಅನುಸಾರವಾಗಿ ನಿಗದಿತ

ಗುರಿಯನ್ನು ನಿಗದಿಪಡಿಸುತ್ತಾ ಕಾರ್ಯಕ್ರಮ ಯಶಸ್ವಿಗೆ ವಸತಿ ಮತ್ತು ನಗರ ಬಡತನ ನಿರ್ಮೂಲನಾ ಸಚಿವಾಲಯ ಇದರ ಮೇಲುಸ್ತುವಾರಿ ನೋಡಿಕೊಳ್ಳುತ್ತಿದೆ. ಸರ್ಕಾರವು ಸಮೀಕ್ಷಾ ಕಾರ್ಯದ ಮೂಲಕ ಕಾಲಕಾಲಕ್ಕೆ ಮಾಡುವ ಮೌಲ್ಯಮಾಪನದ ವರದಿಯಿಂದ ಈ ಕಾರ್ಯಕ್ರಮಗಳಿಂದ ಜನರಿಗೆ ಆಗಿರುವ ಅನುಕೂಲತೆಗಳು/ಲಾಭಗಳು, ಅವರ ಬೇಡಿಕೆಗಳು, ಸಮಾಜದಲ್ಲಾಗಿರುವ ಪ್ರತ್ಯಕ್ಷ ಹಾಗೂ ಪರೋಕ್ಷ ಬದಲಾವಣೆಗಳನ್ನು ಪರಿಶೀಲಿಸಿ ೨೦೦೯ ಏಪ್ರಿಲ್ ನಿಂದ ಜಾರಿಗೆ ಬರುವಂತೆ ಜನರಿಗೆ ದೊರಕಬೇಕಾದ ಸಹಾಯಧನ, ಸಾಲ ಸೌಲಭ್ಯ, ತರಬೇತಿ ಇತ್ಯಾದಿ ಹಲವಾರು ಬದಲಾವಣೆಗಳನ್ನು ಈ ಯೋಜನೆಯಲ್ಲಿ ಮಾಡಿರುವುದನ್ನು ಕಾಣುತ್ತೇವೆ.

**೪.೧೨. ಯೋಜನೆಯ ಸಹಾಯಧನ ಮತ್ತು ಸಾಲ ನೀಡುವಲ್ಲಿ ಸರ್ಕಾರದಿಂದ ಉಂಟಾದ ಬದಲಾವಣೆ:**

**ಯುಎಸ್‌ಇಪಿ** : ನಗರ ಸ್ವಯಂ ಉದ್ಯೋಗ ಕಾರ್ಯಕ್ರಮದಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆ ಅಡಿಯಲ್ಲಿ, ಯೋಜನೆಯ ಪ್ರಾರಂಭದಲ್ಲಿ ಪ್ರತಿ ಉದ್ಯಮದ ಗರಿಷ್ಠ ಘಟಕ ವೆಚ್ಚ ರೂ. ೫೦,೦೦೦/- ರೂ ಗಳಿದ್ದು ಇದರಲ್ಲಿ ಗರಿಷ್ಠ ಮಿತಿ ರೂ. ೭೫೦೦/- ರೂ ಗೆ ಒಳಪಡಿಸಿ ಘಟಕ ವೆಚ್ಚದ ಶೇಕಡಾ ೧೫ ರಷ್ಟು ಹಣವನ್ನು ಸಹಾಯಾನುದಾನ (ಸಬ್ಸಿಡಿ) ವಾಗಿ ನೀಡಲಾಗುತ್ತಿತ್ತು ಮತ್ತು ಯೋಜನಾ ವೆಚ್ಚದ ಶೇಕಡಾ ೫ ರಷ್ಟು ಹಣವನ್ನು ಪ್ರತಿಯೊಂದು ಫಲಾನುಭವಿಯ ಸ್ವಂತ ಮೂಲಗಳಿಂದ ಮಾರ್ಜಿನ್ ಹಣವನ್ನಾಗಿ ಸಲ್ಲಿಸಬೇಕಾಗಿತ್ತು. ಯೋಜನೆಯ ಫಲಾನುಭವಿಗಳ ಬೇಡಿಕೆ ಮತ್ತು ಸರ್ಕಾರವು ಕಾಲಕಾಲಕ್ಕೆ ಸಂಗ್ರಹಿಸುವ ಸಮೀಕ್ಷಾ ಕಾರ್ಯ, ಅದರಿಂದ ಬರುವ ಸಲಹೆ ಸೂಚನೆಗಳನ್ನು ಮೌಲ್ಯಮಾಪನ ಮಾಡಿ ಸಹಾಯಧನದಲ್ಲಿ ಹೆಚ್ಚಳವನ್ನು ಮಾಡಿದೆ. ೨೦೦೯ರ ಎಪ್ರಿಲ್‌ನಿಂದ ಸಾಲ ಮತ್ತು ಸಬ್ಸಿಡಿಯಲ್ಲಿ ಬದಲಾವಣೆಯನ್ನು ಮಾಡಿದೆ.

ವ್ಯಕ್ತಿಯ ಸ್ವಯಂ ಉದ್ಯೋಗ ಕಾರ್ಯಕ್ರಮದಲ್ಲಿ ಹೊಸ ಬದಲಾವಣೆಯಂತೆ ಪ್ರತಿ ಉದ್ಯಮದ ಗರಿಷ್ಠ ಘಟಕ ವೆಚ್ಚ ರೂ. ೨,೦೦,೦೦೦/- ರೂಪಾಯಿಗಳಾಗಿದ್ದು, ಇದರಲ್ಲಿ ಗರಿಷ್ಠಮಿತಿ ರೂ. ೫೦,೦೦೦/- ರೂ ಗೆ ಒಳಪಡಿಸಿ ಘಟಕ ವೆಚ್ಚದ ಶೇಕಡಾ ೨೫ ರಷ್ಟು ಸಹಾಯಧನ, ಶೇಕಡ ೫ ರಷ್ಟು ಹಣವನ್ನು ಪ್ರತಿಯೊಬ್ಬ ಫಲಾನುಭವಿಯು ಸ್ವಂತ ಮೂಲಗಳಿಂದ ಮಾರ್ಜಿನ್ ಹಣವನ್ನಾಗಿ ನೀಡಬೇಕಾಗಿ ಬದಲಾವಣೆ ಯಾಗಿದೆ. ಬ್ಯಾಂಕ್ ಯೋಜನಾ ವೆಚ್ಚದ ಶೇಕಡ ೭೦% ರಷ್ಟನ್ನು ಸಾಲದ ರೂಪದಲ್ಲಿ ನೀಡುತ್ತದೆ.

**ನಗರ ಪ್ರದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ:** ಈ ಯೋಜನೆಯ ಪ್ರಾರಂಭದಲ್ಲಿ ಉದ್ಯಮ ಕೈಗೊಳ್ಳುವವರಿಗೆ ರೂ. ೧,೨೫,೦೦೦/- ರೂಪಾಯಿಗಳು ಅಥವಾ ಯೋಜನಾ ಮೊತ್ತದ ಶೇಕಡಾ ೫೦% ರಷ್ಟು ಹಣ ಇವೆರಡರಲ್ಲಿ ಯಾವುದು ಕನಿಷ್ಠವೋ ಆ ಮೊತ್ತವನ್ನು ಸಹಾಯ ಧನವಾಗಿ ನೀಡಲಾಗುತ್ತಿತ್ತು.

ಹೊಸ ಕಾರ್ಯ ಸೂಚಿಯ ಪ್ರಕಾರ ಉದ್ಯಮ ಕೈಗೊಳ್ಳಲು ಸಾಲ ಪಡೆಯಲು ಗರಿಷ್ಠ ಮಿತಿಯನ್ನು ವಿಧಿಸಿರುವುದಿಲ್ಲ. ಆಯಾ ಗುಂಪಿನ ಸೈಜಿಗೆ (ಸಂಖ್ಯೆಗೆ) ಅನುಗುಣವಾಗಿ ಇರುತ್ತದೆ. ರೂ. ೩,೦೦,೦೦೦/- ರೂಪಾಯಿಗಳು ಅಥವಾ ಯೋಜನಾ ಮೊತ್ತದ ಶೇ. ೩೫% ರಷ್ಟು ಹಣವನ್ನು ಸಹಾಯಧನವಾಗಿ ಅಥವಾ ಪ್ರತಿ ವ್ಯಕ್ತಿಗೆ ರೂ ೬೦,೦೦೦ ರಂತೆ ನೀಡಲಾಗಿದೆ. ಯೋಜನಾ ವೆಚ್ಚದ ಶೇ.೫% ರಷ್ಟು ಮೊತ್ತವನ್ನು ಮಾರ್ಜಿನ್ ಹಣವನ್ನಾಗಿ ನೀಡಬೇಕಾಗುತ್ತದೆ.

**ಮಹಿಳಾ ಸ್ವಸಹಾಯ ಸಂಘ:** ಥ್ರಿಫ್ಟ್ ಮತ್ತು ಕ್ರೆಡಿಟ್ ಸೊಸೈಟಿಯಯಾಗಿ ಕಾರ್ಯನಿರ್ವಹಿಸಿದರೆ ಪ್ರತಿ ಸದಸ್ಯರಿಗೆ ಗರಿಷ್ಠ ಮಿತಿ ೧,೦೦೦ ರೂಪಾಯಿಗಳಿಗೆ ಒಳಪಟ್ಟು ೨೫,೦೦೦ ರೂಗಳ ಒಟ್ಟು ಅನುದಾನ ಹಣವು ರಿವಾಲ್ವಿಂಗ್ ಫಂಡ್ ರೂಪಾಯಿದಲ್ಲಿ ಈ ಹಿಂದೆ ಲಭ್ಯವಾಗುತ್ತಿತ್ತು.

ಪ್ರಸ್ತುತ ಪ್ರತಿ ಸದಸ್ಯರಿಗೆ ೨೦೦೦/- ರೂ ಗಳಂತೆ ಗರಿಷ್ಠ ಮಿತಿ ೨೫,೦೦೦/- ಕ್ಕೆ ಒಳಪಟ್ಟಿರುತ್ತದೆ. ಹಾಗೆಯೇ ಈ ಯೋಜನೆಯಲ್ಲಿ ಪ್ರತಿ ತಿಂಗಳಿಗೆ ರೂ ೫೦೦/- ಅಥವಾ ರೂ ೭೫೦/- ರಂತೆ ಪ್ರತಿ ತಿಂಗಳಿಗೆ ಪ್ರತಿ ಸದಸ್ಯರು ಒಂದು ವರ್ಷದವರೆಗೆ ಫಿಕ್ಸೆಡ್ ಡಿಪಾಸಿಟ್ ಮಾಡಿದರೆ ಈ ಮೊತ್ತದಲ್ಲಿ ರೂ.೩೦ ಅಥವಾ ೬೦ ರಂತೆ ಅವರ ಹೆಸರಿನಲ್ಲಿ ವಿಮೆಗೆ ೩೦ ರೂಪಾಯಿಗಳನ್ನು ಮತ್ತು ಉಳಿದ ೩೦ ರೂ ಗಳನ್ನು ಗಂಡನ ಆರೋಗ್ಯ/ ಜೀವನ/ ಅಪಘಾತ ಅಥವಾ ಇತರೆ ವಿಮಾ ಯೋಜನೆ ಕಟ್ಟಲು ಅಥವಾ ಅವರ ಕುಟುಂಬದ ಯಾವುದೇ ಅಪ್ರಾಪ್ತ ವಯಸ್ಸಿನ ಹೆಣ್ಣು ಮಗುವಿನ ಆರೋಗ್ಯ/ಅಪಘಾತ ವಿಮೆಗೆ ನೀಡಲಾಗುತ್ತದೆ.

**ಕೌಶಲ್ಯಾಭಿವೃದ್ಧಿ ತರಬೇತಿ:** ಈ ಯೋಜನೆಯ ಪ್ರಾರಂಭದಲ್ಲಿ ಪ್ರತಿಯೊಬ್ಬ ಫಲಾನುಭವಿಯ ತರಬೇತಿಗಾಗಿ ೨,೦೦೦/- ರೂಪಾಯಿಗಳನ್ನು ವ್ಯಯ ಮಾಡಲು ಅನುಮತಿ ಇತ್ತು. ಇದರಲ್ಲಿ ತರಬೇತಿಗೆ ಬೇಕಾಗುವ ಸಾಮಗ್ರಿಗಳ ವೆಚ್ಚ, ತರಬೇತುದಾರರ ಸಂಭಾವನೆ, ತರಬೇತಿ ಸಂಸ್ಥೆಯು ಭರಿಸಬೇಕಾದ ಇತರ ಖರ್ಚುಗಳ ಮತ್ತು ತರಬೇತಿ ಪಡೆಯುವವರಿಗೆ ನೀಡಬೇಕಾದ ಮಾಸಿಕ ಮಿತ ಸಂಬಳ (ಸ್ಟೈಫಂಡ್) ಸೇರಿರುತ್ತಿತ್ತು.

ಪರಿಷ್ಕೃತ ಮಾಡಿರುವ ಪ್ರಕಾರ (ಎಪ್ರಿಲ್ ೨೦೦೯ರಿಂದ) ಪ್ರತಿಯೊಬ್ಬ ಫಲಾನುಭವಿಯ ತರಬೇತಿಗಾಗಿ ರೂ ೧೦,೦೦೦/-ಗಳಿಗೆ ಮೀರದಂತೆ ಹೆಚ್ಚಳವಾಗಿರುವುದು ಕಂಡು ಬಂದಿದೆ. ಈ ಹಣದಲ್ಲಿ ತರಬೇತಿಗೆ ಬೇಕಾಗುವ ಸಾಮಗ್ರಿಗಳ ವೆಚ್ಚ, ತರಬೇತಿದಾರರ ಸಂಭಾವನೆ, ತರಬೇತಿ ಸಂಸ್ಥೆಯು ಭರಿಸಬೇಕಾದ ಇತರ ಖರ್ಚುಗಳು ಮತ್ತು ತರಬೇತಿ ಪಡೆಯುವವರಿಗೆ ನೀಡಬೇಕಾದ ಮಾಸಿಕ ಮಿತ ಸಂಬಳ ಸೇರಿದೆ. ತರಬೇತಿಯಲ್ಲಿ ಮೀಸಲಾತಿಯನ್ನು ಪ್ರಕಟಿಸಲಾಗಿದ್ದು ಇದರಲ್ಲಿ ೩೦% ರಷ್ಟು ಮಹಿಳೆಯರು ಆಯಾ ನಗರ/ಪಟ್ಟಣದಲ್ಲಿರುವ ಜನಸಂಖ್ಯೆಗನುಗುಣವಾಗಿ ಆ ಜನಸಂಖ್ಯೆಯ ಶೇಕಡದಷ್ಟು,

ವಿಶೇಷ ಆದ್ಯತೆ ಅಡಿಯಲ್ಲಿ ಶೇಕಡ ೩% ರಷ್ಟು ಅಂಗವಿಕಲರಿಗೆ ಹಾಗೂ ಪ್ರಧಾನ ಮಂತ್ರಿಗಳ ೧೫ ಅಂಶಗಳ ಕಾರ್ಯಕ್ರಮದ ದೃಷ್ಟಿಯಲ್ಲಿ ಅಲ್ಪಸಂಖ್ಯಾತರಿಗೆ ಶೇ. ೧೫ ರಷ್ಟು ಮೀಸಲಾತಿಯನ್ನು ನಿಗದಿಪಡಿಸಲಾಗಿದೆ.

ಆಡಳಿತ ಮತ್ತು ಕಛೇರಿ ವೆಚ್ಚಗಳಿಗೆ ಈ ಹಿಂದೆ ಗರಿಷ್ಠ ಶೇಕಡ ೫% ರಷ್ಟು ಹಣವನ್ನು ರಾಜ್ಯಕ್ಕೆ ಮಂಜೂರಾದ ಒಟ್ಟು ಹಣದಲ್ಲಿ ಖರ್ಚು ಮಾಡಬಹುದಿತ್ತು. ಪ್ರಸ್ತುತ ಇದೇ ನಿಯಮವನ್ನೇ ಮುಂದುವರೆಸಲಾಗಿದೆ. ಮಾಹಿತಿ ಶಿಕ್ಷಣ ಸಂಪರ್ಕದ ಕಾರ್ಯಕ್ರಮಕ್ಕಾಗಿ ಈ ಹಿಂದೆ ರಾಜ್ಯಕ್ಕೆ ಮಂಜೂರಾದ ಒಟ್ಟು ಹಣದ ಶೇಕಡ ೨% ರಷ್ಟು ನಿಗದಿಪಡಿಸಲಾಗಿತ್ತು. ಪ್ರಸ್ತುತ ಈ ಹಣವನ್ನ ಶೇಕಡ ೧% ರಷ್ಟನ್ನು ಹೆಚ್ಚಿಸಿ ರಾಜ್ಯಕ್ಕೆ ನಿಗದಿಯಾದ ಒಟ್ಟು ಮೊತ್ತದಲ್ಲಿ ಶೇಕಡ ೩% ರಷ್ಟನ್ನು ಖರ್ಚು ಮಾಡಬಹುದಾಗಿದೆ.

ವೇತನಾಧಾರಿತ ಮಂಜೂರಿ ಉದ್ಯೋಗ ಕಾರ್ಯಕ್ರಮವು ಈ ಹಿಂದೆ ೬೦:೪೦ ರ ಅಡಿಯಲ್ಲಿತ್ತು. ಅಂದರೆ ೬೦ ರಷ್ಟು ಕಾಮಗಾರಿಗೆ ಬೇಕಾಗುವ ಸಾಮಗ್ರಿಗಳು ಉಳಿದ ೪೦ ರಷ್ಟು ಕಾರ್ಮಿಕರ ಸಂಭಾವನೆ ವೆಚ್ಚವಾಗಿತ್ತು. ಪ್ರಸ್ತುತ ಈ ನಿಯಮವನ್ನು ಸಡಿಲಗೊಳಿಸಿ ಆಯಾ ರಾಜ್ಯಕ್ಕೆ ಅನ್ವಯವಾಗುವಂತೆ ಶೇ.೧೦% ರಂತೆ ಕಾರ್ಮಿಕರ ಸಂಭಾವನೆಯನ್ನು ನಿಗದಿಪಡಿಸಿಕೊಳ್ಳಬಹುದಾಗಿದೆ. ಈ ಯೋಜನೆಯು ಹುಬ್ಬಳ್ಳಿ-ಧಾರವಾಡ ಮಹಾನಗರಕ್ಕೆ ಅನ್ವಯಿಸುವುದಿಲ್ಲ.

**ಸಾಮಾಜಿಕ ಸೇವಾ ಕಾರ್ಯಕ್ರಮವನ್ನು** (ಸಿಎಸ್‌ಸಿ) ಪ್ರಸ್ತುತ ನಗರ ಸಮುದಾಯ ಅಭಿವೃದ್ಧಿ ನೆಟ್‌ವರ್ಕ (ಯುಸಿಡಿಎನ್) ಎಂಬ ಹೆಸರಿನಲ್ಲಿ ಜಾರಿಗೆ ತರಲಾಗಿದೆ. ಎಪ್ರಿಲ್ ೨೦೦೯ ರಿಂದ ಹೊಸ ಸೇರ್ಪಡೆಯಾಗಿ ಇನ್ನೋವೇಟಿವ್/ವಿಶೇಷ ಯೋಜನೆ ಎಂಬ ಹೆಸರಿನಲ್ಲಿ ನಗರದ ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳ ಬದಲಾಗಿ ಬಡತನ ರೇಖೆಯಲ್ಲಿರುವ ಕುಟುಂಬಗಳಿಗೂ ಸ್ವಯಂ ಉದ್ಯೋಗ ಮತ್ತು ಕೌಶಲ್ಯಾಭಿವೃದ್ಧಿಯನ್ನು ಹೆಚ್ಚಿಸುವ ಕಾರ್ಯವಾಗಿದೆ.

**ಸ್ಪೆಷಲ್ ಕಂಪೋನೆಂಟ್ ಪ್ರೋಗ್ರಾಮ್** ಅಡಿಯಲ್ಲಿ ಎಸ್‌ಸಿ ಮತ್ತು ಎಸ್‌ಟಿ ಇವರಿಗೆ ಯುಎಸ್‌ಇಪಿ ಮತ್ತು ಎಸ್‌ಟಿಇಪಿ-ಯುಪಿ ಅಡಿಯಲ್ಲಿ ವಿಶೇಷ ಆದ್ಯತೆಯನ್ನು ನೀಡುವ ಕಾರ್ಯಕ್ರಮ ಜಾರಿ ಮಾಡಲಾಗಿದೆ.

**ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ:** ಎಸ್‌ಜೆಎಸ್‌ಆರ್‌ವೈ ಯೋಜನೆಯ ಅಡಿಯಲ್ಲಿ ಬರುವ ಕಾರ್ಯಕ್ರಮಗಳನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಅವುಗಳನ್ನು ಕಾಲಕಾಲಕ್ಕೆ ಮೌಲ್ಯ ಮಾಪನವನ್ನು ಮಾಡುವುದು ಇದರ ಮುಖ್ಯ ಉದ್ದೇಶವಾಗಿದೆ. ಸರ್ಕಾರವು ನಿಗದಿ ಪಡಿಸಿರುವ ಗುರಿಯನ್ನು ನಿಗದಿತ ಅವಧಿಯಲ್ಲಿ ಮುಗಿಸುವಂತೆ ನೋಡಿಕೊಳ್ಳುವುದು ಮಾಸಿಕ ವರದಿ, ತ್ರೈಮಾಸಿಕ ವರದಿ, ವಾರ್ಷಿಕ ವರದಿ ಹಾಗೂ ಕೇಸ್ ಸ್ಟಡಿ, ಯೋಜನೆಯ ಮೌಲ್ಯಮಾಪನ/ ಸಮೀಕ್ಷೆ ಇತ್ಯಾದಿಗಳನ್ನು ಮಾಡಲಾಗುವುದು.

ಈ ಮೇಲಿನ ಎಲ್ಲಾ ಕಾರ್ಯಕ್ರಮಗಳು ಹಾಗೂ ಯೋಜನೆಗಳ ಸಾಲ ಸೌಲಭ್ಯ ಸಹಾಯಧನವನ್ನು ಕಾಲಕಾಲಕ್ಕೆ ಸರ್ಕಾರವು ಪರಿಷ್ಕರಿಸುತ್ತಾ ಬಂದಿರುವುದನ್ನು ನೋಡಿದರೆ ಯೋಜನೆಯಿಂದ ಜನರಿಗೆ ಲಾಭವಾಗುತ್ತಿರುವುದು ಈ ಯೋಜನೆಯು ಬಡತನ ರೇಖೆಗಿಂತ ಕೆಳ ಕುಟುಂಬಗಳ ಆರ್ಥಿಕ ಅಭಿವೃದ್ಧಿಗೆ ಹಾಗೂ ಕೌಶಲ್ಯಾಭಿವೃದ್ಧಿಗೆ ಹೆಚ್ಚು ಒತ್ತು ನೀಡುತ್ತಿರುವುದು ಮೇಲಿನ ಅಂಶಗಳನ್ನು ನೋಡಿದಾಗ ಕಂಡು ಬಂದಿದೆ.

**೪.೧೩. ಬಡತನದ ಪ್ರಮಾಣದಲ್ಲಿ ಇಳಿಕೆ :**

ಯೋಜನಾ ಆಯೋಗವು ಪ್ರತಿ ವರ್ಷವೂ ಬಡತನದ ರೇಖೆ ಮತ್ತು ಬಡತನದ ಅನುಪಾತವನ್ನು ಅಂದಾಜು ಮಾಡಲು ಕಮಿಟಿಗಳನ್ನು ರಚಿಸುತ್ತದೆ. ಅದರಲ್ಲೂ ಪ್ರತಿ ವ್ಯಕ್ತಿಯ ಅನುಭೋಗ ಮತ್ತು ವೆಚ್ಚವನ್ನು ಆಧಾರವಾಗಿಟ್ಟು ಕೊಂಡು ಮಾದರಿಯಾಗಿ, ಈ ಸರ್ವೆಯನ್ನು ರಾಷ್ಟ್ರೀಯ ಮಾದರಿ ಸರ್ವೆ ಕಛೇರಿಯು ಮಾಡುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಬಡತನದ ಪ್ರಮಾಣವನ್ನು ಅಳೆಯಲು ಭಾರತದ ಯೋಜನಾ ಆಯೋಗವು ವಿವಿಧ ಕಮಿಟಿಗಳನ್ನು ನೇಮಿಸುತ್ತಾ ಬಂದಿದೆ, ಅವುಗಳೆಂದರೆ: ವಿ.ಎಂ ದಾಂಡೇಕರ್ ಮತ್ತು ರಾತ್ ಕಮಿಟಿ–೧೯೭೧, ವೈ.ಕೆ ಅಲಗಾ ಕಮಿಟಿ–೧೯೭೯, ಡಿ.ಟಿ ಲಕ್‌ಡ್ವಾಲಾ ಕಮಿಟಿ–೧೯೯೩ ಮತ್ತು ಪ್ರೊ.ಸುರೇಶ್ ಡಿ ತೆಂಡೂಲ್ಕರ್ ಕಮಿಟಿ–೨೦೦೯. ಈ ಕಮಿಟಿಗಳು ಮಾಡಿರುವ ಶಿಫಾರಸ್ಸಿನ ಮೇಲೆ ಯೋಜನಾ ಆಯೋಗವು ರಾಷ್ಟ್ರೀಯ ಮಾದರಿ ಸರ್ವೆ ಕಛೇರಿಯ ಮೂಲಕ ಸರ್ವೆ ನಡೆಸಿ ಅಂಕಿ ಅಂಶಗಳನ್ನು ಬಿಡುಗಡೆ ಮಾಡುತ್ತಾ ಬಂದಿದೆ.

ಯೋಜನಾ ಆಯೋಗವು ಬಡತನದ ಪ್ರಮಾಣವನ್ನು ಅಳೆಯುವ ದೃಷ್ಠಿಯಿಂದ ತಜ್ಞರ ಸಮಿತಿಯನ್ನು ನೇಮಿಸಿತು. **ಪ್ರೊ. ಸುರೇಶ್ ಡಿ ತೆಂಡೂಲ್ಕರ್ ಕಮಿಟಿಯು** ತನ್ನ ವರದಿಯನ್ನು ಡಿಸೆಂಬರ್ ೨೦೦೯ ರಲ್ಲಿ ಸಲ್ಲಿಸಿತು. ಈ ವರದಿಯ ಆಧಾರದ ಮೇಲೆ ಯೋಜನಾ ಆಯೋಗವು ೨೦೦೪–೦೫ ರಲ್ಲಿ ದೇಶದ ಒಟ್ಟಾರೆ ಬಡತನವು ಶೇಕಡ ೩೭ ರಷ್ಟಿತ್ತು ೨೦೦೯–೧೦ ರಲ್ಲಿ ಶೇಕಡ ೩೨ ಕ್ಕೆ ಇಳಿದಿದೆ ಎಂದು ಅಂದಾಜಿಸಿದೆ. ತೆಂಡೂಲ್ಕರ್ ಸಮಿತಿಯು ಆಹಾರ ಪದಾರ್ಥಗಳ ಕ್ಯಾಲೋರಿ ಲೆಕ್ಕಾಚಾರದ ಬದಲಿಗೆ ಜೀವನ ಮಟ್ಟದ ಸೂಚ್ಯಂಕದ ಮೇಲೆ "ಉಪಭೋಗ" ಆಧರಿಸಿ ಬಡತನ ಅಂದಾಜಿಸಬೇಕು ಎಂದು ಸಲಹೆ ನೀಡಿ, ಆಹಾರದ ಜೊತೆಗೆ ಆರೋಗ್ಯ ಮತ್ತು ಶಿಕ್ಷಣ ಕೂಡಾ ಬಡತನ ಅಂದಾಜಿಸುವಲ್ಲಿ ಪ್ರಮುಖ ಸಂಗತಿಗಳು ಎಂದು ಸಮಿತಿ ಹೇಳಿತ್ತು. ದೇಶದ ಬಡತನದ ವಿಧಾನವನ್ನು ಅಂದಾಜು ಮಾಡಲಿಕ್ಕಾಗಿ ತೆಂಡೂಲ್ಕರ್ ಸಮಿತಿಯ ಶಿಫಾರಸ್ಸಿನ ವಿಧಾನದಲ್ಲಿ ಯೋಜನಾ ಆಯೋಗವು ಮಾದರಿ ಸರ್ವೆಯನ್ನು ನಡೆಸಿತು. ಈ ವರದಿಯಲ್ಲಿ ಬಡತನದ ರೇಖೆಯ ನಿಗದಿ ಪಡಿಸಿರುವ ಪ್ರಮಾಣದ ಬಗ್ಗೆ ಅತೀ ಕಡಿಮೆ ಎಂದು ಹಲವರಿಂದ ಸಲಹೆ ಸೂಚನೆಗಳು ಬಂದ ಹಿನ್ನಲೆಯಲ್ಲಿ ಯೋಜನಾ ಆಯೋಗ ಜೂನ್‌೨೦೧೨ ರಲ್ಲಿ ಮತ್ತೊಂದು ತಜ್ಞರ ಕಮಿಟಿಯನ್ನು ಡಾ. ಸಿ ರಂಗರಾಜನ್

ಅಧ್ಯಕ್ಷತೆಯಲ್ಲಿ (೨೦೧೨ ರಲ್ಲಿ) ಮತ್ತೊಮ್ಮೆ ಬಡತನವನ್ನು ನಿರ್ಧರಿಸುವ ವಿಧಾನವನ್ನು ಪರಿಶೀಲಿಸಲು ನೇಮಿಸಿತು. ಈ ಕಮಿಟಿಯು ೨೦೧೪ ರಲ್ಲಿ ತನ್ನ ವರದಿಯನ್ನು ಸಲ್ಲಿಸಿದೆ. ತೆಂಡೂಲ್ಕರ್ ಕಮಿಟಿಯ ಆಧಾರದಲ್ಲಿ ಬಡತನದ ಪ್ರಮಾಣವನ್ನು ಅಳೆಯಲು ಯೋಜನಾ ಆಯೋಗವು ಸರ್ವೆ ನಡೆಸಿದ್ದು ವಿವಿಧ ಸಮಿತಿಗಳು ಶಿಫಾರಸ್ಸು ಮಾಡಿದ ವಿಧಾನದ ಆಧಾರದಲ್ಲಿ ಯೋಜನಾ ಆಯೋಗವು ಘೋಷಿಸಿರುವ ಅಂಕಿ ಅಂಶಗಳನ್ನು ಈ ಕೆಳಗಿನಂತೆ ನೀಡಲಾಗಿದೆ. ೧ ಪ್ರಜಾವಾಣಿ ಕನ್ನಡ ದಿನ ಪತ್ರಿಕೆ: ೨೧.೪೨೦೧೧

**ಡಿ.ಟಿ ಲಕ್‌ಡ್ವಾಲಾ ಕಮಿಟಿ ಶಿಫಾರಸ್ಸಿನ ಪ್ರಕಾರ** ೧೯೯೩-೯೪ ರಲ್ಲಿ ಇದ್ದ ಭಾರತದ ನಗರ ಪ್ರದೇಶಗಳಲ್ಲಿನ ಬಡತನದ ಅನುಪಾತ ಶೇಕಡ : ೩೧.೮

**ಡಿ.ಟಿ ಲಕ್‌ಡ್ವಾಲಾ ಕಮಿಟಿ ಶಿಫಾರಸ್ಸಿನ ಪ್ರಕಾರ** ೨೦೦೪-೦೫ ರಲ್ಲಿ ಇದ್ದ ಭಾರತದ ನಗರ ಪ್ರದೇಶಗಳಲ್ಲಿನ ಬಡತನದ ಅನುಪಾತ ಶೇಕಡ : ೨೫.೭

**ಪ್ರೊ.ಸುರೇಶ್ ಡಿ ತೆಂಡೂಲ್ಕರ್ ಕಮಿಟಿ-೨೦೦೯** ರಚಿಸಿದ್ದು ೨೦೧೧-೧೨ ರಲ್ಲಿ ವರದಿಯನ್ನು ನೀಡಿದೆ. ಈ ಸಮಿತಿ ಶಿಫಾರಸ್ಸಿನ ಪ್ರಕಾರ ಭಾರತದ ನಗರ ಪ್ರದೇಶಗಳಲ್ಲಿನ ಬಡತನದ ಅನುಪಾತ ಶೇಕಡ : ೧೩.೭

**ಮಾಜಿ ರಿಜರ್ವ್‌ಬ್ಯಾಂಕ್ ಗೌರ್ನರ್ ಸಿ. ರಂಗರಾಜನ್** ನೇತೃತ್ವದ ಸಮಿತಿಯನ್ನು ೨೦೧೧-೧೨ ರಲ್ಲಿ ರಚಿಸಿದ್ದು ೨೦೧೪ ರಲ್ಲಿ ವರದಿಯನ್ನು ನೀಡಿದೆ. ಈ ಸಮಿತಿ ಶಿಫಾರಸ್ಸಿನ ಪ್ರಕಾರ ಭಾರತದ ನಗರ ಪ್ರದೇಶಗಳಲ್ಲಿನ ಬಡತನದ ಅನುಪಾತ ಶೇಕಡ ೨೬.೪.

ಭಾರತದ ನಗರ ಪ್ರದೇಶಗಳಲ್ಲಿದ್ದ ಬಡಜನರ ಜನಸಂಖ್ಯೆ ೧೯೯೩-೯೪ ರಲ್ಲಿ ೭೪.೫ ಮಿಲಿಯನ್, ೨೦೦೪-೦೫ ರಲ್ಲಿ ೮೦.೮ ಮಿಲಿಯನ್ ರಷ್ಟು, ಹಾಗೆಯೇ ೨೦೧೧-೧೨ ರಲ್ಲಿ ೫೨.೮ ಮಿಲಿಯನ್. ೧೯೯೩-೯೪ ರಿಂದ ೨೦೦೪-೦೫ ರವರೆಗೆ ಪ್ರತಿ ವರ್ಷ ಶೇಕಡ ೦.೫೫ ರಷ್ಟು ಬಡತನದ ಇಳಿಮುಖವಾಗಿದೆ. ೨೦೦೪-೦೫ ರಿಂದ ೨೦೧೧-೧೨ ರ ಅವಧಿಯ ೦೭ ವರ್ಷಗಳಲ್ಲಿ ೧೯೯೩-೯೪ ರಿಂದ ೨೦೦೪-೦೫ ರ ಅವಧಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಬಡತನದ ಪ್ರಮಾಣ ಇಳಿಕೆ ಕಂಡಿರುವುದು ಮೇಲಿನ ಅಂಕಿ ಅಂಶಗಳಿಂದ ತಿಳಿದು ಬಂದಿದೆ.

ಯೋಜನಾ ಆಯೋಗವು ತೆಂಡೂಲ್ಕರ್ ಕಮಿಟಿಯ ವಿಧಾನದಂತೆ ೨೦೧೧-೧೨ ರವರೆಗೆ ಬಡತನದ ಅಂದಾಜು ಪ್ರಮಾಣವನ್ನು ನಿಗದಿಪಡಿಸಿದೆ. ಅದರ ಆಧಾರದ ಮೇಲೆ ಮಾಸಿಕ ತಲಾದಾಯವು ಭಾರತದಾದ್ಯಂತ ಸರಾಸರಿ ನಗರ ಪ್ರದೇಶಗಳಲ್ಲಿ ೧೦೦೦, ಗ್ರಾಮೀಣ ಪ್ರದೇಶಗಳಲ್ಲಿ ೮೧೬ ಇರುವುದು ಕಂಡು ಬಂದಿದೆ. ಕರ್ನಾಟಕದ ನಗರ ಪ್ರದೇಶದಲ್ಲಿ ೧೦೮೯ ಗ್ರಾಮೀಣ ಪ್ರದೇಶದಲ್ಲಿ ೯೦೨ ಇರುವುದನ್ನು ಕಾಣುತ್ತೇವೆ.

ಭಾರತದ ಅತಿ ಹೆಚ್ಚು ಬಡತನವಿರುವ ೦೫ ರಾಜ್ಯಗಳೆಂದರೆ: ೧) ಬಿಹಾರ ೨) ಛತ್ತೀಸ್‌ಘಡ ೩) ಜಾರ್ಖಂಡ್ ೪) ಮಧ್ಯಪ್ರದೇಶ ೫) ಒರಿಸ್ಸಾ. ಅದೇ ರೀತಿ ಭಾರತದ ಅತಿ ಕಡಿಮೆ ಇರುವ ಬಡತನದ ರಾಜ್ಯಗಳೆಂದರೆ: ೧) ದೆಹಲಿ೨) ಕೇರಳಾ ೩) ಗೋವಾ ೪) ಪಂಜಾಬ್ ಮತ್ತು ಹಿಮಾಚಲ ಪ್ರದೇಶಗಳಾಗಿವೆ. (೨. ವಿಶ್ವ ಸಂಸ್ಥೆಯ ಅಭಿವೃದ್ಧಿ ಯೋಜನೆಯ ಮಾನವ ಅಭಿವೃದ್ಧಿ ವರದಿ, ೨೦೦೫.)

ತೆಂಡೂಲ್ಕರ್ ಕಮಿಟಿಯ ಶಿಫಾರಸ್ಸಿನ ಪ್ರಕಾರ ನಗರ ಪ್ರದೇಶದ ಪರಿಶಿಷ್ಟ ಜಾತಿಯ ಶೇಕಡ ೩೪.೧, ಪರಿಶಿಷ್ಟ ಪಂಗಡದ ಶೇಕಡ ೩೦.೪, ಹಿಂದುಳಿದ ವರ್ಗಗಳ ಶೇಕಡ ೨೪.೩ ಮತ್ತು ಇತರೆ ವರ್ಗಗಳಲ್ಲಿ ಶೇಕಡ ೨೦.೯ ರಷ್ಟು ಬಡತನವಿದೆ ಎಂಬುದು ತಿಳಿದು ಬರುತ್ತದೆ.

ತೆಂಡೂಲ್ಕರ್ ಕಮಿಟಿಯ ಶಿಫಾರಸ್ಸಿನ ಪ್ರಕಾರ ಧರ್ಮದ ಆಧಾರದಲ್ಲಿ ವಿಂಗಡಣೆ ಮಾಡಿದಾಗ ಭಾರತದ ಮಟ್ಟದಲ್ಲಿ ಹೆಚ್ಚಾಗಿ ಅದರಲ್ಲೂ ನಗರ ಪ್ರದೇಶದಲ್ಲಿ ಮುಸ್ಲಿಂ (೩೩.೯) ಜನಾಂಗದಲ್ಲಿ ಹೆಚ್ಚು ಬಡತನವಿರುವುದನ್ನು ಕಾಣುತ್ತೇವೆ, ರಾಜಸ್ತಾನ (೨೯.೫), ಉತ್ತರಪ್ರದೇಶ (೪೯.೫), ಗುಜರಾತ್ (೪೨.೪), ಬಿಹಾರ (೫೬.೫) ಪಶ್ಚಿಮ ಬಂಗಾಳ (೩೪.೯) ರಷ್ಟು ಬಡತನವಿರುವುದು ಕಂಡು ಬರುತ್ತದೆ.

ತೆಂಡೂಲ್ಕರ್ ಕಮಿಟಿಯ ಶಿಫಾರಸ್ಸಿನ ಪ್ರಕಾರ ವೃತ್ತಿಯ ಆಧಾರದಲ್ಲಿ ನೋಡುವುದಾದರೆ ಬಹಳ ಹೆಚ್ಚು ಕ್ಯಾಸುವಲ್ ಕಾರ್ಮಿಕರಲ್ಲಿ ಹೆಚ್ಚು ಬಡತನವಿರುವುದನ್ನು ನೋಡಬಹುದಾಗಿದೆ ಬಿಹಾರ (೮೬%), ಅಸ್ಸಾಂ (೮೯%), ಒರಿಸ್ಸಾ (೫೮.೫%), ಪಂಜಾಬ್ (೫೬.೩%), ಉತ್ತರ ಪ್ರದೇಶ (೬೭.೬%), ಪಶ್ಚಿಮ ಬಂಗಾಳ (೫೩.೭%) ರಷ್ಟು ಬಡತನವಿರುವುದು ಕಂಡು ಬಂದಿದೆ.

ತೆಂಡೂಲ್ಕರ್ ಕಮಿಟಿಯ ಶಿಫಾರಸ್ಸಿನ ಪ್ರಕಾರ ೨೦೦೯-೧೦ ರಲ್ಲಿ ಜನರ ಪ್ರತಿ ತಿಂಗಳ ತಲಾ ಆದಾಯವು ಕರ್ನಾಟಕದಲ್ಲಿ ನಗರ ಪ್ರದೇಶದಲ್ಲಿ ೯೦೮ ಇದ್ದು, ಗ್ರಾಮೀಣ ಪ್ರದೇಶದಲ್ಲಿ ೬೨೯.೪ ಇರುವುದು ಕಂಡು ಬರುತ್ತದೆ. ಅದೇ ರೀತಿ ೨೦೧೧-೧೨ ರಲ್ಲಿ ನಗರದಲ್ಲಿ ೧೯೯೮ ಮತ್ತು ಗ್ರಾಮೀಣ ಪ್ರದೇಶದಲ್ಲಿ ೯೦೨ ಇರುವುದನ್ನು ಕಾಣುತ್ತೇವೆ. ದೇಶದಲ್ಲೇ ಅತಿ ಹೆಚ್ಚು ನಾಗಾಲ್ಯಾಂಡ್‌ನಲ್ಲಿ ೧೧೪೭.೬ ರಷ್ಟಿದ್ದು ಮೊದಲನೆಯ ಸ್ಥಾನದಲ್ಲಿರುವುದನ್ನು ಕಾಣುತ್ತೇವೆ. ೧೯೯೩ ರಿಂದ ೨೦೧೧-೧೨ ರವರೆಗೆ ತಲಾ ಆದಾಯವು ಏರು ಮುಖವಾಗಿರುವುದನ್ನು ತೆಂಡೂಲ್ಕರ್ ವರದಿಯ ಆಧಾರದ ಮೇಲೆ ತಿಳಿಯಲಾಗಿದೆ. ೩. ವಿಜಯ ಕರ್ನಾಟಕ ದಿನಾಂಕ: ೩೦.೪.೨೦೧೨

೨೦೦೯-೧೦ ರ ಪ್ರಕಾರ ಬಡತನ ರೇಖೆಗಿಂತ ಕೆಳಗಿನ ಜನಸಂಖ್ಯೆಯು ರಾಜ್ಯದ ನಗರ ಪ್ರದೇಶದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ೪೪.೯ (೧೯.೬%) ಲಕ್ಷವಿರುವುದು ಕಂಡು ಬಂದಿದೆ. ೨೦೧೧-೧೨ ರಲ್ಲಿ ೩೬.೯೬ (೨೦.೯೧%) ಲಕ್ಷವಿರುವುದು ಕಂಡು ಬಂದಿದೆ. ಅತಿ ಹೆಚ್ಚು ಉತ್ತರ ಪ್ರದೇಶ (೩೧.೭ %) ದಲ್ಲಿ ಕಂಡು ಬಂದಿದೆ.

ಯೋಜನಾ ಆಯೋಗವು ನೇಮಿಸಿರುವ ಕಮಿಟಿಗಳ ಶಿಫಾರಸ್ಸಿನ ವಿಧಾನದ ಆಧಾರದಲ್ಲಿ ಭಾರತ ದೇಶದ ನಗರ ಮತ್ತು ಗ್ರಾಮೀಣ ಪ್ರದೇಶದ ಬಡತನದ ಪ್ರಮಾಣವು ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಾ ಬಂದಿರುವುದನ್ನು ಈ ಕೆಳಗಿನ ಕೋಷ್ಟಕ ೪.೧೩ ರಿಂದ ಕಾಣಬಹುದು.

**ಕೋಷ್ಟಕ ೪.೧೩**

**ನಗರ ಮತ್ತು ಗ್ರಾಮೀಣ ಬಡತನದ ಇಳಿಕೆಯ ಪ್ರಮಾಣ**

| ವರ್ಷ | ನಗರ (%) | ಗ್ರಾಮೀಣ (%) | ಒಟ್ಟು (%) |
|---|---|---|---|
| ೧೯೯೩-೯೪ | ೩೧.೮ | ೫೦.೧ | ೪೫.೩ |
| ೨೦೦೪-೦೫ | ೨೫.೭ | ೪೧.೮ | ೩೭.೨ |
| ೨೦೦೯-೧೦ | ೨೦.೯ | ೩೩.೮ | ೨೯.೮ |
| ೨೦೧೧-೧೨ | ೧೩.೭ | ೨೫.೭ | ೨೧.೯ |

ಮೇಲಿನ ಪಟ್ಟಿಯನ್ನು ಅವಲೋಕಿಸಿದಾಗ ಬಡತನದ ಪ್ರಮಾಣವು ಶೇಕಡ ೦.೭೪ ರಷ್ಟು ೧೯೯೩-೯೪ ಮತ್ತು ೨೦೦೪-೦೫ ರ ಅವಧಿಯಲ್ಲಿ ಇಳಿಮುಖ ಕಂಡಿದೆ. ೨೦೦೪-೦೫ ರಿಂದ ೨೦೧೧-೧೨ ರ ಅವಧಿಯಲ್ಲಿ ಶೇಕಡ ೨.೧೮ ರಷ್ಟು ಬಡತನದ ಪ್ರಮಾಣವು ಇಳಿಮುಖವಾಗಿರುವುದು ತಿಳಿದು ಬಂದಿದೆ. ೧೯೯೩-೯೪ ರಲ್ಲಿ ೩೧.೮ ರಷ್ಟಿದ್ದ ನಗರ ಬಡತನದ ಪ್ರಮಾಣ ೨೦೧೧-೧೨ ರ ಅವಧಿಯಲ್ಲಿ ಶೇಕಡ ೧೩.೭ ಕ್ಕೆ ಇಳಿಮುಖವಾಗಿರುವುನ್ನು ನೋಡಿದಾಗ ನಗರ ಪ್ರದೇಶದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಯೋಜನೆಗಳನ್ನು ಸೂಕ್ತ ರೀತಿಯಲ್ಲಿ ಜನರು ಉಪಯೋಗಿಸಿ ಕೊಳ್ಳುತ್ತಿರುವುದು ಕಂಡು ಬರುತ್ತದೆ. ಅದೇ ರೀತಿ ೨೦೦೪-೦೫ ರಲ್ಲಿ ೩೭% ರಷ್ಟಿದ್ದ ಭಾರತದ ಒಟ್ಟು ಬಡಜನರ ಜನಸಂಖ್ಯೆ, ೨೦೧೧-೧೨ ರಲ್ಲಿ ೨೨% ಕ್ಕೆ ಇಳಿಮುಖವಾಗಿರುವುದು ಕಂಡು ಬಂದಿದೆ.

ಇದಕ್ಕೂ ಮೊದಲು ಕೇಂದ್ರ ಸರ್ಕಾರವು ಬಡತನ ರೇಖೆಯನ್ನು ನಿರ್ಧರಿಸುವ ಹೊಸ ಅಂಕಿ ಅಂಶಗಳನ್ನು ಬಿಡುಗಡೆ ಮಾಡಿ ಒಬ್ಬ ವ್ಯಕ್ತಿಗೆ ಒಂದು ತಿಂಗಳು ಬದುಕಲು ಬೇಕಾದ ಅಗತ್ಯ ವಸ್ತುಗಳಿಗೆ ತಗಲುವ ಖರ್ಚನ್ನು ಗಣನೆಗೆ ತೆಗೆದುಕೊಂಡು ನಗರದಲ್ಲಿ ಬಡತನ ರೇಖೆಯನ್ನು ರೂ ೬೬.೧೦ ಹಾಗೂ ಗ್ರಾಮೀಣ ಪ್ರದೇಶದಲ್ಲಿ ೩೫.೧೦ ಎಂದು ಲೆಕ್ಕಹಾಕಿತ್ತು. ಅದರ ಆಧಾರದ ಮೇಲೆ ನಗರದಲ್ಲಿ ಬಡತನ ರೇಖೆಗಿಂತ ಕೆಳಗಿರುವವರ ಪ್ರಮಾಣ ಶೇಕಡ ೬೬.೭೦ ಆಗಿತ್ತು. ಬಡತನ ರೇಖೆಯನ್ನು ನಗರ ಪ್ರದೇಶದಲ್ಲಿ ೩೨ ರೂ ಹಾಗೂ ಗ್ರಾಮೀಣ ಭಾಗದಲ್ಲಿ ೨೬ ರೂ ಎಂದು ಪರಿಗಣಿಸಿದ್ದ ಯೋಜನಾ ಆಯೋಗ ಟೀಕೆಗೂ ಸಹ ಗುರಿಯಾಗಿತ್ತು. ಆದರೆ ಈ ಅಧ್ಯಯನದಲ್ಲಿ ಕಂಡು ಕೊಂಡಿರುವ ಅಂಶಗಳ ಆಧಾರದ ಮೇಲೆ ನೋಡಿದಾಗ ನಗರ ಪ್ರದೇಶದ ಜನರ ಉಪಭೋಗದ ಶಕ್ತಿಯು

ಗ್ರಾಮೀಣ ಭಾಗದ ಜನರಿಗಿಂತಲೂ ಉತ್ತಮವಾಗಿದೆ ಎಂಬುದು ಕಂಡು ಬಂದಿದೆ. ಹಾಗಾಗಿ ಕೇವಲ ರೂ ೩೨ ರಲ್ಲಿ ನಗರ ಪ್ರದೇಶದ ಜನರ ಅಗತ್ಯ ವಸ್ತುಗಳ ಖರ್ಚುವೆಚ್ಚಗಳಿಗೆ ಸಾಕು ಎಂಬ ಅಭಿಪ್ರಾಯ ಒಪ್ಪಲಾಗದು. (ವಿಜಯ ಕರ್ನಾಟಕ ದಿನಪತ್ರಿಕೆ ದಿನಾಂಕ: ೩೦.೪.೨೦೧೨.)

ಮೇಲಿನ ಅಂಕಿ ಅಂಶಗಳನ್ನು ನೋಡಿದಾಗ ಬಡತನದ ಪ್ರಮಾಣವು ನಗರ ಪ್ರದೇಶಗಳಲ್ಲಿ ಕಡಿಮೆಯಾಗುತ್ತಿರುವದನ್ನು **ಪಿ.ಎ ಸಾರೋಕಿನ್‌ರವರ** ಲಂಬಾಂತರ ಸಂಚಲನೆಯ ಸಿದ್ಧಾಂತಕ್ಕೆ ಪೂರಕವಾಗಿದೆ. ಯೋಜನೆಗಳನ್ನು ಸಮರ್ಪಕವಾಗಿ ಭಾರತ ಸರ್ಕಾರವು ನಗರ ಪ್ರದೇಶಗಳಲ್ಲಿ ಜಾರಿಗೆ ತಂದಿದ್ದು, ಜನರು ಅವುಗಳನ್ನು ಯೋಜಿತ ರೀತಿಯಲ್ಲಿ ಬಳಸಿಕೊಂಡಾಗ ದೇಶದ ಅಭಿವೃದ್ಧಿ ಮತ್ತು ಜನರ ಜೀವನ ಮಟ್ಟ ಎರಡು ಸಮಾನ ರೀತಿಯಲ್ಲಿ ಸಾಗಲು ಸಾಧ್ಯವಾಗುತ್ತದೆ. ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ೧೯೯೭ ಡಿಸೆಂಬರ್ ನಿಂದ ಜಾರಿಯಾಗಿದ್ದು ೧೯೯೩ ರಿಂದ ೨೦೧೨ ರವರೆಗಿನ ಯೋಜನಾ ಆಯೋಗವು ಪ್ರಕಟಿಸಿರುವ ಬಡಜನರ ಅಂಕಿ ಅಂಶಗಳನ್ನು ಅವಲೋಕಿಸಿದಾಗ ನಗರ ಪ್ರದೇಶಗಳಲ್ಲಿ ಬಡತನದ ಪ್ರಮಾಣ ಕಡಿಯಾಗುತ್ತಾ ಸಾಗಿರುವುದನ್ನು ಪರಿಗಣಿಸಿದಾಗ ಸರ್ಕಾರವು ನಗರ ಪ್ರದೇಶಗಳಲ್ಲಿ ಹಮ್ಮಿಕೊಂಡಿರುವ ಯೋಜನೆಗಳ ಪರಿಣಾಮ ಎನ್ನುವುದು ತಿಳಿದು ಬರುತ್ತದೆ. ಅದೇ ರೀತಿ ವಿಶ್ವ ಬ್ಯಾಂಕ್ ಮತ್ತು ಐ.ಎಂ.ಎಫ್ ಸಹ ಭಾರತ ಮತ್ತು ಚೀನಾ ದೇಶಗಳು ಬಡತನವನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಮಹತ್ವದ ಪ್ರಗತಿ ಸಾಧಿಸಿವೆ ಎಂದು ಹೇಳಿರುವುದು ಬಡತನ ಕಡಿಮೆ ಮಾಡಲು ಆರ್ಥಿಕ ಯೋಜನೆಗಳು ಶ್ರಮಿಸುತ್ತಿರುವುದನ್ನು ಕಾಣುತ್ತೇವೆ.

**ವಿಶ್ವ ಬ್ಯಾಂಕ್‌ನ** ಅಭಿವೃದ್ಧಿ ಯೋಜನೆಗಳ ನಿರ್ದೇಶಕ ಹನ್ಸ್‌ಟಿಮ್ಮರ್ ರವರು ಸಹಸ್ರಮಾನದ ಅಭಿವೃದ್ಧಿ ಧ್ಯೇಯಗಳನ್ನು ಈಡೇರಿಸಿರುವುದು ಅಭಿವೃದ್ಧಿಶೀಲ ರಾಷ್ಟ್ರಗಳ ಸಾಧನೆ. ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಮತ್ತು ಪ್ರೌಢ ಶಿಕ್ಷಣ, ಶುದ್ಧ ಕುಡಿಯುವ ನೀರಿನ ಲಭ್ಯತೆ ಹಾಗೂ ಹಸಿವು ಹೋಗಲಾಡಿಸುವ ನಿಟ್ಟಿನಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳು ಅಗತ್ಯ ಕ್ರಮಗಳನ್ನು ಕೈಗೊಂಡಿವೆ ಎಂದು ಹೇಳಿದ್ದಾರೆ.

ಆದಾಗ್ಯೂ ಈ ದೇಶಗಳಲ್ಲಿ ಬಡತನ ನಿರ್ಮೂಲನೆ ಹಾಗೂ ಆರೋಗ್ಯ ಸುಧಾರಣೆ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಕೆಲಸಗಳು ಆಗಬೇಕಿದೆ ಎಂದು ಹೇಳಿದ್ದಾರೆ. ಆ ನಿಟ್ಟಿನಲ್ಲಿ ಭಾರತ ಸರ್ಕಾರವು ಸಹ ಕಾಲ ಕಾಲಕ್ಕೆ ಯೋಜನೆಗಳಲ್ಲಿ ಮಾರ್ಪಾಟು ಮಾಡಿಕೊಂಡು ಗುರಿ ಸಾಧನೆಯತ್ತ ಸಾಗುತ್ತಿರವುದು ಆಶಾದಾಯಕ ಬೆಳವಣಿಗೆಯಾಗಿದೆ ಎಂದು ಹೇಳಬಹುದು. (ಜಾಗತಿಕ ಮೇಲ್ವಿಚಾರಣೆ ವರದಿ–೨೦೧೧ ವಿಜಯ ಕರ್ನಾಟಕ ದಿನಪತ್ರಿಕೆ ದಿನಾಂಕ: ೧೭.೪.೨೦೧೧.)

**ಹಿ.ಚಿ. ಬೋರಲಿಂಗಯ್ಯ**[೬] ರವರು ಹೆಣ್ಣಿನ ಬಗ್ಗೆ ಉಲ್ಲೇಖಿಸಿರುವಂತೆ ಹೆಣ್ಣು ಜಗತ್ತು ಸೃಷ್ಟಿಯ ಮೂಲ ಕೇಂದ್ರ, ಹೆಣ್ಣು ಭೂಮಿಗೆ ಸಮಾನಾದವಳು, ಭೂಮಿಗೆ ಎಷ್ಟೆಲ್ಲ ವಿಶಾಲತೆ ಮತ್ತು ಸಮೃದ್ಧಿಯ ಶಕ್ತಿ ಇದೆಯೋ ಅದೆಲ್ಲವೂ ಹೆಣ್ಣಿಗೂ ಇದೆ. ಅಂತೆಯೇ ಅವಳು ವೈವಿದ್ಯಮಯ ಹಾಗೂ ಸುಂದರಿ ಎಂದು ಹೆಣ್ಣಿನ ಬಲಾಢ್ಯತೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಹಾಗೆಯೇ ಎಸ್‌ಜೆಎಸ್‌ಆರ್‌ವೈ

ಯೋಜನೆಯಲ್ಲಿಯೂ ಸಹ ಮಹಿಳೆ ಆರ್ಥಿಕ ಅಭಿವೃದ್ಧಿ ಮೂಲಕ ತನ್ನ ಬಲಾಢ್ಯತೆಯನ್ನು ಹಾಗೂ ಸಮಾಜದಲ್ಲಿ ವಿವಿಧ ರಂಗಗಳಲ್ಲಿ ಸ್ಥಾನವನ್ನು ಪಡೆಯುತ್ತಿರುವುದು ಸಹ ಅಧ್ಯಯನದಿಂದ ಕಂಡು ಬಂದಿದೆ.

**ಡಾ.ಎಚ್.ಎಸ್. ದೊರೆಸ್ವಾಮಿ,**[೭] ಸ್ವಾತಂತ್ರ್ಯ ಹೋರಾಟಗಾರರು ಕಂಡಿದ್ದು ಕೇಳಿದ್ದು ಎಂಬ ಸಮಾಜ ಕೆಣಕುವ ಲೇಖನದಲ್ಲಿ ೧೭ ಗಿರೀಶ್ ಕಾರ್ನಾಡ್ ರವರು ಹೇಳಿರುವ ವ್ಯಾಖ್ಯೆಯನ್ನು ಉಲ್ಲೇಖಿಸಿ ಬಡತನ, ಹಸಿವು ಅಥವಾ ದುರಾಸೆಗಳಿಂದ ಹುಟ್ಟುವ ಹಿಂಸೆಗೆ ಪರಿಹಾರ ಕಂಡು ಹಿಡಿದುಕೊಳ್ಳಬಹುದು, ಅಮೂರ್ತ ಕಲ್ಪನೆಗಳಿಂದ, ಆಧ್ಯಾತ್ಮದಲ್ಲಿ ಅಪಾರ್ಥ ಕಲ್ಪಿಸುವುದರಿಂದ, ಘೋಷಣೆಗಳಿಂದ ಸೃಷ್ಟಿಯಾದ ಹಿಂಸಾಚಾರಗಳು ಮಾನವ ಜೀವನವನ್ನು ಹುರುಳಿಲ್ಲದ್ದಾಗಿ ಮಾಡಿವೆ ಮತ್ತು ಅದಕ್ಕೇನು ಪರಿಹಾರ ಮಾರ್ಗ ಎಂದು ಎಲ್ಲರೂ ಯೋಚಿಸುವಂತಾಗಿದೆ ಎಂದಿರುವುದನ್ನು ಹೇಳಿದ್ದಾರೆ. ಹೀಗಾಗಿ ಬಡತನವನ್ನು ವಿವಿಧ ಯೋಜನೆಗಳ ಮುಖಾಂತರ ಹೋಗಲಾಡಿಸುವ ಕ್ರಮ ಕೈಗೊಳ್ಳಬಹುದು ಆದರೆ ಅಮೂರ್ತ ಕಲ್ಪನೆಗಳು ಮೊದಲಿಗೆ ನಾಶಗೊಳಿಸಬೇಕೆಂದು ಹೇಳಿದ್ದಾರೆ. ಇದರಿಂದ ಇತ್ತೀಚಿನ ದಿನಗಳಲ್ಲಿ ಆಧುನೀಕರಣಗೊಂಡಂತೆ ಹಳ್ಳಿಗಳಿಂದ ನಗರಕ್ಕೆ ಜನರು ವಲಸೆ ಬಂದಂತೆ ನಗರ ಜೀವನಕ್ಕೆ ಹೊಂದಿಕೊಂಡು ಅಮೂರ್ತ, ಪರಿಕಲ್ಪನೆಗಳ ಕೊಂಡಿ ನಿಧಾನಗತಿಯಲ್ಲಿ ಕಳಚುತ್ತಿರುವುದನ್ನು ಆ ಮೂಲಕ ಸರ್ಕಾರದ ಯೋಜನೆಗಳ ಪರಿಣಾಮದಿಂದಾಗಿ ಜನರ ಜೀವನ ಮಟ್ಟದಲ್ಲಿ ಸುಧಾರಣೆಯಾಗುತ್ತಿರುವುದು ಕಂಡು ಕೊಳ್ಳಲಾಗಿದೆ.

ಯಾವುದೇ ಯೋಜನೆಗಳು ಬಡತನವನ್ನು ಸಮಾಜದಿಂದ ತೊಡೆದು ಹಾಕಿದಾಗ ಮಾತ್ರ ಫಲಕಾರಿಯಾಗುತ್ತವೆ ಎಂಬ ಅಂಶವನ್ನು ಡಾ. ಎಚ್.ಎಸ್ ದೊರೆಸ್ವಾಮಿ ಯವರು ಪ್ರಸ್ತಾಪಿಸುತ್ತಾ " ಬಡತನ ನಿವಾರಣೆಗಾಗಿಯೇ ಎರಡು ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತರಬೇಕು ಎಂಬ ಸಲಹೆ ನೀಡಿ, ಬಡವರು ಭಾರತದ ಎರಡನೇ ದರ್ಜೆ ಪ್ರಜೆಗಳಲ್ಲ ಅವರಿಗೆ ರೂಢಮೂಲವಾಗಿ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವುದು ಮುಖ್ಯ ಎಂದು ಹೇಳಿದ್ದಾರೆ. ಇವರ ಪ್ರಕಾರ ಎರಡು ಪಂಚವಾರ್ಷಿಕ ಯೋಜನೆಗಳನ್ನು ಬಡತನ ನಿವಾರಣೆಗಾಗಿಯೇ ಮೀಸಲಿರಿಸಿ ಎಲ್ಲರಿಗೂ ಕಡ್ಡಾಯ ಉಚಿತ ಶಿಕ್ಷಣ ನೀಡಿದರೆ, ಇನ್ನೂ ಹೆಚ್ಚಿನ ರೀತಿಯಲ್ಲಿ ಸಮಾಜದಲ್ಲಿ ಬದಲಾವಣೆ ತರಬಹುದು ಎಂಬ ಸಲಹೆ ಉತ್ತಮವಾದದ್ದು ಇದಕ್ಕೆ ಪುಷ್ಠಿ ಎಂಬಂತೆ **ಅಮಾರ್ತ್ಯಸೇನ್** ರವರು ಸಹ ಮೂಲ ಶಿಕ್ಷಣಕ್ಕೆ ಆದ್ಯತೆ ನೀಡಿ ಬಡತನ ನಿವಾರಣೆಗೆ ಶಿಕ್ಷಣದ ಅಗತ್ಯತೆಯನ್ನು ಪ್ರಾಥಮಿಕವಾಗಿ ಪ್ರಸ್ತಾಪಿಸಿರುವುದನ್ನು ಕಾಣಬಹುದು. ಇವರ ಸಲಹೆಗಳಿಗೆ ಹೊಂದಿಕೆಯಾದಂತೆ ನಗರ ಪ್ರದೇಶಗಳಲ್ಲಿ ಶಿಕ್ಷಣದ ಮೂಲಕವೇ ಹೆಚ್ಚಿನ ಅರಿವು, ಜ್ಞಾನ, ತಿಳುವಳಿಕೆ ಮೂಡಿ ವಿವಿಧ ಅರ್ಹತೆಗಳ ಆಧಾರದಲ್ಲಿ ಮಹಿಳೆಯರು ವಿವಿಧ ಉದ್ಯೋಗಗಳನ್ನು ಕೈಗೊಂಡು ಮುಂದೆ ಬರುತ್ತಿರುವುದನ್ನು ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಅಧ್ಯಯನದಿಂದ ಕಂಡು ಬಂದಿದೆ.[೮]

**ಅಡಿ ಟಿಪ್ಪಣಿಗಳು :**

೧. ಪ್ರಜಾವಾಣಿ ಕನ್ನಡ ದಿನ ಪತ್ರಿಕೆ: ೨೧.೪೨೦೧೧.

೨. ವಿಶ್ವ ಸಂಸ್ಥೆಯ ಅಭಿವೃದ್ಧಿ ಯೋಜನೆಯ ಮಾನವ ಅಭಿವೃದ್ಧಿ ವರದಿ, ೨೦೦೫.

೩. ವಿಜಯ ಕರ್ನಾಟಕ ದಿನ ಪತ್ರಿಕೆ ದಿನಾಂಕ: ೩೦.೪.೨೦೧೨.

೪. ವಿಜಯ ಕರ್ನಾಟಕ ದಿನಪತ್ರಿಕೆ ದಿನಾಂಕ: ೩೦.೪.೨೦೧೨.

೫. ಜಾಗತಿಕ ಮೇಲ್ವಿಚಾರಣೆ ವರದಿ–೨೦೧೧ ವಿಜಯ ಕರ್ನಾಟಕ / ದಿನಪತ್ರಿಕೆ ದಿನಾಂಕ: ೧೭.೪.೨೦೧೧.

೬ ಹಿ.ಚಿ. ಬೋರಲಿಂಗಯ್ಯ, ಒಂದು ಬುಡಕಟ್ಟಿ ಲೋಕ ದೃಷ್ಟಿ, ಪುಟ ಸಂಖ್ಯೆ–೧೪೨, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು–೨೦೧೧.

೭ ಡಾ. ಎಚ್.ಎಸ್. ದೊರೆಸ್ವಾಮಿ, ಕಂಡಿದ್ದು–ಕೇಳಿದ್ದು, ಪುಟ ಸಂಖ್ಯೆ–೧೭ (ಸಮಾಜವನ್ನು ಕೆಣಕುವ ಲೇಖನಗಳು) ಸಪ್ನ ಬುಕ್ ಹೌಸ್, ಬೆಂಗಳೂರು–ಪ್ರಥಮ ಮುದ್ರಣ–ನವೆಂಬರ್–೨೦೧೧.

೮. ಡಾ. ಎಚ್.ಎಸ್. ದೊರೆಸ್ವಾಮಿ, ಅದೇ ಪುಸ್ತಕ ಪುಟ ಸಂಖ್ಯೆ–೬೬ ರಿಂದ ೬೭.

* * *

# ಅಧ್ಯಾಯ–೦೫

# ಸಮಾರೋಪ

ಬಡತನ ನಿರ್ಮೂಲನೆಯಲ್ಲಿ ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯು ರಾಷ್ಟ್ರ ಮಟ್ಟದಲ್ಲಿ ನಗರ ಪ್ರದೇಶದ ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳ ಆರ್ಥಿಕ ಅಭಿವೃದ್ಧಿಗೆ ಶ್ರಮಿಸುತ್ತಾ ಬಂದಿದೆ.

ವಿವಿಧ ರಾಷ್ಟ್ರಗಳಲ್ಲಿರುವಂತೆ ಭಾರತ ದೇಶದಲ್ಲಿಯೂ ತನ್ನದೇ ಆದ ವಿವಿಧ ರೀತಿಯ ಬಡ ಜನರು ವಾಸಿಸುತ್ತಿರುವುದನ್ನು ಕಾಣುತ್ತೇವೆ. ಬಡತನವು ದೇಶದ ಆರ್ಥಿಕ ಅಭಿವೃದ್ಧಿಗೆ ತೊಡಕಾಗಿರುವುದನ್ನು ಮನಗಂಡು ೧೯೭೫ರಲ್ಲಿ ಅಂದಿನ ಪ್ರಧಾನಮಂತ್ರಿಗಳಾದ ದಿ.ಇಂದಿರಾಗಾಂಧಿಯವರು ೨೦ ಅಂಶಗಳ ಕಾರ್ಯಕ್ರಮಗಳನ್ನು ಘೋಷಿಸಿ ಬಡತನ ಮತ್ತು ಸಮಾಜದ ದುರ್ಬಲ ವರ್ಗಗಳ ಅಭಿವೃದ್ಧಿಗೆ ವಿಶೇಷ ಗಮನ ನೀಡಿದ್ದರು. ಬಡತನ ಒಂದು ಶಾಪವಲ್ಲ ಅದು ಹುಟ್ಟಿನಿಂದಲೇ ಬಂದಂತಹುದೂ ಅಲ್ಲ. ಜನಸಂಖ್ಯೆಯ ಹೆಚ್ಚಳ, ಅನಕ್ಷರತೆ, ನಿರುದ್ಯೋಗ ಇನ್ನೂ ಮುಂತಾದ ಕಾರಣಗಳಿಂದಾಗಿ ಜನರು ಆರ್ಥಿಕ ಅಭಿವೃದ್ಧಿ ಸಾಧಿಸುವಲ್ಲಿ ಹಿಂದೆ ಬೀಳುವುದನ್ನು ನೋಡುತ್ತೇವೆ.

ಆದ್ದರಿಂದ ಈ ಅಧ್ಯಯನದಲ್ಲಿ ವಿವಿಧ ಗುಂಪುಗಳಿಂದ ಅವರ ಜಾತಿ, ಧರ್ಮ, ಆದಾಯ, ಶಿಕ್ಷಣ, ಉದ್ಯೋಗ ಇತ್ಯಾದಿ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನಿಸಲಾಗಿದೆ. ಮೊದಲಿಗೆ ಸಮೀಕ್ಷಾ ಪ್ರಶ್ನಾವಳಿಯನ್ನು ಕನ್ನಡ ಭಾಷೆಯಲ್ಲಿ ತಯಾರಿಸಿಕೊಂಡು ರ್‍ಯಾಂಡಮ್ ಮೂಲಕ ಫಲಾನುಭವಿ ಆಯ್ಕೆ ಮಾಡಿಕೊಂಡು ಸಂದರ್ಶನದ ಮುಖಾಂತರ ಮಾಹಿತಿಯನ್ನು ಕಲೆ ಹಾಕಲಾಯಿತು.

ಈ ಅಧ್ಯಯನದಲ್ಲಿ ಹುಬ್ಬಳ್ಳಿ–ಧಾರವಾಡ ನಗರದಲ್ಲಿ ಎಸ್.ಜೆ.ಎಸ್.ಆರ್.ವೈ ಯೋಜನೆ ಅಡಿಯಲ್ಲಿ ಫಲಾನುಭವಿಯಾಗಿರುವ ವಿವಿಧ ಕಾರ್ಯಕ್ರಮಗಳಿಂದ ಆಯಾ ಕಾರ್ಯಕ್ರಮಗಳಲ್ಲಿ ಆಗಿರುವ ಪ್ರಗತಿಯ ಅಂಕಿ ಅಂಶಗಳನ್ನು ಆಧಾರವಾಗಿಟ್ಟು ಕೊಂಡು ಫಲಾನುಭವಿಗಳನ್ನು ೧೯೯೭ ರಿಂದ ೨೦೦೮–೦೯ರ ವರೆಗೆ ಇದ್ದಂತೆ ಮಾಹಿತಿ ಸಂಗ್ರಹಿಸಲಾಯಿತು. ಒಟ್ಟು ೩೦೦ ಫಲಾನುಭವಿಗಳನ್ನು. ಆಯ್ಕೆ ಮಾಡಿಕೊಳ್ಳಲಾಯಿತು, ಇದರ ಜೊತೆಗೆ ಕೆಲವು ಮಾಹಿತಿಗಳನ್ನು ಅನುಷಂಗಿಕ ಮೂಲಗಳಿಂದಲೂ ಸಂಗ್ರಹಿಸಲಾಗಿದೆ. ಹುಬ್ಬಳ್ಳಿ–ಧಾರವಾಡ ಮಹಾನಗರವು ಅವಳಿನಗರವಾಗಿರುವುದರಿಂದ ಹುಬ್ಬಳ್ಳಿ ಮತ್ತು ಧಾರವಾಡ ಎರಡೂ ನಗರಗಳಲ್ಲಿ ಫಲಾನುಭವಿಗಳನ್ನು ಆಯ್ಕೆಮಾಡಿಕೊಂಡು ಸಮೀಕ್ಷೆ ಮಾಡಲಾಯಿತು. ಒಟ್ಟು ೨೩ ಪ್ರದೇಶಗಳನ್ನು ಗಮನದಲ್ಲಿಟ್ಟುಕೊಂಡು ಹುಬ್ಬಳ್ಳಿಯಲ್ಲಿ–೧೨ ಧಾರವಾಡದಲ್ಲಿ–೧೧ ಪ್ರದೇಶಗಳನ್ನು ಆಯ್ಕೆ ಮಾಡಿ ಕೊಳ್ಳಲಾಯಿತು.

ಈ ಅಧ್ಯಯನದಲ್ಲಿ ಎಸ್.ಜೆ.ಎಸ್.ಆರ್.ವೈ ಯೋಜನೆಯು ಜಾರಿಯಾದ ನಂತರ ಅದರ ಕಾರ್ಯನಿರ್ವಹಣೆ ಮತ್ತು ಸಾರ್ವಜನಿಕರ ಅಭಿಪ್ರಾಯ ಬಡತನ ನಿರ್ಮೂಲನೆಯಲ್ಲಿ ಅದರ ಪಾತ್ರ ಇತ್ಯಾದಿ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನದಲ್ಲಿ ಮುಖ್ಯವಾಗಿ ಸಂದರ್ಶಿತರ ವಯಸ್ಸು, ಜಾತಿ, ಧರ್ಮ, ಭಾಷೆ, ಶಿಕ್ಷಣ, ವೃತ್ತಿ, ಕುಟುಂಬ, ವಿವಾಹ, ಆದಾಯ ಹಾಗೂ ಯಾವ ವಿವಿಧ ಕಾರ್ಯಕ್ರಮಗಳಲ್ಲಿ ಫಲಾನುಭವಿಯಾಗಿದ್ದಾರೆ ಇತ್ಯಾದಿಗಳ ಆಧಾರವನ್ನಿಟ್ಟುಕೊಂಡು ಮಾಹಿತಿ ಸಂಗ್ರಹಿಸಲಾಗಿದ್ದು, ೧೮ ರಿಂದ ೨೯ ವಯಸ್ಸಿನವರು ಪ್ರತಿಶತ ೮.೦೦, ೩೦ ರಿಂದ ೪೪ ವಯಸ್ಸಿನವರು ಪ್ರತಿಶತ ೪೦.೩೩, ೪೫ ರಿಂದ ೫೯ ವಯಸ್ಸಿನವರು ಪ್ರತಿಶತ ೪೯.೦೦, ೬೦ ಅಥವಾ ೬೦ ವಯಸ್ಸು ಮೇಲ್ಪಟ್ಟವರು ಪ್ರತಿಶತ ೨.೬೬ ರಷ್ಟಿದ್ದು, ಅತಿ ಹೆಚ್ಚು ೪೫ ರಿಂದ ೫೯ ವಯಸ್ಸಿನವರು ಈ ಯೋಜನೆಯಲ್ಲಿ ಇರುವುದು ಅಧ್ಯಯನದಿಂದ ಕಂಡು ಬಂದಿದೆ. ಭಾರತವು ಪುರುಷ ಪ್ರಧಾನ ರಾಷ್ಟ್ರವಾಗಿದ್ದರೂ ಅಂದರೆ ಸಮಾಜದಲ್ಲಿ ಪುರುಷರೇ ಅತಿ ಹೆಚ್ಚು ಪ್ರಾಬಲ್ಯತೆ ಹೊಂದಿದ್ದರೂ ಸಹ ಈ ಯೋಜನೆಯಲ್ಲಿ ಮಹಿಳೆಯರೇ ಹೆಚ್ಚಾಗಿ ಪ್ರಯೋಜನ ಪಡೆದುಕೊಂಡಿರುವುದು ಕಂಡು ಬರುತ್ತದೆ.

ಈ ಅಧ್ಯಯನದ ಮಾದರಿಯಲ್ಲಿ ಆಯಾ ಕಾರ್ಯಕ್ರಮದ ಸಂಖ್ಯೆಗಳಿಗೆ ಅನುಗುಣವಾಗಿ ಅತಿ ಹೆಚ್ಚಾಗಿ ಸ್ವಸಹಾಯ ಗುಂಪುಗಳು, ೨ನೇಯದಾಗಿ ಸ್ವಯಂ ಉದ್ಯೋಗ ಮಾಡುತ್ತಿರುವವರು, ಮೂರನೇಯದಾಗಿ ಗುಂಪು ಉದ್ಯೋಗ ಮಾಡುತ್ತಿರುವವರನ್ನು ಗುರಿಯಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದಲ್ಲಿ ಅತಿ ಹೆಚ್ಚು ಹಿಂದೂ ಧರ್ಮದವರಿದ್ದು ಇವರು ಪ್ರತಿಶತ ೮೪ ರಷ್ಟಿದ್ದಾರೆ. ಮುಸ್ಲಿಂ ಜನಾಂಗದವರು ೨ನೇ ಸ್ಥಾನದಲ್ಲಿದ್ದು ಪ್ರತಿಶತ ೧೧.೩೩ ರಷ್ಟಿದ್ದಾರೆ. ಮೂರನೇ ಹಂತದಲ್ಲಿ ಕ್ರಿಶ್ಚಿಯನ್ ಧರ್ಮದವರಿದ್ದು ಪ್ರತಿಶತ ೪.೬೬ ರಷ್ಟಿದ್ದಾರೆ. ಶಿಕ್ಷಣದ ಅರ್ಹತೆಗೆ ಸಂಬಂಧಿಸಿದಂತೆ ಈ ಯೋಜನೆಯ ನಿಯಮವೇ ಹೇಳುವಂತೆ ೯ನೇ ತರಗತಿ ಒಳಪಟ್ಟವರಿಗೆ ಇರುವುದರಿಂದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಇಲ್ಲಿ ಯಾವುದೇ ಅಡೆತಡೆಗಳು ಕಂಡು ಬರುವುದಿಲ್ಲ. ಭಾಷೆಯ ವಿಷಯದಲ್ಲಿ ನೋಡಿದಾಗ ೬೯.೬೬ ರಷ್ಟು ಜನರು ಕನ್ನಡವನ್ನು ಮಾತೃಭಾಷೆಯನ್ನಾಗಿ ಮಾತನಾಡುವವರಿದ್ದು ಇವರು ಮೊದಲ ಸ್ಥಾನದಲ್ಲಿದ್ದರೆ, ೨ನೇ ಸ್ಥಾನದಲ್ಲಿ ಉರ್ದು ಭಾಷಿಕರು, ೩ನೇ ಸ್ಥಾನದಲ್ಲಿ ಮರಾಠಿ, ೪ನೇ ಸ್ಥಾನದಲ್ಲಿ ತೆಲಗು, ೫ನೇ ಸ್ಥಾನದಲ್ಲಿ ತಮಿಳು ಭಾಷಿಕರಿರುವುದು ಕಂಡು ಬರುತ್ತದೆ. ಮುಂಬೈ ಕರ್ನಾಟಕ ಭಾಗದಲ್ಲಿ ಹುಬ್ಬಳ್ಳಿ-ಧಾರವಾಡ ನಗರ ಇರುವುದರಿಂದ ಮರಾಠಿಗ ಜನರು ಇರುವುದು ಅಧ್ಯಯನದಿಂದ ತಿಳಿದು ಬರುತ್ತದೆ.

ಈ ಅಧ್ಯಯನದಲ್ಲಿ ಆಯ್ಕೆ ಮಾಡಿಕೊಂಡ ಒಟ್ಟು ೩೦೦ ಫಲಾನುಭವಿಗಳಲ್ಲಿ ಹೆಚ್ಚಾಗಿ ವಿವಾಹಿತೆಯರಿದ್ದಾರೆ. ಅತಿಹೆಚ್ಚು (೭೩.೬೬%), ೨ನೇ ಸ್ಥಾನದಲ್ಲಿ ಅವಿವಾಹಿತೆಯರು (೨೦.೩೩%) ನಂತರದ ಸ್ಥಾನದಲ್ಲಿ ವಿಧವೆ (೬.೦%)

ಯರಿರುವುದು ಕಂಡು ಬಂದಿದೆ. ನಗರ ಪ್ರದೇಶದಲ್ಲಿ ಹೆಚ್ಚಾಗಿ ವಿಭಕ್ತ ಕುಟುಂಬಗಳಿಗೆ (೯೨.೩೩%) ಮನ್ನಣೆ ದೊರೆತಿರುವುದು, ಅವಿಭಕ್ತ ಕುಟುಂಬಗಳು (೭.೬೬) ರಷ್ಟಿದ್ದು ಕಡಿಮೆಯಾಗುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಕುಟುಂಬದ ಮುಖ್ಯಸ್ಥರ ವಿಷಯದಲ್ಲಿ ನೋಡಿದಾಗ (೭೩.೬೬%) ರಷ್ಟು ಪುರುಷರು, ಪ್ರತಿಶತ ೨೬.೩೩ ರಷ್ಟು ಮಹಿಳೆಯರಿರುವುದು ಕಂಡು ಬಂದಿದ್ದು, ಮಹಿಳೆಯರು ಸಹ ಕುಟುಂಬದ ಹಾಗು ಹೋಗುಗಳಲ್ಲಿ ಪುರುಷನ ಒಂದು ಭಾಗವಾಗಿ ನಿರ್ಧಾರ ಕೈಗೊಳ್ಳುತ್ತಿರುವುದು ಕಂಡು ಬಂದಿದೆ. ಕುಟುಂಬಗಳಲ್ಲಿ ಪ್ರತಿಶತ ೮೫.೩೩ ಸ್ವಂತ ಮನೆ, ೧೪.೬೬ ರಷ್ಟು ಬಾಡಿಗೆ ಮನೆಯವರು ನಗರದಲ್ಲಿದ್ದಾರೆ. ಈ ಯೋಜನೆಯಲ್ಲಿ ೩ ವರ್ಷ ನಗರ ಪ್ರದೇಶದಲ್ಲಿ ವಾಸವಿರಬೇಕೆಂಬ ನಿಯಮವಿದ್ದು, ಬಾಡಿಗೆ ಮನೆಯಲ್ಲಿಯೇ ಸುಮಾರು ೧೦ ರಿಂಥ ೧೫ ವರ್ಷಗಳಿಂದಲೂ ವಾಸವಿರುವುದು ಕಂಡು ಬರುತ್ತದೆ.

ಈ ಯೋಜನೆಗೆ ಮೊದಲು ಪ್ರತಿಶತ ೫೦.೩೩ ರಷ್ಟು ಮಹಿಳೆಯರು ಮನೆಯಲ್ಲಿ ಹೌಸ್‌ವೈಫ್ ಕೆಲಸವನ್ನು ಮಾಡುತ್ತಿದ್ದರು. ಈ ಯೋಜನೆಯ ಫಲಾನುಭವಿಯಾದ ನಂತರ ಹೆಚ್ಚು ಚಟುವಟಿಕೆಯಿಂದ ಎರಡೂ ಕೆಲಸ ಕಾರ್ಯಗಳನ್ನು ಮಾಡುತ್ತಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಈ ಹಿಂದೆ ಪ್ರತಿಶತ ೨೪.೬೬ರಷ್ಟು ಜನರು ಲೇವಾದೇವಿಗಾರರಿಂದ ಸಾಲ ಪಡೆಯುತ್ತಿದ್ದುದ್ದು, ಇಂದು ಯಾವುದೇ ಖಾಸಗಿ ವ್ಯಕ್ತಿಯಿಂದ ಸಾಲವನ್ನು ಪಡೆಯದೇ ಯೋಜನೆಯ ಹಣದಿಂದ ಉದ್ಯೋಗವನ್ನು ಕೈಗೊಂಡಿದ್ದಾರೆ. ಗ್ರಾಮೀಣ ಪ್ರದೇಶಕ್ಕೆ ಹೋಲಿಸಿದರೆ ನಗರದಲ್ಲಿ ಸ್ವಸಹಾಯ ಗುಂಪುಗಳಲ್ಲಿ ಇರುವ ಸರಾಸರಿ ಸದಸ್ಯರು ಕಡಿಮೆ ಇರುವುದು ಕಂಡು ಬಂದಿದೆ. ಅಂದರೆ ನಗರದಲ್ಲಿ ೧೯ ರಿಂದ ೨೦ ಸದಸ್ಯರಿರುವ ಗುಂಪುಗಳು (೧.೨೭%) ೧೦ ರಿಂದ ೧೨ ಸದಸ್ಯರಿರುವ ಗುಂಪು (೩೩.೬೧) ರಷ್ಟು ಇರುವುದು ಅಧ್ಯಯನದಿಂದ ತಿಳಿದು ಬಂದಿದೆ.

ಎಲ್ಲಾ ಸ್ವಸಹಾಯ ಗುಂಪುಗಳಿಗೆ ಏಕಕಾಲದಲ್ಲಿ ಸಹಾಯಧನ ಲಭ್ಯವಾಗುವುದಿಲ್ಲ, ಯಾವ ಗುಂಪು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತದೆಯೋ ಆ ಗುಂಪಿಗೆ ಒಂದು ವರ್ಷ ತುಂಬಿದ ನಂತರ ಸರ್ಕಾರವು ನಿಯಮಾವಳಿಯಂತೆ ಸ್ವಸಹಾಯ ಗುಂಪಿಗೆ ಸುತ್ತು ನಿಧಿಯನ್ನು ನೀಡಿದೆ. ಈ ಹಣವು ಎಲ್ಲ ಸದಸ್ಯರಿಗೆ ಸಾಲದ ರೂಪದಲ್ಲಿ ವಿತರಣೆಯಾಗಿ ವಿವಿಧ ಉದ್ಯೋಗಗಳನ್ನು ಕೈಗೊಳ್ಳಲು ನೆರವಾಗಿರುವುದು ಕಂಡು ಬಂದಿದೆ.

ಸ್ವಯಂ ಉದ್ಯೋಗಗಳನ್ನು ಮಾಡುತ್ತಿರುವ ಒಟ್ಟು ೨೫ ಮಹಿಳಾ ಫಲಾನುಭವಿಗಳಲ್ಲಿ ಪ್ರತಿಶತ ೪೦% ರಷ್ಟು ಮಹಿಳೆಯರು ತಮ್ಮ ಹೆಸರಿನಲ್ಲಿ ಪುರುಷರಿಗೆ ಆಟೋರಿಕ್ಷಾ ಇತ್ಯಾದಿ ಉದ್ಯೋಗವನ್ನು ಮಾಡಲು ಸಹಕರಿಸಿರುವುದು ಕಂಡು ಬಂದಿದೆ. ಇನ್ನುಳಿದ ಶೇ.೬೦% ರಷ್ಟು ಮಹಿಳೆಯರು ವಿವಿಧ ಸಣ್ಣ ವ್ಯಾಪಾರ ಹಾಗೂ ಉತ್ಪಾದಕ ಚಟುವಟಿಕೆಗಳಲ್ಲಿ ಕೆಲಸವನ್ನು ಕೈಗೊಂಡಿದ್ದು ಉತ್ಪಾದಿತ

ವಸ್ತುಗಳನ್ನು ವಸ್ತು ಪ್ರದರ್ಶನ, ಗುಂಪಿನ ಸದಸ್ಯರಿಗೆ, ಎನ್‌ಜಿಓ ಮೂಲಕ ಇತ್ಯಾದಿ ಮಾರ್ಗಗಳ ಮೂಲಕ ವ್ಯಾಪಾರ ವ್ಯವಹಾರ ಮಾಡುತ್ತಿರುವುದು ತಿಳಿದು ಬಂದಿದೆ. ಈ ಕೆಲಸಕ್ಕೆ ಮಹಿಳೆಯರಿಗೆ ಬೆಂಬಲವಾಗಿ ಮನೆಯ ಮುಖ್ಯಸ್ಥರಾದ ಯಜಮಾನ (೧೬%), ತಂದೆ- ತಾಯಿ (೫೬%), ಅಣ್ಣ-ತಮ್ಮ (೪%), ಸ್ನೇಹಿತೆಯರು (೨೪%) ಬೆಂಬಲ ನೀಡುತ್ತಿರುವುದು ಕಂಡು ಬರುತ್ತದೆ. ಫಲಾನುಭವಿಗಳು ತಾವು ಕೈಗೊಂಡಿರುವ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಸಾಲ, ಸಹಾಯಧನ, ಇತರೆ ಅಂಶಗಳನ್ನು ತಿಳಿದುಕೊಂಡಿದ್ದಾರೆ. ಉದ್ಯೋಗ ಪ್ರಾರಂಭಿಸುವ ಹಂತದಲ್ಲಿ ಹಲವಾರು ಪ್ರಾಥಮಿಕ ಸಮಸ್ಯೆಗಳನ್ನು ಎದುರಿಸಿದ್ದು ಅವುಗಳನ್ನು ಯೋಜನೆಗೆ ಸಂಬಂಧಿಸಿದ ಅಧಿಕಾರಿಗಳೊಂದಿಗೆ ಹಂಚಿಕೊಂಡು ಬಗೆಹರಿಸಿಕೊಂಡಿದ್ದಾಗಿ ತಿಳಿಸಿದ್ದಾರೆ. ಈ ಹಿಂದೆ ಪ್ರತಿಶತ ೬.೩೩ರಷ್ಟು ಮಹಿಳೆಯರು ಬ್ಯಾಂಕ್ ಖಾತೆಯನ್ನು ಹೊಂದಿದ್ದು, ಈ ಯೋಜನೆಗೆ ಸೇರಿದ ನಂತರ ೯೩.೬೬ % ರಷ್ಟು ಜನರು ಉಳಿತಾಯ ಬ್ಯಾಂಕ್ ಖಾತೆ ಹೊಂದಿರುವುದು ಅಧ್ಯಯನದಿಂದ ತಿಳಿದು ಬಂದಿದೆ.

ಮಹಿಳಾ ಗುಂಪು ಉದ್ಯೋಗ ಕಾರ್ಯಕ್ರಮವು ಈ ಯೋಜನೆಯಲ್ಲಿ ಅತಿ ಮುಖ್ಯವಾದ ಕಾರ್ಯಕ್ರಮವಾಗಿದ್ದು, ಈ ಕಾರ್ಯಕ್ರಮದಲ್ಲಿ ಪ್ರತಿ ನಗರಕ್ಕೆ ವಾರ್ಷಿಕವಾಗಿ ಸರ್ಕಾರವು ೦೧ ಅಥವಾ ೦೨ ಗುಂಪು ಉದ್ಯೋಗಗಳನ್ನು ರಚಿಸಲು ಅವಕಾಶ ನೀಡುತ್ತಿದ್ದರಿಂದ ನಗರ ಪ್ರದೇಶದಲ್ಲಿ ವಾಸಿಸುವ ಮಹಿಳೆಯರು ಸಮಾನ ಮನಸ್ಕರಾಗಿ ಹೇಗೆ ಈ ಉದ್ಯೋಗವನ್ನು ಯಶಸ್ವಿಯಾಗಿ ನಿರ್ವಹಿಸಬಹುದೆಂದು ತಿಳಿದು ೪೦ ಫಲಾನುಭವಿಗಳನ್ನು ಹುಬ್ಬಳ್ಳಿ ಮತ್ತು ಧಾರವಾಡದಲ್ಲಿ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಯಿತು. ಗುಂಪು ಉದ್ಯೋಗದಲ್ಲಿ ನಾಯಕಿಯ ಆಯ್ಕೆ, ಅವರ ಕಾರ್ಯಗಳು, ಜವಾಬ್ದಾರಿಗಳು, ನಿರ್ವಹಣೆ, ಹಾಜರಾತಿ, ಉಳಿತಾಯ, ಸಾಲ, ಜನರು ತಿಳಿದುಕೊಂಡಿರುವ ಸಾಲ ಸೌಲಭ್ಯ, ಸಹಾಯಧನ, ಕೈಗೊಂಡಿರುವ ಉತ್ಪಾದಿತ ವಸ್ತುಗಳು, ಮಾರುಕಟ್ಟೆ ವ್ಯವಸ್ಥೆ, ವಸ್ತುಗಳಿಗೆ ಗ್ರಾಹಕರು, ಉದ್ಯೋಗಕ್ಕೆ ಪ್ರೋತ್ಸಾಹ ನೀಡುತ್ತಿರುವವರು, ಇತ್ಯಾದಿಗಳ ಬಗ್ಗೆ ವಿವರಗಳನ್ನು ಪಡೆದುಕೊಳ್ಳಲಾಗಿದೆ. ಎಸ್.ಜೆ.ಎಸ್.ಆರ್.ವೈ ಯೋಜನೆಯಲ್ಲಿ ಗುಂಪು ಉದ್ಯೋಗವು ತುಂಬಾ ಪರಿಣಾಮಕಾರಿಯಾಗಿ ತನ್ನ ಕೆಲಸವನ್ನು ನಿರ್ವಹಿಸುತ್ತಿರುವುದು ಈ ಅಧ್ಯಯನದಿಂದ ಕಂಡು ಬರುತ್ತದೆ. ಈ ಹಿಂದೆ ಯಾವುದೇ ಗುಂಪು ಉದ್ಯೋಗವನ್ನು ನಗರ ಪ್ರದೇಶದ ಜನರು ಮಾಡುತ್ತಿರಲಿಲ್ಲ, ಈ ಯೋಜನೆಯಿಂದಾಗಿ ಗುಂಪು ಉದ್ಯೋಗದ ಮೂಲಕ ಜನರು ವಾರ್ಷಿಕ ಆದಾಯವನ್ನು ಹೆಚ್ಚಿಸಿ ಕೊಂಡಿದ್ದಾರೆ, ಮಕ್ಕಳ ಶಿಕ್ಷಣಕ್ಕೆ, ಹಬ್ಬ-ಹರಿ-ದಿನಗಳಿಗೆ ಮನೆಯ ಖರ್ಚು, ಜೀವನವಶ್ಯಕ ವಸ್ತುಗಳನ್ನು ಕೊಂಡು ಕೊಳ್ಳುವುದಕ್ಕಾಗಿ, ಉಪ ಕಸುಬು, ಇತ್ಯಾದಿಗಳಿಗೆ ಬಳಕೆ ಮಾಡಿಕೊಂಡಿರುವುದು ತಿಳಿದು ಬಂದಿದೆ. ಗುಂಪು ಉದ್ಯಮದಲ್ಲಿ ಎಲ್ಲಾ ಸದಸ್ಯರು ಒಂದೇ ಕಡೆ ಕೆಲಸ ಮಾಡುವುದರಿಂದ ಉತ್ಪಾದನೆಯು ಸಹ ಹೆಚ್ಚುತ್ತದೆ, ಪ್ರತಿಯೊಬ್ಬರಿಗೂ ಉದ್ಯೋಗ ಸಿಕ್ಕಿದಂತಾಗಿದೆ,

ಹೆಚ್ಚು ಬಂಡವಾಳ ಹೂಡಲು ಅವಕಾಶವಿರುವುದರಿಂದ ಪ್ರತಿಯೊಬ್ಬ ಸದಸ್ಯರುಗಳು ಒಂದೊಂದು ಕೆಲಸವನ್ನು ವಹಿಸಿಕೊಂಡು ಮಾಡುತ್ತಿರುವುದರಿಂದ ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ತಿಳಿದುಕೊಂಡಿದ್ದಾರೆ, ಅದರಂತೆ ಹೆಚ್ಚು ಆದಾಯವನ್ನು ಕಂಡು ಕೊಂಡು ಉತ್ತಮ ಜೀವನ ಮಟ್ಟವನ್ನು ಹೊಂದಿರುವುದು ಈ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

ಈ ಯೋಜನೆಗೆ ಸೇರುವುದಕ್ಕಿಂತ ಹಿಂದೆ ಮಹಿಳೆಯರು ಮಾರುಕಟ್ಟೆಗೆ ೧೪.೬೬ ರಷ್ಟು ಹೋಗುತ್ತಿದ್ದವರು ನಂತರದಲ್ಲಿ ೮೫.೩೩ ರಷ್ಟು ಹೆಚ್ಚಾಗಿದೆ. ಸರ್ಕಾರಿ/ಸಂಸ್ಥೆ ಕಛೇರಿಗಳಿಗೆ ಭೇಟಿ ನೀಡುವವರ ಪ್ರಮಾಣ ಪ್ರತಿಶತ ೮೯.೬೬ ರಷ್ಟು ಹೆಚ್ಚಾಗಿರುವುದು, ಬ್ಯಾಂಕಿಗೆ ಹೋಗುವವರ ಪ್ರಮಾಣ ೯೪.೩೩ ರಷ್ಟು, ಆಸ್ಪತ್ರೆ ಗಳಿಗೆ ಮಕ್ಕಳನ್ನು ಕರೆದೊಯ್ಯಲು ಈ ಹಿಂದಿಗಿಂತ ಪ್ರತಿಶತ ೯೩.೬೬ ರಷ್ಟು, ಇತರೆ ಸಾರ್ವಜನಿಕ ಸ್ಥಳಗಳಿಗೆ ಭೇಟಿ ನೀಡುವವರು ೮೮.೩೩ ರಷ್ಟು, ಹೆಚ್ಚಾಗಿರುವುದು ಈ ಅಧ್ಯಯನದಿಂದ ತಿಳಿದು ಬಂದಿದೆ. ಇದರಿಂದ ಸಮಾಜದಲ್ಲಿ ಮಹಿಳೆಯರು ಸ್ವತಂತ್ರವಾಗಿ ಧೈರ್ಯದಿಂದ ಯಾವುದೇ ಸಾರ್ವಜನಿಕ ಸ್ಥಳಗಳಿಗೆ ಭೇಟಿ ನೀಡುತ್ತಿರುವುದು ಗುರುತಿಸುವ ಅಂಶವಾಗಿದೆ. ಇದರಿಂದ ಮಹಿಳೆಯು ತನ್ನದೇ ಆದ ಜವಾಬ್ದಾರಿಯನ್ನು ಬದಲಾದ ಸಮಾಜಕ್ಕೆ ಹೊಂದಿಕೊಂಡು ನಿರ್ವಹಿಸುತ್ತಿರುವುದು ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

ಬಡತನ ಹೋಗಲಾಡಿಸುವುದೆಂದರೆ ಸಾಮಾನ್ಯವಾಗಿ ಜನರ ಆರ್ಥಿಕ ಅಭಿವೃದ್ಧಿ ಮತ್ತು ಜೀವನ ಮಟ್ಟವನ್ನು ಹೆಚ್ಚಿಸುವುದಾಗಿರುತ್ತದೆ, ಅದರಲ್ಲಿಯೂ ಕುಟುಂಬದಲ್ಲಿ ಹೊಂದಿರುವ ವಸ್ತುಗಳ ಆಧಾರದ ಮೇಲೆಯೂ ಸಹ ಅವರ ಜೀವನಶೈಲಿ ಮತ್ತು ಮಟ್ಟವನ್ನು ಗುರುತಿಸಬಹುದು. ಈ ಯೋಜನೆಗೆ ಸೇರುವುದಕ್ಕಿಂತ ಹಿಂದೆ ಕುಟುಂಬದಲ್ಲಿ ಹೊಂದಿದ್ದ ವಸ್ತುಗಳು ಈ ಯೋಜನೆಗೆ ಸೇರಿದ ನಂತರ ಹೊಂದಿದ ವಸ್ತುಗಳನ್ನು ತುಲನೆ ಮಾಡಿ ನೋಡಿದಾಗ, ಈ ಯೋಜನೆ ಲಾಭ ಪಡೆದ ನಂತರ ಜನರು ಹೆಚ್ಚಾಗಿ ವಸ್ತುಗಳನ್ನು ಹೊಂದಿರುವುದು ಕಂಡು ಬರುತ್ತದೆ. ಆರ್ಥಿಕ ಅಭಿವೃದ್ಧಿಯನ್ನು ಹೊಂದಿದಂತೆ ಜೀವನ ಮಟ್ಟದಲ್ಲಿ ಬದಲಾವಣೆಯು ಸಹ ಆಗುತ್ತದೆ ಎಂಬುವುದನ್ನು ಕೋಷ್ಟಕ ೪.೨ ರಲ್ಲಿ ಸಂಗ್ರಹಿಸಲಾಗಿರುವ ವಸ್ತುಗಳ ವಿವರಗಳಿಂದ ತಿಳಿದು ಬರುತ್ತದೆ. ಮಹಿಳೆಯು ಕುಟುಂಬದಲ್ಲಿ ತನ್ನದೇ ಆದ ಸ್ಥಾನಮಾನಗಳನ್ನು ಪಡೆದು ಕೊಳ್ಳುತ್ತಿರುವುದು ಈ ಅಧ್ಯಯನದಿಂದ ಕಂಡು ಬರುತ್ತದೆ. ಕುಟುಂಬದಲ್ಲಿ ನಿರ್ಣಯ ಕೈಗೊಳ್ಳುವಲ್ಲಿ, ಪತಿಗೆ ಕುಡಿತದ ಚಟ ಬಿಡಿಸುವಲ್ಲಿ, ಶಾಲಾ ಮಕ್ಕಳನ್ನು ಕಳುಹಿಸುವಲ್ಲಿ, ಇತರೆ ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವ ಹೊಂದುವಲ್ಲಿ, ಕುಟುಂಬದ ಪ್ರಮುಖ ನಿರ್ಣಯಗಳಾದ ಮನೆ ರಿಪೇರಿ, ಹೊಸ ಉದ್ಯೋಗ, ಕುಟುಂಬ ಯೋಜನೆ, ಮಕ್ಕಳ ಶಿಕ್ಷಣ, ಹೊಸ ವಸ್ತು ಕೊಳ್ಳುವಾಗ ಇತ್ಯಾದಿ ವಿಷಯವಾಗಿ ಮಹಿಳೆಯು ನಿರ್ಣಯಗಳನ್ನು ಮಾಡುತ್ತಿರುವುದು ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

ಯೋಜನೆಗೆ ಸೇರಿದ ನಂತರದಲ್ಲಿ ರಾಜಕೀಯವಾಗಿಯೂ ಸಹ ಮಹಿಳೆ ಪಾತ್ರವಹಿಸುತ್ತಾ ಬಂದಿರುವುದು ತಿಳಿದು ಬಂದಿದೆ. ಮತದಾನದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿರುವುದು, ಚುನಾವಣೆ ಪ್ರಚಾರ ಕಾರ್ಯದಲ್ಲಿ, ವರದಕ್ಷಿಣೆ ವಿಚಾರವಾಗಿ, ಆಸ್ತಿಯ ಹಕ್ಕು, ಸಮುದಾಯ ಅಭಿವೃದ್ಧಿ ಚಟುವಟಿಕೆ, ಧಾರ್ಮಿಕ ಚಟುವಟಿಕೆ, ಕೂಲಿಯಲ್ಲಿ ಅಸಮಾನತೆ, ಮದ್ಯಪಾನ ವಿರೋಧಿಸುವ ಹೋರಾಟ ಮತ್ತು ಕೆಲಸದ ಪ್ರದೇಶಗಳಲ್ಲಿ ಮಹಿಳಾ ದೌರ್ಜನ್ಯದ ವಿರುದ್ಧ ಇತ್ಯಾದಿ ಬಗ್ಗೆ ಅರಿವು ಹೊಂದಿ ಅವುಗಳನ್ನು ಇನ್ನಿತರೆ ಜನರಿಗೆ ತಿಳಿಸುವ, ಅನ್ಯಾಯವಾದರೆ ಪ್ರಶ್ನಿಸುವ, ಮನೋಭಾವ ಹೊಂದಿರುವುದು ಈ ಅಧ್ಯಯನದಿಂದ ಕಂಡು ಬರುತ್ತದೆ.

ಈ ಯೋಜನೆಯ ಲಾಭವನ್ನು ಪಡೆದ ನಂತರದಲ್ಲಿ ಕುಟುಂಬದಲ್ಲಿ ಆದಾಯ ಹೆಚ್ಚಳವಾಗಿರುವುದು ಅಧ್ಯಯನದಲ್ಲಿ ಕಂಡು ಬರುತ್ತದೆ. ಈ ಯೋಜನೆಗಿಂತ ಹಿಂದೆ ವಾರ್ಷಿಕ ವರಮಾನ ೧೦.೦೦೦ ಕ್ಕಿಂತ ಕಡಿಮೆ ಹೊಂದಿರುವವರು ಪ್ರತಿಶತ ೧೨.೬೬, ೧೦,೦೦೧ ರಿಂದ ೨೦,೦೦೦ ಪ್ರತಿಶತ ೬೧.೦೦, ೨೦,೦೦೧ ರಿಂದ ೩೦,೦೦೦ ಪ್ರತಿಶತ ೨೬.೩೩, ೩೦.೦೦೦ ಕ್ಕಿಂತ ಮೇಲ್ಪಟ್ಟು ಪ್ರತಿಶತ ೦.೦ ವಾರ್ಷಿಕ ಆದಾಯ ಹೊಂದಿದವರಿದ್ದರು. ನಂತರದಲ್ಲಿ ವಾರ್ಷಿಕ ಆದಾಯದಲ್ಲಿ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ, ಅಂದರೆ ೧೦,೦೦೦ ಕ್ಕಿಂತ ಕಡಿಮೆ ವಾರ್ಷಿಕ ಆದಾಯ ಹೊಂದಿರುವವರು ಪ್ರತಿಶತ ೦.೦, ಅದರಂತೆ ಕ್ರಮವಾಗಿ ೨೧.೩೩, ೮೧.೩೩, ೬.೩೩ ರಂತೆ ಹೆಚ್ಚಳಗೊಂಡಿರುವುದು ಕಂಡು ಬರುತ್ತದೆ. ಇದರಿಂದ ಯೋಜನೆಯ ಉಪಯೋಗವನ್ನು ಸಮರ್ಪಕವಾಗಿ ಜನರು ಬಳಸಿಕೊಂಡಿರುವುದು ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

ಕುಟುಂಬದ ವಾರ್ಷಿಕ ಆದಾಯ ಹೆಚ್ಚಾದಂತೆಲ್ಲಾ ಜನರು ಮನೆ ರಿಪೇರಿ, ವಿದ್ಯುತ್‌ಚ್ಛಕ್ತಿ, ಸೋಲಾರ್, ಶೌಚಾಲಯ, ಕುಡಿಯುವ ನೀರಿನ ಸಂಪರ್ಕ, ಒಳಚರಂಡಿ ಸಂಪರ್ಕ, ವಾಹನ, ಮನೆಯ ಅಗತ್ಯ ವಸ್ತುಗಳು, ಬ್ಯಾಂಕಿನೊಂದಿಗಿನ ಸಂಪರ್ಕ, ಮಕ್ಕಳ ಶಿಕ್ಷಣ, ಉಪ ಕಸುಬುಗಳಾದ ಕೋಳಿ ಸಾಕಾಣಿಕೆ, ಉಪ್ಪಿನ ಕಾಯಿ ತಯಾರಿಕೆ, ಹಪ್ಪಳ ತಯಾರಿಕೆ, ಟೈಲರಿಂಗ್, ಕಾಗದದ ಬ್ಯಾಗ್ ತಯಾರಿಕೆ ಇತ್ಯಾದಿಗಳನ್ನು ಕೈಗೊಂಡಿರುವುದು ಕಂಡು ಬಂದಿದೆ.

ಈ ಅಧ್ಯಯನದಲ್ಲಿ ತರಬೇತಿ ಪಡೆದ ಮಹಿಳೆಯರು ಮತ್ತು ಅವರ ಮಕ್ಕಳು ಕೈಗೊಂಡಿರುವ ಉದ್ಯೋಗಗಳ ವಿಷಯವಾಗಿ ಮಾಹಿತಿ ಪಡೆದುಕೊಳ್ಳಲಾಗಿ, ಈ ತರಬೇತಿ ಕಾರ್ಯಕ್ರಮವು ಜನರಿಗೆ ತರಬೇತಿ ನೀಡುವಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದರೂ ಸಹ ಫಲಾನುಭವಿಗಳು/ ತರಬೇತಿ ಪಡೆದವರಲ್ಲಿ ಅಸಮಧಾನ ಕಂಡು ಬಂದಿದೆ. ಕಾರಣ ತರಬೇತಿ ನಂತರ ಆಯಾ ತರಬೇತಿ ನೀಡಿದಕ್ಕನುಗುಣವಾಗಿ ಕೆಲಸ ಒದಗಿಸದಿರುವುದು. ಇದರಿಂದ ತರಬೇತಿ ಪಡೆದ ನಂತರವೂ ಸಹ ನಿರುದ್ಯೋಗಿಗಳಾಗಿ ಯಾವುದೇ ಕೆಲಸವಿಲ್ಲದೇ ಇರುವುದು ಕಂಡು ಬಂದಿದೆ. ಪ್ರತಿಶತ ೨೪.೩೩ ರಷ್ಟು ತರಬೇತಿ ಪಡೆದವರು ಮಾತ್ರ ಸ್ವಯಂ

ಉದ್ಯೋಗ/ಸರ್ವೀಸ್/ಕಛೇರಿ ಉದ್ಯೋಗ ಪಡೆದವರಾಗಿದ್ದಾರೆ. ಪ್ರತಿಶತ ೭೫.೬೬ ರಷ್ಟು ತರಬೇತಿ ಪಡೆದವರಿಗೆ ಉದ್ಯೋಗ ಸಿಕ್ಕಿಲ್ಲದಿರುವುದು ಕಂಡು ಬರುತ್ತದೆ.

೧೯೯೭ ರಲ್ಲಿ ಪ್ರಾರಂಭವಾದ ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಯು ಸ್ವಯಂ ಉದ್ಯೋಗ ಕಾರ್ಯಕ್ರಮ ಅಡಿಯಲ್ಲಿ ಉದ್ಯೋಗ ಕೈಗೊಳ್ಳುವ ಫಲಾನುಭವಿಗೆ ಉದ್ಯಮದ ಗರಿಷ್ಟ ವೆಚ್ಚ ಒಟ್ಟು ರೂ ೫೦,೦೦೦ ನಿಗದಿಪಡಿಸಿತ್ತು, ಇದರಲ್ಲಿ ಗರಿಷ್ಟ ಮಿತಿ ರೂ ೭,೫೦೦ ಗೆ ಒಳಪಡಿಸಿ ಅಂದರೆ ಘಟಕ ವೆಚ್ಚದ ಶೇಕಡ ೧೫ ರಷ್ಟು ಹಣವನ್ನು ಸಹಾಯಧನವಾಗಿ ನೀಡುತ್ತಾ, ೫ ರಷ್ಟು ಹಣವನ್ನು ಫಲಾನುಭವಿ ತನ್ನ ಸ್ವಂತ ಹಣದಿಂದ ಮಾರ್ಜಿನ್ ಹಣವನ್ನಾಗಿ ಹಾಕಬೇಕಿತ್ತು. ಯೋಜನೆಯ ಯಶಸ್ಸಿನಿಂದಾಗಿ ಸರ್ಕಾರದ ಕಾರ್ಯಕ್ರಮದಲ್ಲಿ ಹಾಗೂ ಸಾಲ–ಸೌಲಭ್ಯ ಸಹಾಯಧನದಲ್ಲಿ ೨೦೦೯ ರಿಂದ ಬದಲಾವಣೆ ಗೊಂಡಿರುವುದನ್ನು ಕಾಣುತ್ತೇವೆ. ಪ್ರಸ್ತುತ ಸ್ವಯಂ ಉದ್ಯೋಗ ಕೈಗೊಳ್ಳುವ ವ್ಯಕ್ತಿಗೆ ಉದ್ಯಮದ ಗರಿಷ್ಟ ವೆಚ್ಚ ರೂ ೨ ಲಕ್ಷ, ಸಹಾಯಧನ ರೂ ೫೦,೦೦೦, ಅಂದರೆ ಯೋಜನಾ ಮೊತ್ತದ ಶೇಕಡ ೨೫ ರಷ್ಟು, ಇನ್ನುಳಿದ ೫ ರಷ್ಟು ಮಾರ್ಜಿನ್ ಹಣ, ಉಳಿದ ಶೇಕಡ ೭೦ ರಷ್ಟು ಹಣವನ್ನು ಸಾಲದ ರೂಪದಲ್ಲಿ ಬ್ಯಾಂಕ್ ನೀಡಬೇಕಾಗುತ್ತದೆ ಇದರಿಂದ ಜನರಿಗೆ ಉದ್ಯೋಗವನ್ನು ದೊಡ್ಡ ಪ್ರಮಾಣದಲ್ಲಿ ಹಮ್ಮಿಕೊಳ್ಳಲು ನೆರವಾಗಿದೆ.

ನಗರ ಪ್ರದೇಶಗಳಲ್ಲಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮದಲ್ಲಿಯೂ ಸಹ ಈ ಹಿಂದೆ ರೂ ೧,೨೫,೦೦೦ ರವರೆಗೆ ಸಹಾಯಧನವನ್ನಾಗಿ ಅಥವಾ ಯೋಜನಾ ಮೊತ್ತದ ಗರಿಷ್ಟ ೫೦ ರಷ್ಟು ಇವೆರಡರಲ್ಲಿ ಯಾವುದು ಕನಿಷ್ಟವೋ ಆ ಮೊತ್ತವನ್ನು ನೀಡಲಾಗುತ್ತಿತ್ತು. ಪ್ರಸ್ತುತ ಉಂಟಾದ ಬದಲಾವಣೆಯಂತೆ ರೂ ३,೦೦೦೦೦ ವರೆಗೆ ಅಥವಾ ಯೋಜನಾ ಮೊತ್ತದ ಶೇಕಡ ३೫ ರಷ್ಟು ಹಣವನ್ನು ಸಹಾಯಧನವಾಗಿ ಅಥವಾ ಪ್ರತಿ ವ್ಯಕ್ತಿಗೆ ರೂ ೬೦,೦೦೦ ದಂತೆ ನೀಡುವುದಾಗಿದೆ. ಈ ಕಾರ್ಯಕ್ರಮದಲ್ಲಿ ಉದ್ಯಮದ ಘಟಕದ ವೆಚ್ಚಕ್ಕೆ ಗರಿಷ್ಟ ಮಿತಿ ಇಲ್ಲದಿರುವುದು, ಇದರಿಂದಾಗಿ ದೊಡ್ಡ ಪ್ರಮಾಣದ ಬಂಡವಾಳ ಹೂಡಿಕೆ ಮಾಡಿ ಗುಂಪಿನ ಮೂಲಕ ಉದ್ಯಮ ನಡೆಸಲು ಸಹಾಯಕವಾಗಿರುವುದು ಈ ಅಧ್ಯಯನದಿಂದ ಕಂಡು ಬಂದಿದೆ.

ಸ್ವ ಸಹಾಯ ಗುಂಪುಗಳಿಗೆ ಈ ಹಿಂದೆ ಗರಿಷ್ಟ ಮಿತಿ ರೂ ೧೦೦೦ ಕ್ಕೆ ಒಳಪಟ್ಟು ೨೫,೦೦೦ ವರೆಗೆ ರಿವಾಲ್ವಿಂಗ್ ಫಂಡ್ ಲಭ್ಯವಾಗುತ್ತಿತ್ತು. ನಂತರದಲ್ಲಿ ಪ್ರತಿ ಸದಸ್ಯರಿಗೆ ರೂ ೨,೦೦೦ ದಂತೆ ರಿವಾಲ್ವಿಂಗ್ ಫಂಡ್ ರೂಪದಲ್ಲಿ ಸದಸ್ಯರಿಗೆ ಲಭ್ಯವಾಗುತ್ತಿದ್ದು ಗರಿಷ್ಟ ಮಿತಿ ೨೫,೦೦೦೦ ಗಳಾಗಿದೆ. ಕೌಶಲ್ಯಾಭಿವೃದ್ಧಿ ತರಬೇತಿಗೆ ಯೋಜನೆಯ ಪ್ರಾರಂಭದಲ್ಲಿ ಪ್ರತಿಯೊಬ್ಬ ತರಬೇತಿದಾರನಿಗೆ ರೂ ೨,೦೦೦ ವರೆಗೆ ಗರಿಷ್ಠ ಹಣ ವ್ಯಯ ಮಾಡಲಾಗುತ್ತಿತ್ತು. ಪ್ರಸ್ತುತ ಬದಲಾದ ನಿಯಮಾವಳಿಯಂತೆ ಪ್ರತಿ ವ್ಯಕ್ತಿಯ ತರಬೇತಿಗೆ ಸರ್ಕಾರವು ರೂ ೧೦,೦೦೦ ವ್ಯಯ ಮಾಡುತ್ತಿರುವುದು

ಕಂಡು ಬರುತ್ತದೆ. ಈ ಹಿಂದೆ ಇದ್ದ ಸಾಮಾಜಿಕ ಸೇವಾ ಕಾರ್ಯಕ್ರಮ ಎಂಬ ಹೆಸರಿನ ಯೋಜನೆಯನ್ನು ಬದಲಾಯಿಸಿ ನಗರ ಸಮುದಾಯ ಅಭಿವೃದ್ಧಿ ನೆಟ್‌ವರ್ಕ್ ಎಂಬ ಹೆಸರಿನಲ್ಲಿ ಜಾರಿಗೆ ತಂದು ಸಾಂಘಿಕ ವ್ಯವಸ್ಥೆಯನ್ನು ಬಲಪಡಿಸುತ್ತಿರುವುದು ಈ ಅಧ್ಯಯನದಲ್ಲಿ ಕಂಡು ಕೊಳ್ಳಲಾಗಿದೆ.

ಈ ಯೋಜನೆಯಲ್ಲಿ ಸರ್ಕಾರವು ಅತಿ ಹಿಂದುಳಿದ ಜನಾಂಗಕ್ಕೆ ಹೊಸದಾಗಿ ಸ್ಪೆಷಲ್ ಕಂಪೋನೆಂಟ್ ಪ್ರೋಗ್ರಾಮ್ ಜಾರಿಗೆ ತಂದಿದ್ದು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರಿಗೆ ಯುಎಸ್‌ಇಪಿ ಮತ್ತು ಕೌಶಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮಗಳಲ್ಲಿ ವಿಶೇಷ ಆದ್ಯತೆಯನ್ನು ನೀಡುತ್ತಿರುವುದು ಕಂಡು ಬರುತ್ತದೆ.

**೫.೧. ಅಧ್ಯಯನದ ಫಲಿತಾಂಶಗಳು:**

೧. ಸಾಮಾಜಿಕ ಕ್ಷೇತ್ರದಲ್ಲಿ ಮಹಿಳೆ ಮತ್ತು ಪುರುಷರಿಬ್ಬರೂ ಕೂಡಾ ಆರ್ಥಿಕವಾಗಿ ಸಬಲರಾಗುತ್ತಿರುವುದು ಮತ್ತು ವೇದಗಳ ಕಾಲಕ್ಕಿಂತಲೂ ಹೆಚ್ಚನ ರೀತಿಯಲ್ಲಿ ಮಹಿಳೆಯು ಸ್ಥಾನಮಾನಗಳನ್ನು ಪಡೆಯುತ್ತಿರುವುದು, ಆಧುನಿಕ ಸಮಾಜದಲ್ಲಿ ಜನರು ಸರ್ಕಾರದ ಯೋಜನೆಗಳನ್ನು ಸದುಪಯೋಗ ಮಾಡಿಕೊಳ್ಳುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ.

೨. ಎಸ್‌ಜೆಎಸ್‌ಆರ್‌ವೈ ಸರ್ಕಾರದ ಯೋಜನೆಯು ಬಡತನ ರೇಖೆಗಿನ ಕೆಳ ಕುಟುಂಬದವರಿಗಾಗಿ ಇದ್ದು, ಇದು ಬಡವರಿಗಾಗಿಯೇ ಅನುದಾನ ಸಾಲ ಸೌಲಭ್ಯ ನೀಡುತ್ತಿರುವುದು, ಎಸ್‌ಜೆಎಸ್‌ಆರ್‌ವೈ ಯೋಜನೆ ಅಡಿಯಲ್ಲಿ ಫಲಾನುಭವಿಯಾಗಿರುವ ಪುರುಷ ಮತ್ತು ಮಹಿಳೆಯ ಕುಟುಂಬದ ಜೀವನ ಮಟ್ಟದಲ್ಲಿ ಬದಲಾವಣೆ ಕಂಡು ಬಂದಿದೆ. ಈ ಯೋಜನೆಯ ಫಲಾನುಭವಿಯಾವುದಕ್ಕಿಂತ ಮುಂಚಿನ ಜೀವನ ಮಟ್ಟಕ್ಕೂ ಯೋಜನೆಯ ಫಲಾನುಭವಿಯಾದ ನಂತರದ ಜೀವನ ಮಟ್ಟಕ್ಕೂ ವ್ಯತಾಸ ಕಂಡು ಬಂದಿದ್ದು, ಜೀವನ ಮಟ್ಟದಲ್ಲಿ ಸುಧಾರಣೆಯಾಗುತ್ತಿರುವುದು.

೩. ಪ್ರಾಚೀನ ಕಾಲ, ವೇದಗಳ ಕಾಲ, ಮಧ್ಯಯುಗಕ್ಕಿಂತಲೂ ಆಧುನಿಕ ಯುಗದಲ್ಲಿ ಅದರಲ್ಲೂ ಈ ಯೋಜನೆಯ ಫಲಾನುಭವಿಯಾದ ನಂತರದಲ್ಲಿ ಮಹಿಳೆಯು ವಿವಿಧ ರಂಗಗಳಲ್ಲಿ ತನ್ನದೇ ಆದ ಸ್ಥಾನಮಾನಗಳನ್ನು ಹೊಂದುತ್ತಿದ್ದಾಳೆ, ಯಾವುದೇ ತೀರ್ಮಾನ/ನಿರ್ಣಯ ಕೈಗೊಳ್ಳುವ ಸಂಧರ್ಭ ಬಂದಾಗ ಗಂಡ-ಹೆಂಡತಿ ಇಬ್ಬರೂ ಸಹ ಪರಸ್ಪರ ಚರ್ಚೆ ಮೂಲಕ ನಿರ್ಣಯದ ಹಂತಕ್ಕೆ ಬರುತ್ತಿರುವುದನ್ನು ಕಂಡುಕೊಳ್ಳುವುದರ ಮೂಲಕ ಪುರುಷನು ಮಹಿಳೆಗೆ ತನ್ನದೇ ಆದ ಗೌರವ-ಸ್ಥಾನಮಾನವನ್ನು ಕುಟುಂಬದಲ್ಲಿ ನೀಡುತ್ತಿರುವುದು ಹಾಗೂ ಕುಟುಂಬದಲ್ಲಿ ನಿರ್ಣಯ ಕೈಗೊಳ್ಳುವಲ್ಲಿ ಮಹಿಳೆಯು ತನ್ನದೇ ಆದ ಪಾತ್ರವನ್ನು ವಹಿಸುವುದರ ಜೊತೆಗೆ ಕುಟುಂಬದಾಚೆಗಿನ ವಿಷಯಗಳಲ್ಲೂ ಸಹ ಮಹಿಳೆಯು ಪುರುಷನಿಗೆ ಸಮನಾಗಿ ತೀರ್ಮಾನ ತೆಗೆದುಕೊಳ್ಳುತ್ತಿರುವುದು ಕಂಡು ಬಂದಿದೆ.

೪. ರಾಜಕೀಯ ಕ್ಷೇತ್ರವೆಂಬುದು ಪುರುಷನಿಗೆ ಮಾತ್ರ ಮಹಿಳೆಯು ಮನೆಗೆ ಸೀಮಿತ ಎಂಬ ತಪ್ಪು ಕಲ್ಪನೆಯಿತ್ತು. ಈ ಯೋಜನೆಯ ಫಲಾನುಭವಿಯಾದ ನಂತರ ಮಹಿಳೆಯು ಸಹ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಪ್ರವೇಶಿಸಿ ರಾಜಕೀಯ ಸ್ಥಾನಮಾನಗಳನ್ನು ಹೊಂದಿರುವುದು ಚುನಾವಣಾ ಪ್ರಚಾರದಲ್ಲಿ ಭಾಗವಹಿಸುತ್ತಿರುವುದು ಹಾಗೂ ಸಮುದಾಯ ಚಟುವಟಿಕೆಗಳಲ್ಲಿ, ಧಾರ್ಮಿಕ ಚಟುವಟಿಕೆಗಳಲ್ಲಿ ಅಸಮಾನತೆಯನ್ನು ಹೋಗಲಾಡಿಸುವ ಕೆಲಸದಲ್ಲಿ, ವರದಕ್ಷಿಣೆ ಕಿರುಕುಳದ ಬಗ್ಗೆ ಹೋರಾಟ, ಮದ್ಯಪಾನ ವಿರೋಧಿ ಹೋರಾಟ ಇತ್ಯಾದಿ ಸಮಾಜ ಮುಖಿ ಕೆಲಸ/ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವುದನ್ನು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

೫. ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ ಎಂಬ ಗಾದೆ ಮಾತಿನಂತೆ ಮಹಿಳೆ ಕುಟುಂಬದಲ್ಲಿ ಮಗುವಿಗೆ ಮೊದಲ ಗುರುವಾಗಿ ಶಿಕ್ಷಣ ನೀಡುತ್ತಾಳೆ, ಈ ಯೋಜನೆಯಲ್ಲಿ ಉನ್ನತ ಶಿಕ್ಷಣಕ್ಕಾಗಿ ತಾನು ಕೈಗೊಂಡಿರುವ ಉದ್ದಿಮೆಯಲ್ಲಿ ಬರುವ ಆದಾಯದಿಂದ ಮಕ್ಕಳ ಶಿಕ್ಷಣದ ಉದ್ದೇಶಕ್ಕಾಗಿ ಬಳಸುತ್ತಿರುವುದು, ಮನೆಯ ದೈನಂದಿನ ಖರ್ಚ-ವೆಚ್ಚಗಳಿಗಾಗಿ ಹಾಗೂ ತನ್ನ ವೈಯಕ್ತಿಕ ಖರ್ಚಿಗಾಗಿ ಅನುಕೂಲಕರವಾಗಿರುವುದು, ಆಮೂಲಕ ಲೇವಾದೇವಿ ವ್ಯವಹಾರದ ಸುಳಿಯಿಂದ ನಿಟ್ಟುಸಿರು ಬಿಟ್ಟಿರುವುದನ್ನು, ಆತ್ಮಸಂತೋಷದಿಂದ ಜೀವನ ಸಾಗಿಸುತ್ತಿರುವುದು ಕಂಡು ಬಂದಿದೆ.

೬. ಈ ಅಧ್ಯಯನದಲ್ಲಿ ಕುಟುಂಬದ ವಾರ್ಷಿಕ ಆದಾಯವನ್ನು ಅಳತೆಗೋಲಾಗಿ ಪರಿಗಣಿಸಿ ಹಿಂದಿನ ಮತ್ತು ಇಂದಿನ ಆದಾಯದ ವ್ಯತ್ಯಾಸವನ್ನು ತುಲನಾತ್ಮಕವಾಗಿ ನೋಡಿದಾಗ ಎಸ್‌ಜೆಎಸ್‌ಆರ್‌ವೈ ಯೋಜನೆಗೆ ಸೇರಿದ ನಂತರದಲ್ಲಿ ಕುಟುಂಬದ ವಾರ್ಷಿಕ ಆದಾಯದಲ್ಲಿ ಹೆಚ್ಚಳವಾಗಿದ್ದು, ಜನರಲ್ಲಿ ಕೊಳ್ಳುವ ಶಕ್ತಿಯು ಸಹ ಹೆಚ್ಚಾಗಿರುವುದು ಕಂಡು ಬಂದಿದೆ.

೭. ನಗರ ಪ್ರದೇಶದಲ್ಲಿ ಈ ಯೋಜನೆಯ ಫಲಾನುಭವಿಯಾದನಂತರ ಶೇಕಡ ೯೩.೬೬ ರಷ್ಟು ಜನರು ಬ್ಯಾಂಕ್ ಖಾತೆಯನ್ನು ಹೊಂದಿದ್ದಾರೆ. ಈ ಹಿಂದೆ ಶೇಕಡ ೧೯ ರಷ್ಟಿದ್ದ ಬ್ಯಾಂಕ್ ಖಾತೆದಾರರ ಸಂಖ್ಯೆ ಯೋಜನೆ ನಂತರದಲ್ಲಿ ಹೆಚ್ಚಳಗೊಂಡಿರುವುದು ಹಾಗೂ ಬ್ಯಾಂಕ್ ವ್ಯವಹಾರಗಳಲ್ಲಿ ಪುರುಷರಂತೆ ಮಹಿಳೆಯೂ ಸಹ ಹೆಚ್ಚಾಗಿ ಭಾಗವಹಿಸುತ್ತಿರುವುದು. ಈ ಯೋಜನೆಯ ಫಲಾನುಭವಿಯಾದ ನಂತರ ಕುಟುಂಬಕ್ಕೆ ಅಗತ್ಯವಾದ ಮೂಲ ಸೌಕರ್ಯಗಳಾದ ಕುಡಿಯುವ ನೀರಿನ ನಳ ಸಂಪರ್ಕ, ಒಳಚರಂಡಿ ಸಂಪರ್ಕ, ಶೌಚಾಲಯ ಇತ್ಯಾದಿಗಳನ್ನು ಪಡೆದುಕೊಳ್ಳಲು ಸಹಕಾರಿಯಾಗಿದೆ.

೮. ತರಬೇತಿ ಕಾರ್ಯಕ್ರಮವು ಈ ಯೋಜನೆಯ ಅತ್ಯಂತ ಮಹತ್ವವಾದ ಅಂಗವಾಗಿದ್ದು, ತರಬೇತಿಯನ್ನು ಪಡೆದ ಎಲ್ಲರೂ ಉದ್ಯೋಗವನ್ನು ಪಡೆದಿರುವುದಿಲ್ಲ. ವೃತ್ತಿಯಾಧಾರಿತ ತರಬೇತಿಯನ್ನು ಕೇಂದ್ರ ಸರ್ಕಾರವು ಜಾರಿಗೆ ತಂದಿದ್ದು, ಅದರಂತೆ ತರಬೇತಿ ನೀಡಿ ಅಗತ್ಯವಿರುವ ಕಡೆ ಉದ್ಯೋಗ

ನೀಡುವುದು, ಈ ಕಾರ್ಯಕ್ರಮವು ತನ್ನದೇ ಆದ ರೂಪ ರೇಷೆಗಳನ್ನು ಬದಲಾಯಿಸಿಕೊಂಡು ಆಧುನಿಕ ಸಮಾಜಕ್ಕೆ ಅಗತ್ಯವಾಗಿ ಬೇಕಾಗಿರುವ ಬೇಡಿಕೆಗಳ ಆಧಾರದ ಮೇಲೆ ತರಬೇತಿಗಳನ್ನು ನೀಡುವ ಕೆಲಸ ಮಾಡಬೇಕಾಗಿದೆ.

೯. ಕಾಲ ಕಾಲಕ್ಕೆ ಬದಲಾಗುತ್ತಿರುವ ಬೆಲೆ ಸೂಚ್ಯಂಕ ಆದರಿಸಿ, ಹಣದುಬ್ಬರ ಏರಿಳಿತಗೊಂಡಂತೆ ಬದಲಾದ ಸ್ಥಿತಿಗತಿಗಳಿಗನುಗುಣವಾಗಿ ಮತ್ತು ಯೋಜನೆಯ ಸಾಫಲ್ಯತೆಯನ್ನು ಮನಗಂಡು ಸಾಲ ಸೌಲಭ್ಯ ಮತ್ತು ಸಹಾಯಧನದಲ್ಲಿ ಸರ್ಕಾರವು ಹೆಚ್ಚಳ ಮಾಡುತ್ತಿರುವುದು ಒಳ್ಳೆಯ ಬೆಳವಣಿಗೆಯಾಗಿದೆ. ಫಲಾನುಭವಿಯು ಉದ್ಯಮದ ಜೊತೆಗೆ ಉಪ ಕಸುಬುಗಳಾದ ಕೋಳಿ ಸಾಕಾಣೆಕೆ, ಊದಿನ ಕಡ್ಡಿ ತಯಾರಿಕೆ, ಮೇಣದ ಬತ್ತಿ ತಯಾರಿಕೆ, ಬ್ಯಾಗ್ ತಯಾರಿಸುವದು, ಬಟ್ಟೆ ವ್ಯಾಪಾರ ಹಾಗೂ ಟೈಲರಿಂಗ್ ಕೆಲಗಳಲ್ಲೂ ಸಹ ತೊಡಗಿಕೊಂಡಿರುವುದು.

೧೦. ಜನರು ಯೋಜನೆಯ ಸದುಪಯೋಗವನ್ನು ಮಾಡಿಕೊಳ್ಳುತ್ತಿರುವದನ್ನು ಮನಗಂಡ ಸರ್ಕಾರವು ಯೋಜನೆಯ ಪ್ರಾರಂಭದಲ್ಲಿದ್ದ ಸಾಮಾಜಿಕ ಸೇವಾ ಕಾರ್ಯಕ್ರಮವನ್ನು ಸಮುದಾಯ ಅಭಿವೃದ್ಧಿ ನೆಟ್‌ವರ್ಕ್ ಎಂಬ ಹೆಸರಿನಲ್ಲಿ ಜಾರಿಗೆ ತಂದಿದ್ದು, ಬಡತನ ರೇಖೆಯಲ್ಲಿರುವ ಕುಟುಂಬಗಳಿಗೂ ಪರಿಗಣಿಸಿರುವುದರಿಂದ ಇನ್ನೂ ಹೆಚ್ಚಿನ ರೀತಿಯಲ್ಲಿ ಈ ಯೋಜನೆಯ ಫಲಾನುಭವಿಗಳ ಸೇರ್ಪಡೆ ಹೆಚ್ಚಾಗುತ್ತಿರುವುದು, ಕುಟುಂಬದ ವಾರ್ಷಿಕ ಮತ್ತು ತಲಾ ಆದಾಯದಲ್ಲಿ ಹೆಚ್ಚಳ ಕಂಡು ಬಂದಿದೆ. ಕುಟುಂಬದ ಸದಸ್ಯರ ಪ್ರತಿ ವ್ಯಕ್ತಿಯ ಅನುಭೋಗ ಮತ್ತು ವೆಚ್ಚ ಮಾಡು ಸಾಮರ್ಥ್ಯ ವೃದ್ಧಿಯಾಗಿರುವುದು.

೧೧. ನಗರ ಪ್ರದೇಶದ ಕುಟುಂಬಗಳ ಬಡತನದಲ್ಲಿ ಇಳಿಕೆ ಕಂಡು ಬಂದಿರುವುದು. ಯೋಜನಾ ಆಯೋಗವು ಪ್ರತಿ ವರ್ಷ ಬಡತನ ರೇಖೆ ಮತ್ತು ಬಡತನದ ಅನುಪಾತವನ್ನು ಅಂದಾಜು ಮಾಡಲು ಕಮಿಟಿಗಳನ್ನು ರಚಿಸುತ್ತದೆ. ಈ ಕಮಿಟಿಯು ನೀಡಿರುವ ಅಂಕಿ ಅಂಶಗಳನ್ನು ಗಮನಿಸಿದಾಗ ನಗರ ಪ್ರದೇಶದ ಬಡತನವು ೧೯೯೩-೯೪ ರಲ್ಲಿ ೩೧.೮ ರಷ್ಟಿದ್ದು, ೨೦೧೧-೧೨ ರಲ್ಲಿ ಇದರ ಪ್ರಮಾಣ ೧೩.೭ ಕ್ಕೆ ಇಳಿದಿರುವುದು. ಸ್ವಯಂ ಉದ್ಯೋಗ ಕಾರ್ಯಕ್ರಮದ ಅಡಿಯಲ್ಲಿ ಫಲಾನುಭವಿಗಳಾಗಿರುವ ಪುರುಷರು ಹೆಚ್ಚಾಗಿ ಆಟೋರಿಕ್ಷಾವನ್ನೇ ಪಡೆದುಕೊಂಡಿದ್ದು, ಇತರೆ ಉದ್ಯೋಗಳಾದ ಟರ್ನರ್, ಫಿಟ್ಟರ್, ವೆಲ್ಡಿಂಗ್, ಪ್ಲಂಬರ್ ಇತ್ಯಾದಿಗಳಿಗೆ ಹೆಚ್ಚು ಗಮನಹರಿಸಿರುವುದಿಲ್ಲ.

೧೨. ಈ ಅಧ್ಯಯನದಲ್ಲಿ ಕಂಡು ಕೊಂಡ ಮತ್ತೊಂದು ಅಂಶವೇನೆಂದರೆ ಹೆಚ್ಚು ವಿದ್ಯಾರ್ಹತೆಯುಳ್ಳವರು ತರಬೇತಿ ಕಾರ್ಯಕ್ರಮಗಳಲ್ಲಿ ಮಾತ್ರ ಹೆಚ್ಚಾಗಿ ಭಾಗವಹಿಸಿ ಕಂಪ್ಯೂಟರ್, ಬ್ಯೂಟಿಪಾರ್ಲರ್, ಟೈಲರಿಂಗ್ ತರಬೇತಿಗೆ ಹೆಚ್ಚಾಗಿ ಗಮನವಹಿಸಿರುವುದು ಕಂಡು ಬರುತ್ತದೆ.

೧೩. ಅವಿವಾಹಿತರಿಗಿಂತ ವಿವಾಹಿತ ಪುರುಷ ಮತ್ತು ಮಹಿಳೆಯರೇ ಹೆಚ್ಚಾಗಿ ಈ ಯೋಜನೆಯ ಪ್ರಯೋಗ ಪಡೆದುಕೊಂಡಿದ್ದು, ಅವಿವಾಹಿತ ಪುರುಷ ಮತ್ತು ಮಹಿಳೆಯರು ಕಡಿಮೆ ವಿದ್ಯಾಭ್ಯಾಸವನ್ನು ಹೊಂದಿದ್ದರೂ ಸಹ ಹೆಚ್ಚಾಗಿ ಆಕರ್ಷಿತರಾಗಿರುವುದಿಲ್ಲ. ಈ ಯೋಜನೆಯಲ್ಲಿ ಗರಿಷ್ಟ ಮಟ್ಟದಲ್ಲಿ ಸ್ವಂತ ಮನೆ ಹೊಂದಿರುವವರೇ ಹೆಚ್ಚು ಫಲಾನುಭವಿಗಳಾಗಿದ್ದಾರೆ. ಸ್ವ ಸಹಾಯ ಸಂಘಗಳಿಂದ ಸಾಲ ಪಡೆದವರು ಹೆಚ್ಚಾಗಿ ಕಾಯಿಪಲ್ಲೆ ವ್ಯಾಪಾರ ಮಾಡುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ.

೧೪. ಸ್ವಯಂ ಉದ್ಯೋಗಕ್ಕೆ ಹೆಚ್ಚಾಗಿ ೪೫ ರಿಂದ ೫೯ ಮತ್ತು ೩೦ ರಿಂದ ೪೪ ರ ವಯಸ್ಸಿನವರೇ ಒಲವು ತೋರಿರುವುದು ಈ ಅಧ್ಯಯನದಿಂದ ಕಂಡು ಬಂದಿದೆ. ಈ ಯೋಜನೆಯಲ್ಲಿ ಮುಖ್ಯವಾಗಿ ೪ ಕಾರ್ಯಕ್ರಮಗಳು ಜಾರಿಯಲ್ಲಿದ್ದರೂ ಸಹ ಎಲ್ಲಾ ಫಲಾನುಭವಿಗಳು ಸಂಪೂರ್ಣ ಕಾರ್ಯಕ್ರಮಗಳ ಪರಿಕಲ್ಪನೆಗಳಲ್ಲಿ ತಿಳುವಳಿಕೆ ಹೊಂದಿಲ್ಲದಿರುವುದು ತಾವು ಅಳವಡಿಸಿಕೊಂಡಿರುವ ಉದ್ಯೋಗ/ ಕಾರ್ಯಕ್ರಮದ ಬಗ್ಗೆ ಮಾತ್ರ ತಿಳುವಳಿಕೆ ಹೊಂದಿದವರಾಗಿರುವುದು, ಗುಂಪು ಉದ್ಯೋಗದಲ್ಲಿ ಸದಸ್ಯರಾಗಿರುವ ಮಹಿಳೆಯರೇ ಇಲ್ಲಿ ಉದ್ಯೋಗಿಗಳಾಗಿ ದುಡಿಯುತ್ತಿರುವುದು ಹೆಚ್ಚು ಉತ್ಪಾದನೆಗೆ ಸಹಕಾರಿಯಾಗಿರುವುದು, ಗುಂಪು ಉದ್ಯೋಗವನ್ನು ಕೈಗೊಳ್ಳಲು ಸರ್ಕಾರವು ವಾರ್ಷಿಕವಾಗಿ ನಿಗದಿಪಡಿಸುತ್ತಿರುವ ಗುರಿ ಅತಿ ಕಡಿಮೆ ಪ್ರಮಾಣವೆಂಬುದು ಅಧ್ಯಯನದಿಂದ ತಿಳಿದು ಬಂದಿದೆ.

೧೫. ಈ ಯೋಜನೆಯಲ್ಲಿ ಪುರುಷ ಫಲಾನುಭವಿಗಳಿಗಿಂತಲೂ ಹೆಚ್ಚಾಗಿ ಮಹಿಳೆಯರು ಹೆಚ್ಚು ಲಾಭ ಪಡೆಯುತ್ತಿರುವುದು ಕಂಡು ಬರುತ್ತದೆ. ಕಾರಣ ಪುರುಷರಿಗೆ ಸ್ವಯಂ ಉದ್ಯೋಗ ಕಾರ್ಯಕ್ರಮ ಮತ್ತು ತರಬೇತಿ ಕಾರ್ಯಕ್ರಮಗಳಲ್ಲಿ ಮಾತ್ರ ಭಾಗವಹಿಸಲು ಅವಕಾಶವಿದೆ. ಮಹಿಳೆಯರಿಗೆ ಈ ಯೋಜನೆಯ ಎಲ್ಲ ಕಾರ್ಯಕ್ರಮಗಳಲ್ಲಿ ಫಲಾನುಭವಿಯಾಗಲು ಅವಕಾಶವಿರುವುದನ್ನು ಕಂಡು ಕೊಳ್ಳಲಾಗಿದೆ.

೧೬. ಗುಂಪು ಉದ್ಯೋಗ ಕೈಗೊಳ್ಳುವುದರಿಂದ ಸಮಯದ ಉಳಿತಾಯ, ಸಾಲ ಸೌಲಭ್ಯದ ಬಿಡುಗಡೆಗೆ ವಿಳಂಬ, ಮಾರುಕಟ್ಟೆ, ಕಚ್ಚಾವಸ್ತುಗಳ ಕೊಂಡು ಕೊಳ್ಳುವಿಕೆಯಲ್ಲಿ ಹೂಡುವ ಬಂಡವಾಳ ಇತ್ಯಾದಿ ಸುಗಮವಾಗಿ ಸಾಗಲು ಅನುಕೂಲಕರವಾಗಿರುವುದು ಹಾಗೂ ಈ ಯೋಜನೆಯ ಫಲಾನುಭವಿಯಾದ ನಂತರ ೨೫೭ ಜನರು ಸ್ವಂತ ಮೊಬೈಲ್ ಬಳಕೆ ಮಾಡುತ್ತಿರುವುದು ಕಂಡು ಬಂದಿದೆ. ೧೯೭ ಜನರು ಈ ಯೋಜನೆಗೆ ಸೇರಿದ ನಂತರದಲ್ಲಿ ಗ್ಯಾಸ್ ಒಲೆ ಇತ್ಯಾದಿ ಹೊಂದಿರುವುದು, ಜೀವನ ಮಟ್ಟದಲ್ಲಿ ಸುಧಾರಣೆಯಾಗುತ್ತಿದೆ ಎನ್ನುವುದಕ್ಕೆ ಕಾರಣವಿದೆ.

೧೭. ಪ್ರಸ್ತುತ ನಗರ ಪ್ರದೇಶದಲ್ಲಿ ಅತಿ ಹೆಚ್ಚು ಬೇಡಿಕೆಯಲ್ಲಿರುವ ಪ್ಲಂಬರ್ ಉದ್ಯೋಗದ ಕಡೆಗೆ ಹೆಚ್ಚು ಜನರು ಆಸಕ್ತಿ ತೋರದಿರುವುದು, ಉದ್ಯೋಗ

ಕೈಗೊಳ್ಳಲು ಮಹಿಳೆಗೆ ಸಂಪೂರ್ಣವಾಗಿ ಪುರುಷರಿಂದ ಬೆಂಬಲ ದೊರೆತಿರುವುದು ಮತ್ತು ಮಹಿಳೆಯರು ಬ್ಯಾಂಕ್ ವ್ಯವಹಾರದ ಕಡೆಗೆ ಹೆಚ್ಚಾಗಿ ಗಮನವಹಿಸಿರುವುದು ಅಧ್ಯಯನದಿಂದ ಕಂಡು ಬಂದಿದೆ.

**೫.೨. ಗಮನಿಸಿದ/ಕಂಡುಕೊಂಡ ಅಂಶಗಳು:**

ಜಾಗತೀಕರಣ, ಸ್ಫೋಟಗೊಳ್ಳುತ್ತಿರುವ ಜನಸಂಖ್ಯೆ, ಏರುಪೇರಾದ ಹವಾಮಾನ ವೈಪರೀತ್ಯಗಳು, ಕೈಗಾರೀಕರಣದ ಅಭಿವೃದ್ಧಿ ಹೀಗೆ ಹತ್ತು ಹಲವಾರು ಕಾರಣಗಳಿಂದ ನಗರೀಕರಣ ಪ್ರಕ್ರಿಯೆ ಹಿಂದೆಂದಿಗಿಂತಲೂ ಈಗ ತೀವ್ರವಾಗಿರುವುದು ಕಂಡು ಬರುತ್ತದೆ. ಇಂತಹ ಸಂದರ್ಭದಲ್ಲಿ ನಗರ ಪ್ರದೇಶದ ಸಾರ್ವಜನಿಕ ಮೂಲಭೂತ ಸೌಕರ್ಯಗಳಿಗೆ ಮೂಲ ಪೆಟ್ಟು ಎನ್ನಬಹುದು, ಅದೂ ಕುಡಿಯುವ ಶುದ್ಧ ನೀರಿರಬಹುದು ಅಥವಾ ವಾಸಿಸಲು ಸೂಕ್ತ ಸೂರು ಇರಬಹುದು, ಎಲ್ಲದಕ್ಕೂ ಕೊರತೆ ಎದ್ದು ಕಾಣುವುದು ಸ್ವಾಭಾವಿಕ. ಈ ಎಲ್ಲ ಸಮಸ್ಯೆಗಳು ಸಾಮಾನ್ಯವಾಗಿ ಕೊಳಗೇರಿ ನಿರ್ಮಾಣಕ್ಕೆ ಕಾರಣವಾಗುವವು ಎಂದು ಸಾಮಾಜಿಕ ವಿಜ್ಞಾನಿಗಳ ಅನುಭವ. ಸಂಪಾದನೆಯ ಮಟ್ಟ ತುಂಬಾ ಕಡಿಮೆ ಇರುವ ಅನೇಕ ಕುಟುಂಬಗಳಿಗೆ ನಗರದ ಥಳಕು, ಬಳಕು, ವೈಭವ, ಆಡಂಬರ ಹೆಚ್ಚು ಸಂಪಾದನೆಯಂತೂ ಖಂಡಿತ ಸಾಲದು ಎಂಬುದು ಕಟು ಸತ್ಯ, ಮಹಿಳೆಗೆ ಕ್ರಮೇಣ ಅರಿವಾಗುವದು ಇಂತಹ ಸಂದರ್ಭದಲ್ಲಿ ಅವಳು ಆದಾಯ ತರುವಂತಹ ಉತ್ಪನ್ನಕರ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವದು ಸಹಜ. ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಮಸ್ಯೆಯಾದಾಗ ಅವಳು ಮೊರೆ ಹೋಗುವುದು ಲೇವಾದೇವಿದಾರರನ್ನು, ಮಹಿಳೆಯರ ಇಂತಹ ಪರಿಸ್ಥಿತಿಗೋಸ್ಕರವೇ ಕಾಯುತ್ತಿರುವಂತೆ ತೋರುವ ಇವರು ಸಣ್ಣ ಮೊತ್ತಗಳ (ಹೆಚ್ಚು ಬಡ್ಡಿ ದರ) ಸಾಲದಿಂದ ಪ್ರಾರಂಭಿಸಿ ಕ್ರಮೇಣ ಮಹಿಳೆಯರನ್ನು ತಮ್ಮ ಮುಷ್ಟಿಯಲ್ಲಿ ಬಂಧಿಸಿ ಬಿಗಿಗೊಳಿಸುತ್ತಾರೆ. ಇಂತಹ ಲೇವಾದೇವಿದಾರರ ಕಪಿಮುಷ್ಟಿಯಲ್ಲಿ ಸಿಕ್ಕಿ ನಲುಗಿರುವ ಅಸಂಖ್ಯಾತ ಮಹಿಳೆಯರನ್ನು ಕ್ರಮೇಣ ಹೊರತರುವುದೇ ಯೋಜನೆಯ ಮುಖ್ಯ ಗುರಿ. ಈ ಆರ್ಥಿಕ ಪ್ರಗತಿಯ ಜೊತೆಗೆ ಮಹಿಳೆಯ ಸಾಮಾಜಿಕ ಪ್ರಗತಿಯ ಬಗೆಗೆ ಕೂಡ ಅವಕಾಶ ಕಲ್ಪಿಸಿ ಅವಳನ್ನು ಸಾಂಸ್ಥಿಕ ಸಾಲಕ್ಕೆ ಸಮೀಪ ತಂದು ಅವರ ಜೀವನ ಮಟ್ಟವನ್ನು ಗುಣಾತ್ಮಕವಾಗಿ ವೃದ್ಧಿಸುವುದೇ ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯ ಉದ್ದೇಶ.

**ಹ್ಯಾಮಿಲ್ಟನ್ ಎಂಬಾತನು** "ಆರ್ಥಿಕ ಸಂಘಟನೆಯು ಸಮಾಜದಲ್ಲಿನ ಮಾನವನ ಸಮಗ್ರ ಜೀವನದೊಂದಿಗೆ ತೊಡಗಿಕೊಂಡಿದೆ." ಎಂದು ಹೇಳಿದ್ದಾರೆ. **ಕಾರ್ಲಮಾರ್ಕ್ಸ್‌ರವರು** "ಅರ್ಥವ್ಯವಸ್ಥೆಯು ಸಾಮಾಜಿಕಸೌಧದ ಅಸ್ತಿಭಾರವೇ ಆಗಿರುವುದು"ಎಂದಿದ್ದಾರೆ. ಈ ಅಂಶಗಳನ್ನು ಸಾಬೀತುಪಡಿಸಲು ಫಲಾನುಭವಿಗಳು ಸ್ವಯಂ ಉದ್ಯೋಗದ ಮೂಲಕ ಉತ್ಪಾದನೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಒಟ್ಟಾರೆಯಾಗಿ ಜನರಲ್ಲಿ ಅರ್ಹತೆ, ಶಿಕ್ಷಣದ ಅರಿವು, ಅರೋಗ್ಯ ಇದ್ದಲ್ಲಿ ಯಾವುದೇ ಬಡತನ ಸುಳಿಯಲು ಸಾಧ್ಯವಿಲ್ಲ ಎಂಬುದು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

**೫.೩. ಪ್ರಮುಖವಾದ ಸಲಹೆಗಳು:**

ಈ ಅಧ್ಯಯನದಲ್ಲಿ ಸಮಸ್ಯೆಗಳನ್ನು ಅವಲೋಕಿಸಿದ ನಂತರ ಎಸ್.ಜೆ.ಎಸ್.ಆರ್.ವೈ ಯೋಜನೆಯಲ್ಲಿನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಕೆಲವು ಸಲಹೆಗಳನ್ನು ನೀಡಲಾಗಿದೆ. ಯೋಜನೆಯನ್ನು ಜಾರಿಗೊಳಿಸುವ ಸಮಯದಲ್ಲಿ ಮತ್ತು ಫಲಾನುಭವಿಗಳಿಗೆ ಸಹಾಯಧನ ಒದಗಿಸುವ ಅಥವಾ ಬಿಡುಗಡೆ ಮಾಡುವ ವಿಷಯವಾಗಿ, ಫಲಾನುಭವಿಗಳನ್ನು ಆಯ್ಕೆ ಮಾಡಿಕೊಳ್ಳುವ ವಿಷಯವಾಗಿ, ತರಬೇತಿಗೆ ತರಬೇತಿದಾರರನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭಗಳಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಸೂಚಿಸಲಾಗಿದೆ.

೧. ಸ್ವಯಂ ಉದ್ಯೋಗ ಕೈಗೊಳ್ಳುವ ವ್ಯಕ್ತಿಯನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಈ ಹಿಂದೆ ಯಾವುದೇ ಸಣ್ಣ ಪುಟ್ಟ ಉದ್ಯೋಗವನ್ನು ಹೊಂದದೇ ಇರುವುದನ್ನು ಕಡ್ಡಾಯವಾಗಿ ಖಚಿತಪಡಿಸಿಕೊಳ್ಳುವುದು. ಈಗಾಗಲೇ ಸರ್ಕಾರವು ಫಲಾನುಭವಿಗಳ ಆಯ್ಕೆ ಮಾಡುವ ಸಂದರ್ಭದಲ್ಲಿ ಅನುಸರಿಸಬೇಕಾದ ನಿಯಮಗಳ ಜೊತೆಗೆ ಅಕ್ಕಪಕ್ಕದ ಜನರಿಂದ ಮತ್ತು ಆರ್‌ಸಿವಿಗಳಿಂದ ವಿವರಗಳನ್ನು ಕಡ್ಡಾಯವಾಗಿ ಪಡೆದು ಪರಿಶೀಲಿಸಿ ಆ ವ್ಯಕ್ತಿಯು ಯಾವುದೇ ಸಣ್ಣ ಪುಟ್ಟ ಉದ್ಯೋಗವನ್ನು ಈ ಹಿಂದೆ ಹೊಂದದಿರುವುದರ ಬಗ್ಗೆ ಮಾಹಿತಿ ಖಚಿತ ಪಡಿಸಿಕೊಳ್ಳಬೇಕು ಹಾಗೂ ಸಿಡಿಎಸ್ ಗಮನಕ್ಕೆ ತರಬೇಕು.

೨. ಫಲಾನುಭವಿಯನ್ನು ಗುರುತಿಸುವ ಮೌಲ್ಯಮಾಪನದ ನಿಯಮಗಳನ್ನು ಯಾವುದೇ ರಾಜಕೀಯ ಹಿತಾಶಕ್ತಿಗೆ ಒಳಗಾಗದೇ ಕಟ್ಟುನಿಟ್ಟಾಗಿ ಅನುಸರಿಸುವುದು.

೩. ಸ್ವರ್ಣ ಜಯಂತಿ ಶಹರಿ ರೋಜ್ಗಾರ್ ಯೋಜನೆಯನ್ನು ಮೇಲ್ವಿಚಾರಣೆ ಮಾಡಲು ನೇಮಿಸಿರುವ ಅಧಿಕಾರಿ ಸಿಬ್ಬಂದಿಗಳನ್ನು ಪ್ರಸ್ತುತ ಇರುವ ಸಂಖ್ಯೆಗಿಂತ ಶೇ.೧/೪ ಭಾಗದಷ್ಟು ಸಿಬ್ಬಂದಿಗಳನ್ನು ಹೆಚ್ಚಿಸುವುದು, ದೊಡ್ಡ ಪಟ್ಟಣಗಳಲ್ಲಿ ಕೆಲವು ಉಪ ವಿಭಾಗಗಳನ್ನು ತೆರೆಯುವುದು. ಇದರಿಂದ ಇನ್ನೂ ಪರಿಣಾಮಕಾರಿಯಾದ ಮೇಲ್ವಿಚಾರಣೆಗೆ ಅನುಕೂಲವಾಗುವುದು.

೪. ಹುಬ್ಬಳ್ಳಿ-ಧಾರವಾಡದಂತಹ ಮಹಾನಗರಗಳಲ್ಲಿ ಆಡಳಿತದ ದೃಷ್ಟಿಯಿಂದ ರಚಿತವಾಗಿರುವ ವಲಯ ಕಛೇರಿಗಳಲ್ಲಿ ಎಸ್‌ಜೆಎಸ್‌ಆರ್‌ವೈ ಘಟಕಗಳನ್ನು ತೆರೆಯುವದರಿಂದ ಉತ್ತಮ ಮೇಲ್ವಿಚಾರಣೆಗೆ ಅನುಕೂಲವಾಗುತ್ತದೆ.

೫. ಎಸ್‌ಜೆಎಸ್‌ಆರ್‌ವೈ ಯೋಜನೆಯಲ್ಲಿ ಫಲಾನುಭವಿಯಾಗುವದಕ್ಕೆ ಮುಂಚೆ ಮತ್ತು ನಂತರದಲ್ಲಿ ಯಾವುದೇ ಸ್ವಸಹಾಯ ಸಂಘದಲ್ಲಿ ಅಂದರೆ ಇನ್ನಿತರೆ

ಇಲಾಖೆ ಅಥವಾ ಎನ್.ಜಿ.ಓ ಸಂಸ್ಥೆಗಳು ರಚನೆ ಮಾಡುವ ಗುಂಪಿನಲ್ಲಿ ಈ ಯೋಜನೆಯ ಫಲಾನುಭವಿ ಸೇರದಂತೆ ನಿಯಮ ರೂಪಿಸಬೇಕು.

೬. ಸರ್ಕಾರವು ಫಲಾನುಭವಿಗೆ ನೀಡುವ ಸಹಾಯ ಧನವನ್ನು ವಿಳಂಬಕ್ಕೆ ಅವಕಾಶ ನೀಡದಂತೆ ಶೀಘ್ರವಾಗಿ ಪಾವತಿಸುವ ಕ್ರಮ ಕೈಗೊಳ್ಳಬೇಕು.

೭. ಸಮುದಾಯ ಅಭಿವೃದ್ಧಿ ಸಂಘದಲ್ಲಿ ಫಲಾನುಭವಿಗಳ ಆಯ್ಕೆ ಮಾಡುವಾಗ ಯಾವುದೇ ರಾಜಕೀಯಕ್ಕೆ ಅಥವಾ ಒತ್ತಡಕ್ಕೆ ಅವಕಾಶವಿಲ್ಲದೆ ನೋಡಿಕೊಳ್ಳುವದು ಅಗತ್ಯವಾಗಿದೆ.

೮. ಅಧಿಕಾರಿಗಳು ಎನ್.ಎಚ್.ಸಿ ಎನ್.ಎಚ್.ಜಿಯ ಪದಾಧಿಕಾರಿಗಳಿಗೆ ಯೋಜನೆಗಳ ಮಾಹಿತಿಯನ್ನು ಕಾಲಕಾಲಕ್ಕೆ ನೀಡುತ್ತಿರಬೇಕು.

೯. ಜಿಲ್ಲಾ ಮಟ್ಟದಲ್ಲಿ ಈ ಯೋಜನೆಯ ಮೇಲ್ವಿಚಾರಣೆ ಸಂಸ್ಥೆ ಇದ್ದು, ಇದು ಕಾಲಕಾಲಕ್ಕೆ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಬೇಕು ಹಾಗೂ ನಿಗದಿತವಾಗಿರುವ ಗುರಿಯನ್ನು ಮುಟ್ಟುವಂತೆ ಸ್ಥಳೀಯ ಸಂಸ್ಥೆ ನೋಡಿಕೊಳ್ಳುವುದು ಅವಶ್ಯಕವಾಗಿದೆ.

೧೦. ಹುಬ್ಬಳ್ಳಿ-ಧಾರವಾಡದಲ್ಲಿ ಸಿಡಿಎಸ್ ಸಮುದಾಯ ಭವನವನ್ನು ನಿರ್ಮಿಸುವುದರಿಂದ ಮೇಲಿಂದ ಮೇಲೆ ಕಛೇರಿ ಬದಲಾಗುವದು ತಪ್ಪುತ್ತದೆ ಮತ್ತು ಒಂದೇ ಕಡೆ ಸುಲಭವಾಗಿ ಜನರು ಸಂಪರ್ಕ ಸಾಧಿಸಲು ಅನುಕೂಲವಾಗುತ್ತದೆ. ಈ ಬಗ್ಗೆ ಸರ್ಕಾರವು ಗಮನವಹಿಸುವದು ಅಗತ್ಯವಾಗಿದೆ.

೧೧. ಸಿಡಿಎಸ್ ಘಟಕದಲ್ಲಿ ಮೂಲಸೌಕರ್ಯಗಳ ವ್ಯವಸ್ಥೆ ಒದಗಿಸುವದು ಅಗತ್ಯವಾಗಿದೆ (ಕುಡಿಯುವ ನೀರು, ಶೌಚಾಲಯ ಇತ್ಯಾದಿ)

೧೨. ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಲು ನೊಂದಣಿ ಮಾಡಿಸುವುದಕ್ಕೆ ಸಾರ್ವಜನಿಕವಾಗಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಗುತ್ತಿದೆ. ಎಲ್ಲ ಜನರು ಪತ್ರಿಕೆಯನ್ನು ಅಥವಾ ನೋಟಿಸ್ ಬೋರ್ಡ್‌ಗಳನ್ನು ನೋಡಲು ಸಾಧ್ಯವಿಲ್ಲದ್ದರಿಂದ ಪ್ರಚಾರದ ಮೂಲಕ ಐ.ಇ.ಸಿ ಕಾರ್ಯಕ್ರಮವನ್ನು ಸಮರ್ಪಕವಾಗಿ ಜಾರಿಗೊಳಿಸುವುದು ಅಗತ್ಯವಾಗಿದೆ.

೧೩. ಬ್ಯಾಂಕುಗಳು ಸಮಯಕ್ಕೆ ಸರಿಯಾಗಿ ಸಾಲದ ಹಣ ಬಿಡುಗಡೆ ಮಾಡುವಂತೆ ನೋಡಿಕೊಳ್ಳುವುದು.

೧೪. ತರಬೇತಿ ಪಡೆದ ವ್ಯಕ್ತಿಗೆ ಕೈಗಾರಿಕೆ ಅಥವಾ ಸಂಸ್ಥೆಗಳು ಉದ್ಯೋಗವನ್ನು ಕಲ್ಪಿಸಲು ತರಬೇತಿ ನೀಡಿದ ಸಂಸ್ಥೆಗೆ ವಿಳಂಬ ಮಾಡದೇ ಸರ್ಕಾರದಿಂದ ಶೀಘ್ರವಾಗಿ ಅನುದಾನ ಬಿಡುಗಡೆಯಾಗಬೇಕು.

೧೫. ಕೌಶಲ್ಯ ತರಬೇತಿ ಬಗ್ಗೆ ಮಾರ್ಗದರ್ಶಕ ಸಭೆಗಳನ್ನು ಏರ್ಪಡಿಸುವಾಗ ಎನ್.ಎಚ್.ಸಿ, ಸಿ.ಡಿ.ಎಸ್ ಹಾಗೂ ಎನ್.ಎಚ್.ಜಿ ಗಳ ಸದಸ್ಯರನ್ನು ಸಮರ್ಪಕವಾಗಿ ಬಳಸಿಕೊಳ್ಳಬೇಕು ಹಾಗೂ ಮಾಧ್ಯಮ ಪ್ರಚಾರವನ್ನು ಸಹ ಮಾಡಬೇಕು.

